# “ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ: ಸವಾಲುಗಳು ಮತ್ತು ಸಾಧ್ಯತೆಗಳು”

ಕನ್ನಡ ವಿಶ್ವವಿದ್ಯಾಲಯ ಸಮಾಜ ವಿಜ್ಞಾನಗಳ ನಿಕಾಯಕ್ಕೆ
ಪಿಹೆಚ್.ಡಿ. ಪದವಿಗಾಗಿ ಸಲ್ಲಿಸಿರುವ
ಮಹಾಪ್ರಬಂಧ


ಸಂಶೋಧನಾ ವಿದ್ಯಾರ್ಥಿ

**ಪಿ. ಜೈಪ್ರಕಾಶ**
ಎಂ.ಎಸ್.ಡಬ್ಲ್ಯೂ

ಮಾರ್ಗದರ್ಶಕರು

**ಡಾ. ಕೇಶವನ್ ಪ್ರಸಾದ್.ಕೆ**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ






ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
ಹೊಸಪೇಟೆ ತಾ॥ ಬಳ್ಳಾರಿ ಜಿ॥

೨೦೧೭

# “ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ: ಸವಾಲುಗಳು ಮತ್ತು ಸಾಧ್ಯತೆಗಳು”

ಕನ್ನಡ ವಿಶ್ವವಿದ್ಯಾಲಯ ಸಮಾಜ ವಿಜ್ಞಾನಗಳ ನಿಕಾಯಕ್ಕೆ
ಪಿಹೆಚ್.ಡಿ. ಪದವಿಗಾಗಿ ಸಲ್ಲಿಸಿರುವ
ಮಹಾಪ್ರಬಂಧ



ಸಂಶೋಧನಾ ವಿದ್ಯಾರ್ಥಿ
**ಪಿ. ಜೈಪ್ರಕಾಶ**
ಎಂ.ಎಸ್.ಡಬ್ಲ್ಯೂ

ಮಾರ್ಗದರ್ಶಕರು
**ಡಾ. ಕೇಶವನ್ ಪ್ರಸಾದ್.ಕೆ**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ




ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
ಹೊಸಪೇಟೆ ತಾ॥ ಬಳ್ಳಾರಿ ಜಿ॥

೨೦೧೭

# ಮಾರ್ಗದರ್ಶಕರ ದೃಢೀಕರಣ ಪತ್ರ

**ಪಿ.ಜೈಪ್ರಕಾಶ** ಇವರು ಪಿಹೆಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ : ಸವಾಲುಗಳು ಮತ್ತು ಸಾಧ್ಯತೆಗಳು"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು ಈ ಮೊದಲು ಬೇರೆ ಯಾವುದೇ ಪದವಿ ಪಡೆಯಲು ಅಥವಾ ಇನ್ನಿತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

7-8-17

ಸ್ಥಳ : ವಿದ್ಯಾರಣ್ಯ

ದಿನಾಂಕ:

(ಪ್ರೊ. ಕೇಶವನ್ ಪ್ರಸಾದ್ ಕೆ.)

ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

# ಘೋಷಣಾ ಪತ್ರ

"ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ: ಸವಾಲುಗಳು ಮತ್ತು ಸಾಧ್ಯತೆಗಳು" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪ್ರೊ.ಕೇಶವನ್ ಪ್ರಸಾದ್.ಕೆ ಇವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಹೆಚ್.ಡಿ. ಪದವಿಗಾಗಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಬೇರೆ ಯಾವುದೇ ಪದವಿ ಪಡೆಯಲು ಅಥವಾ ಇನ್ನಿತರೆ ಉದ್ದೇಶಗಳಿಗಾಗಲಿ ಎಲ್ಲಿಯೂ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ: 05-08-2017

P. [signature]

ಪಿ.ಜೈಪ್ರಕಾಶ

ಸಂಶೋಧನಾ ವಿದ್ಯಾರ್ಥಿ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

# ಪರಿವಿಡಿ

## ಅಧ್ಯಾಯಗಳ ಒಳನೋಟ

# ಕೋಷ್ಟಕಗಳ ಪಟ್ಟಿ

## ಪ್ರಸ್ತಾವನೆ

ಭಾರತ ಹಲವು ಭಾಷೆ, ಸಂಸ್ಕೃತಿ, ಸಂಪ್ರದಾಯ, ಜಾತಿ ಹೊಂದಿದ ಒಂದು ಬೃಹತ್ ಪ್ರಜಾಪ್ರಭುತ್ವ ರಾಷ್ಟ್ರ. ಇಲ್ಲಿನ ತಳ ಸಮುದಾಯಗಳು ತಮ್ಮ ಹಕ್ಕಿಗಾಗಿ ತಲೆ ತಲಾಂತರದಿಂದಲೂ ಹೋರಾಡುತ್ತಿದ್ದಾರೆ. ಇಂಥವರಲ್ಲಿ ಆದಿವಾಸಿಗಳು ಮುಂಚೂಣಿಯಲ್ಲಿದ್ದಾರೆ. ಇವರು ತಮ್ಮ ಜೀವಿಸುವ ಹಕ್ಕಿಗಾಗಿ ಹೋರಾಟ ಮಾಡುವ ಮನಸ್ಥಿತಿಯನ್ನೇ ಕಳೆದು ಕೊಂಡಂತಹ ಸಂದರ್ಭದಲ್ಲಿ ಆಶಾಕಿರಣವಾಗಿ ಬಂದಿದ್ದೇ 'ಅರಣ್ಯ ಹಕ್ಕುಗಳ ಕಾಯಿದೆ'. ಇದು ಐತಿಹಾಸಿಕ ಅನ್ಯಾಯವನ್ನು ಸರಿಪಡಿಸುತ್ತದೆ. ಮತ್ತು ಅರಣ್ಯ ವಾಸಿಗಳ ಬದುಕನ್ನು ಹಸನಾಗಿಸುತ್ತದೆ ಎಂಬ ವಿಶ್ವಾಸದಿಂದ ತರಲಾಯಿತು. ಆದರೆ ಕಾಯಿದೆಯ ಅನುಷ್ಠಾನ ಪರಿಣಾಮಕಾರಿಯಾಗಿಲ್ಲ ಎಂದು ಸುದ್ದಿಮಾಧ್ಯಮಗಳು ಬಿತ್ತರಿಸಿದವು. ಪ್ರಾಥಮಿಕ ಅಧ್ಯಯನದ ವರದಿಗಳು ಇದಕ್ಕೆ ಪುಷ್ಠಿ ನೀಡಿದವು. ಕುತೂಹಲದ ಕ್ಷೇತ್ರ ಭೇಟಿ ಇದಕ್ಕೆ ಪೂರಕವಾದವು. ಹಾಗಾಗಿ ಇದೊಂದು ಅಧ್ಯಯನ ಸಮಸ್ಯೆಯಾಗಬಹುದು ಎಂಬ ಹಿನ್ನೆಲೆಯಲ್ಲಿ 'ಅರಣ್ಯ ಹಕ್ಕುಗಳ ಕಾಯಿದೆ' ಮತ್ತು 'ಅರಣ್ಯ ಅವಲಂಭಿತ ಆದಿವಾಸಿ'ಗಳನ್ನು ಕೇಂದ್ರವಾಗಿಟ್ಟುಕೊಂಡು ಸಂಶೋಧನೆ ಕೈಗೊಳ್ಳಲಾಗಿದೆ.

ಪ್ರಸ್ತುತ ಸಂಶೋಧನಾ ಅಧ್ಯಯನದ ಶೀರ್ಷಿಕೆ "ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನ; ಸವಾಲುಗಳು ಮತ್ತು ಸಾಧ್ಯತೆಗಳು" ಎಂದು. ಶೀರ್ಷಿಕೆಯಲ್ಲಿರುವ 'ಅರಣ್ಯ', 'ಹಕ್ಕುಗಳು', 'ಕಾಯಿದೆ', 'ಅನುಷ್ಠಾನ', 'ಸವಾಲುಗಳು', ಮತ್ತು 'ಸಾಧ್ಯತೆಗಳು' ಎಂಬ ಪದಗಳನ್ನು ಯಾವ ಅರ್ಥದಲ್ಲಿ ಬಳಸಲಾಗಿದೆ ಎಂಬುದನ್ನು ಇಲ್ಲಿ ಸ್ಪಷ್ಟಪಡಿಸಿಕೊಳ್ಳಲಾಗಿದೆ.

'ಅರಣ್ಯ' ಎಂದರೇನು? ಈ ಪ್ರಶ್ನೆಗೆ ಸರಳವಾಗಿ ಉತ್ತರ ಕಂಡುಕೊಳ್ಳುವುದು ಕಠಿಣ. ಕೆಲವರು ಮರಗಳ ಸಂಕೀರ್ಣವನ್ನೇ ಅರಣ್ಯ ಎಂದು ಕರೆಯುತ್ತಾರೆ. ಮತ್ತೆ ಕೆಲವರು ವಿವಿಧ ಜಾತಿಯ ಮರ, ಗಿಡ, ಬಳ್ಳಿ, ಇದ್ದು ಹಲವು ಜಾತಿಯ ಪ್ರಾಣಿ, ಪಕ್ಷಿ ಸಂಕುಲ ಒಟ್ಟಾಗಿ ಬಾಳ್ವೆ ನೆಡೆಸುವಂತಹ ಪ್ರದೇಶವನ್ನೇ ಅರಣ್ಯ ಎಂದು ಕರೆದಿರುವರು. ವಿವರವಾಗಿ ನೋಡುವುದಾದರೆ "ಅರಣ್ಯವೆಂದರೆ ಅದು ಕೇವಲ ಮರಗಿಡಗಳ ಕೂಟವಲ್ಲ. ಗಿಡ, ಮರ, ಅಣಬೆ, ಆರ್ಕಿಡ್, ಮುಳ್ಳು, ಪೊದೆ, ಬಳ್ಳಿ, ಬಿದಿರು, ಬೆತ್ತ, ಬಿಳಲು ಮುಂತಾದ ಸಸ್ಯ ಸಂಕುಲವಲ್ಲದೆ, ಮರಗಿಡಗಳನ್ನು ಆಶ್ರಯಿಸಿ ಬದುಕುವ ನೂರಾರು ಬಗೆಯ ಪ್ರಾಣಿ, ಪಕ್ಷಿ, ಸಸ್ತನಿ, ಕ್ರಿಮಿ, ಕೀಟಗಳ ಒಕ್ಕೂಟವೇ ಅರಣ್ಯ. ಈ ಎಲ್ಲ ಜೀವಿಗಳಂತೆ ಮನುಷ್ಯನೂ ಒಂದು ಜೀವಿಯಾಗಿ ಸಹಸ್ರಾರು ವರ್ಷಗಳಿಂದ ಕಾಡಿನಲ್ಲಿ ಬದುಕಿ, ಪರಂಪರಾಗತ ಬದುಕನ್ನು ರೂಢಿಸಿಕೊಂಡು ಬಂದಿದ್ದಾನೆ. ಇವೆಲ್ಲವೂ ಸೇರಿ ಒಂದು ಅರಣ್ಯ."[೧] ಹಾಗಾಗಿ ಅರಣ್ಯ ಎಂದರೆ ಮಾನವನನ್ನು ಹೊರತು ಪಡಿಸಲಾಗದು.

ಇಂತಹ ಅರಣ್ಯದಲ್ಲಿ ವಾಸಿಸುತ್ತಿರುವ ಆದಿವಾಸಿಗಳ ಬಗೆಗೆ ಅಧ್ಯಯನ ಮಾಡಬೇಕಾದರೆ ಅರಣ್ಯವನ್ನು ಅವಲಂಭಿಸಿರುವ ಎಲ್ಲಾ ಜೀವಿಗಳ ಬಗೆಗೆ ಅರಿವು ಮತ್ತು ಕಾಳಜಿ ಅವಶ್ಯಕವಾದುದಾಗಿದೆ.

'ಹಕ್ಕುಗಳು' ಎಂಬ ಪದವನ್ನು ಬೇರೆ ಬೇರೆ ಅರ್ಥದಲ್ಲಿ ಅರ್ಥೈಸುವುದುಂಟು. ನೈತಿಕವಾಗಿ ಯಾವುದು ಸರಿಯಾಗಿರುವುದೂ ಅದು ಎನ್ನುವವರಿದ್ದಾರೆ. ನೈತಿಕ ಅಥವಾ ಕಾನೂನು ಅರ್ಹತೆಯನ್ನು ಹೊಂದುವುದೇ ಹಕ್ಕು ಎಂದೂ ಹೇಳಲಾಗುತ್ತದೆ. ಒಂದು ಗುಂಪು ಅಥವಾ ಪಕ್ಷದ ಪರವಾಗಿ ಹೊಂದಿರುವ ಅಭಿಪ್ರಾಯ ಮತ್ತು ಬಂಡವಾಳಶಾಹಿ ತತ್ವಗಳನ್ನು ಬೆಂಬಲಿಸುವುದು ಎಂದೂ ಹೇಳುತ್ತಾರೆ. ಒಟ್ಟಾರೆ ಹಕ್ಕುಗಳು ಎಂದರೆ ಕಾನೂನಾತ್ಮಕ, ಸಾಮಾಜಿಕ ಅಥವಾ ನೈತಿಕ ತತ್ವದ ಆಧಾರದ ಮೇಲೆ ಹೊಂದಿರುವ ಸ್ವಾತಂತ್ರ್ಯ ಅಥವಾ ಅರ್ಹತೆ ಎಂದು ಅರ್ಥೈಸಿಕೊಳ್ಳಲಾಗಿದೆ.

ಮಾನವನು ಭೂಮಿಯ ಮೇಲೆ ವಾಸ ಮಾಡುವ ಪ್ರಾಥಮಿಕ ಹಕ್ಕಿನಿಂದ ಹಿಡಿದು ಹಲವು ಹಕ್ಕುಗಳನ್ನು ಅಂತರಾಷ್ಟ್ರೀಯ ಸಂಸ್ಥೆಗಳಿಂದ ಮತ್ತು ರಾಜ್ಯದಿಂದ ಪಡೆದಿದ್ದಾನೆ. ಇವುಗಳ ಉಲ್ಲಂಘನೆಯಾದರೆ ನ್ಯಾಯಾಲಯದ ಮೊರೆ ಹೋಗಬಹುದಾಗಿದೆ. ಮಾನವ ಹಕ್ಕುಗಳಿವೆ, ಮಹಿಳಾ ಹಕ್ಕುಗಳಿವೆ, ಮಕ್ಕಳ ಹಕ್ಕುಗಳಿವೆ, ವೃದ್ಧರ ಮತ್ತು ವಿಕಲಚೇತನರ ಹಕ್ಕುಗಳಿವೆ. ಈ ಎಲ್ಲಾ ಹಕ್ಕುಗಳೂ ಕಾನೂನಿನ ರಕ್ಷಣೆ ಪಡೆದಿವೆ. ಅಷ್ಟೇ ಏಕೆ ಭಾರತದ ಸಂವಿಧಾನದ ಮೂರನೆ ಭಾಗದಲ್ಲಿ ಆರು ಮೂಲಭೂತ ಹಕ್ಕುಗಳನ್ನು ಭಾರತದ ಪ್ರಜೆಗಳಿಗೆ ಕೊಡಲಾಗಿದೆ. ಈ ಎಲ್ಲಾ ಹಕ್ಕುಗಳನ್ನು ಭಾರತೀಯ ಆದಿವಾಸಿ ಪ್ರಜೆಗಳು ಹೊಂದಿರುತ್ತಾರೆ. ಇವುಗಳ ಜೊತೆಗೆ ಅರಣ್ಯ ಹಕ್ಕುಗಳನ್ನೂ ಇವರು ಪಡೆದಿರುತ್ತಾರೆ. ಇವು ಕಾನೂನಾತ್ಮಕವಾಗಿ ನೀಡಲ್ಪಟ್ಟಿವೆ. ಯಾರು ಅರಣ್ಯವನ್ನೇ ಅವಲಂಭಿಸಿ ಜೀವನ ನಡೆಸುತ್ತಿದ್ದಾರೂ ಅವರಿಗೆ ಸಿಗುವಂತಹುಗಳಾಗಿವೆ. ಇದಕ್ಕಾಗಿ ಕಾಯಿದೆಯನ್ನು ರೂಪಿಸಲಾಗಿದೆ.

ಕಾಯಿದೆ ಎಂದರೇನು? ಎಂಬ ಪ್ರಶ್ನೆಗೆ ಸರಳವಾಗಿ ನೋಡುವುದಾದರೆ 'ಒಂದು ನಿರ್ಧಿಷ್ಟ ದೇಶ ಅಥವಾ ಸಮುದಾಯವನ್ನು ಗುರುತಿಸಿ ಕ್ರಮಪಡಿಸಿದ ಕ್ರಿಯೆಯನ್ನು ಅಲ್ಲಿಯ ಜನರು ಅನುಸರಿಸುವಂತೆ ಮಾಡುವುದು ಮತ್ತು ತಪ್ಪಿದರೆ ಶಿಕ್ಷೆಗೆ ಗುರಿಪಡಿಸುವುದಾಗಿದೆ.' ಇಲ್ಲಿ ಅರಣ್ಯ ಹಕ್ಕುಗಳ ಕಾಯಿದೆಯನ್ನು ಭಾರತದ ಆದಿವಾಸಿ ಸಮುದಾಯಗಳ ಅಭಿವೃದ್ಧಿಯ ಹಿನ್ನೆಲೆಯಲ್ಲಿ ರಚಿಸಲಾಗಿದೆ. ಇದರ ಪ್ರಕಾರ ಯಾರು ಅರಣ್ಯದಲ್ಲಿ ತಲೆತಲಾಂತರದಿಂದ ವಾಸ ಮಾಡುತ್ತಾ ಬಂದಿದ್ದಾರೋ ಮತ್ತು ಅರಣ್ಯವನ್ನು ತಮ್ಮ ಜೀವನಕ್ಕೆ ಅವಲಂಭಿಸಿದ್ದಾರೋ ಅವರು ಅರಣ್ಯದ ಉಪ ಉತ್ಪನ್ನಗಳನ್ನು ಬಳಸುವ ಹಕ್ಕನ್ನು ಹೊಂದಿದ್ದಾರೆ. ಇದನ್ನು ಅವರಿಗೆ ಬಿಟ್ಟುಕೊಡಬೇಕಾಗಿದೆ. ಏಕೆಂದರೆ ಪ್ರಭುತ್ವ ಆದಿವಾಸಿಗಳಿಂದ ಬಲವಂತವಾಗಿ ಅರಣ್ಯವನ್ನು ಕಿತ್ತುಕೊಂಡಿದೆ. ಈ ಬಿಟ್ಟು

ಕೊಡುವ ವಿಚಾರ ಅಂದರೆ 'ಅನುಷ್ಠಾನ' ಏಕೆ ವಿಳಂಭವಾಗುತ್ತಿದೆ ಎಂಬುದು ಇಲ್ಲಿ ಮಹತ್ವದ ಅಂಶವಾಗಿದೆ.

'ಅನುಷ್ಠಾನ' ಎಂಬ ಪದ 'ಕಾರ್ಯಗತಗೊಳಿಸುವುಕೆ' ಅಥವಾ 'ಆಚರಣೆ ಮಾಡುವುದು' ಎಂಬರ್ಥದಲ್ಲಿ ಬಳಕೆಯಲ್ಲಿದೆ. ಪ್ರಸ್ತುತ ಸಂಶೋಧನೆಯಲ್ಲಿ ಅರಣ್ಯ ಹಕ್ಕುಗಳ ಕಾಯಿದೆಯು ಕಾರ್ಯಗತಗೊಂಡಿರುವುದನ್ನು ಅಧ್ಯಯನಕ್ಕೆ ಒಳಪಡಿಸಿರುವುದರಿಂದ ಶೀರ್ಷಿಕೆಯಲ್ಲಿ ಅನುಷ್ಠಾನ ಎಂದು ಬಳಸಲಾಗಿದೆ.

'ಸವಾಲು' ಈ ಪದ ಬಹಳಷ್ಟು ಸಂಕೀರ್ಣತೆಯಿಂದ ಕೂಡಿದೆ. ಇದನ್ನು 'ಸಮಸ್ಯೆ' ಎಂಬ ಪದಕ್ಕೆ ಪರ್ಯಾಯವಾಗಿ ಕೆಲವೆಡೆ ಬಳಸುತ್ತಾರೆ. ಪ್ರಸ್ತುತ ಅಧ್ಯಯನದಲ್ಲಿ 'ಆಕ್ಷೇಪಣೆ', 'ವಿರೋಧ', 'ಕಗ್ಗಂಟು' ಅಥವಾ 'ಇಕ್ಕಟ್ಟು' ಈ ಪದಗಳ ಅರ್ಥದ ಹಿನ್ನೆಲೆಯಲ್ಲಿ ಬಳಸಲಾಗಿದೆ. ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನಕ್ಕೆ ಹಲವು ವಿರೋಧಗಳು, ಆಕ್ಷೇಪಣೆಗಳು ವ್ಯಕ್ತವಾಗಿವೆ. ಹಾಗಾಗಿ ಸಮುದಾಯಗಳು ಮತ್ತು ಅಧಿಕಾರಿವರ್ಗಗಳಲ್ಲಿ ಇಕ್ಕಟ್ಟಿನ ಪರಿಸ್ಥಿತಿ ನಿರ್ಮಾಣವಾಗಿದೆ. ಈ ಹಿನ್ನೆಲೆಯಲ್ಲಿ ಸಂಶೋಧನಾ ಶೀರ್ಷಿಕೆಯಲ್ಲಿ 'ಸವಾಲುಗಳು' ಎಂಬ ಪದ ಉಪಯೋಗಿಸಲಾಗಿದೆ.

'ಸಾಧ್ಯತೆ' ಎಂಬ ಪದವು 'ಶಕ್ಯತೆ', 'ಸಂಭವನೀಯತೆ', 'ಮಾಡಬಹುದಾಗಿರುವಿಕೆ', 'ನೆರವೇರಿಸಬಹುದಾಗಿರುವಿಕೆ', ಎಂಬ ಧನಾತ್ಮಕ ಅರ್ಥವನ್ನು ಹೊಂದಿದೆ. ಸಂಶೋಧಕನಿಗೆ ಇತ್ಯಾತ್ಮಕ ಮನೋಭಾವ ಇದ್ದಲ್ಲಿ ಎಂತಹುದೇ ಸಂದರ್ಭದಲ್ಲಿ ಪರಿಹಾರಗಳನ್ನು ಕಂಡುಕೊಳ್ಳುತ್ತಾನೆ. ಮತ್ತು ಇದು ಅವಶ್ಯಕವಾದುದು. ಈ ಹಿನ್ನೆಲೆಯಲ್ಲಿ ಸಾಧ್ಯತೆಗಳು ಎಂಬ ಪದ ಬಳಕೆಗೆ ಪ್ರೇರಕವಾಗಿದೆ.

"ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ: ಸವಾಲುಗಳು ಮತ್ತು ಸಾಧ್ಯತೆಗಳು" ಎಂಬ ಶೀರ್ಷಿಕೆಯ ಪ್ರಸ್ತುತ ಅಧ್ಯಯನವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ.

ಮೊದಲನೇ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ವ್ಯಾಪ್ತಿ, ಅಧ್ಯಯನದ ಉದ್ದೇಶಗಳು, ಅಧ್ಯಯನದ ಮಹತ್ವ, ಅಧ್ಯಯನದ ಪ್ರಸ್ತುತತೆ, ಸಂಶೋಧನಾ ವಿನ್ಯಾಸ, ಅಧ್ಯಯನದ ಪ್ರಾಕಲ್ಪನೆಗಳು, ಅಧ್ಯಯನದ ಮಿತಿಗಳು ಮತ್ತು ಅಧ್ಯಯನದ ಸಾಹಿತ್ಯ ಪರಾಮರ್ಶೆಯನ್ನು ನೀಡಲಾಗಿದೆ.

ಎರಡನೇ ಅಧ್ಯಾಯ 'ಅರಣ್ಯ ಮತ್ತು ಆದಿವಾಸಿಗಳು'. ಇಲ್ಲಿ ಅಧ್ಯಯನ ಪ್ರದೇಶದ ಭೌಗೋಳಿಕ ಹಿನ್ನೆಲೆ, ಸೋಲಿಗರು, ಜೇನು ಕುರುಬರು, ಬೆಟ್ಟ ಕುರುಬರು ಮತ್ತು ಯರವ ಆದಿವಾಸಿ ಸಮುದಾಯಗಳ ಜೀವನ ಶೈಲಿ, ಪಾರಂಪರಿಕ ಜ್ಞಾನ ಮತ್ತು ಸಮಸ್ಯೆಗಳನ್ನು ಮಂಡಿಸಲಾಗಿದೆ.

ಮೂರನೇ ಅಧ್ಯಾಯ 'ಅರಣ್ಯ ಹಕ್ಕುಗಳ ಕಾಯಿದೆ ರಚನೆಯ ಹಿನ್ನೆಲೆ ಮತ್ತು ಅನುಷ್ಠಾನ' ಪ್ರಸ್ತುತ ಅಧ್ಯಾಯವು ಭಾರತದಲ್ಲಿ ಅರಣ್ಯಕ್ಕೆ ಸಂಬಂಧಿಸಿದ ಕಾಯಿದೆಗಳ ಇತಿಹಾಸ, ಅರಣ್ಯ ಹಕ್ಕುಗಳ ಮಸೂದೆ (ಠರಾವು) ಕುರಿತ ಚರ್ಚೆ, ೨೦೦೬ ರ ಅರಣ್ಯ ಹಕ್ಕುಗಳ ಕಾಯಿದೆ ಮತ್ತು ಇದರ ಉದ್ದೇಶಗಳು, ಕಾಯಿದೆಯ ಸಾರ್ವಜನಿಕ ಚರ್ಚೆ, ಕಾಯಿದೆ ಅನುಷ್ಠಾನಕ್ಕೆ ಕರ್ನಾಟಕ ಸರ್ಕಾರ ತೆಗೆದುಕೊಂಡ ಕ್ರಮಗಳು, ಅನುಷ್ಠಾನದ ಸ್ಥಿತಿ ಮತ್ತು ಅಧ್ಯಯನ ಕ್ಷೇತ್ರ ವ್ಯಾಪ್ತಿಯಲ್ಲಿ ಕಾಯಿದೆ ಅನುಷ್ಠಾನ ಇವುಗಳನ್ನು ವಿಸ್ತೃತವಾಗಿ ಚರ್ಚಿಸಲಾಗಿದೆ.

ನಾಲ್ಕನೇ ಅಧ್ಯಾಯ 'ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದ ಸವಾಲುಗಳು' ಇಲ್ಲಿ ಅರಣ್ಯ ಇಲಾಖೆ, ಪುನರ್ವಸತಿ ಯೋಜನೆ ಮತ್ತು ಆದಿವಾಸಿಗಳು, ಅರಣ್ಯ ಇಲಾಖೆ ಅಧಿಕಾರಿಗಳು ಮತ್ತು ರಾಜಕಾರಣಿಗಳು, ಅರಣ್ಯ ಮತ್ತು ಪರಿಸರ ಸಚಿವಾಲಯ ಹಾಗೂ ಅರಣ್ಯ ಹಕ್ಕುಗಳ ಕಾಯಿದೆ, ಲೋಕೋಪಯೋಗಿ ಇಲಾಖೆ, ಕಂದಾಯ ಇಲಾಖೆ, ಸಮಾಜ ಕಲ್ಯಾಣ ಇಲಾಖೆಯ ಗಿರಿಜನರ ಅಭಿವೃದ್ಧಿಯ ಪರಿಕಲ್ಪನೆ, ವಿದ್ಯುತ್ ಮಂಡಳಿ ನೀತಿ ನಿಯಮಗಳು, ಬುಡಕಟ್ಟು ಸಂಘಟನೆಗಳ ಮೂಲ ಬೇಡಿಕೆಗಳು, ಸ್ವಯಂ ಸೇವಾ ಸಂಸ್ಥೆಗಳ ದೃಷ್ಟಿಕೋನ, ರಾಷ್ಟ್ರೀಯ ಅರಣ್ಯ ಸಂರಕ್ಷಣಾ ಕಾಯಿದೆ, ರಾಷ್ಟ್ರೀಯ ಮರಗಳ ಸಂರಕ್ಷಣಾ ಕಾಯಿದೆ, ರಾಷ್ಟ್ರೀಯ ಉದ್ಯಾನವನಗಳು ಮತ್ತು ಅಭಯಾರಣ್ಯಗಳು, ರಾಷ್ಟ್ರೀಯ ವನ್ಯಪ್ರಾಣಿ ಸಂರಕ್ಷಣಾ ಕಾಯಿದೆ, ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದ ಪ್ರಕ್ರಿಯೆಗಳು ಮತ್ತು ಎದುರಾಗುವ ಅಡೆತಡೆಗಳು. ಇವುಗಳ ಕುರಿತು ವಿಷಯ ಮಂಡನೆ ಮಾಡಲಾಗಿದೆ.

ಐದನೇ ಅಧ್ಯಾಯ 'ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದ ಸಾಧ್ಯತೆಗಳು'. ನಾಲ್ಕನೇ ಅಧ್ಯಾಯದಲ್ಲಿ ಕಂಡುಕೊಂಡ ಹಲವು ಸವಾಲುಗಳಿಗೆ ಪ್ರಸ್ತುತ ಅಧ್ಯಾಯದಲ್ಲಿ ಪರಿಹಾರಗಳನ್ನು ಕಂಡುಕೊಳ್ಳಲಾಗಿದೆ. ಕಾಯಿದೆಯ ಅನುಷ್ಠಾನದ ಸಾಧ್ಯತೆಗಳನ್ನು ವ್ಯಕ್ತಪಡಿಸಲಾಗಿದೆ.

ಅಧ್ಯಾಯ ಆರು 'ಸಮಾರೋಪ' ಇಲ್ಲಿ ಅಧ್ಯಯನದಿಂದ ಕಂಡುಕೊಂಡ ಪ್ರಮುಖ ಫಲಿತಗಳನ್ನು ನಮೂದಿಸಿದೆ. ಮತ್ತು ಸಲಹೆಗಳನ್ನು ಸೂಚಿಸಲಾಗಿದೆ. ಜೊತೆಗೆ ಅಧ್ಯಯನದ ಸಮಾರೋಪ ಮಾಡಲಾಗಿದೆ.

### ೧.೧. ಅಧ್ಯಯನದ ವ್ಯಾಪ್ತಿ (The Scope of the Present Study)

ಅರಣ್ಯ ಹಕ್ಕುಗಳ ಕಾಯಿದೆಯು ಯಾವುದೇ ನಿರ್ಧಿಷ್ಟ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರದೆ ಇಡೀ ದೇಶಕ್ಕೆ ಅನ್ವಯಿಸುವಂತಹದ್ದು. ಈ ನಿಟ್ಟಿನಲ್ಲಿ ನೋಡಿದಾಗ ಅಧ್ಯಯನದ ವ್ಯಾಪ್ತಿ ವಿಶಾಲವಾಗಿರುತ್ತದೆ. ಆದರೆ ಅಧ್ಯಯನದ ಉದ್ದೇಶದಿಂದ

ಕರ್ನಾಟಕದಲ್ಲಿ ಅರಣ್ಯದ ಅಂಚಿನಲ್ಲಿ ಮತ್ತು ಅರಣ್ಯದಲ್ಲಿಯೇ ವಾಸಿಸುತ್ತಿರುವ ಪ್ರಮುಖ ಬುಡಕಟ್ಟುಗಳನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಇದಕ್ಕಾಗಿ ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಚಾಮರಾಜನಗರ ಜಿಲ್ಲೆಯ ಯಳಂದೂರು, ಕೊಳ್ಳೆಗಾಲ, ಗುಂಡ್ಲುಪೇಟೆ ಮತ್ತು ಚಾಮರಾಜನಗರ ತಾಲ್ಲೂಕುಗಳನ್ನು ಪರಿಗಣಿಸಲಾಗಿದೆ. ಹಾಗೆಯೇ ಮೈಸೂರು ಜಿಲ್ಲೆಯ ಮೈಸೂರು, ಹೆಗ್ಗಡದೇವನಕೋಟೆ, ಹುಣಸೂರು, ನಂಜನಗೂಡು ಮತ್ತು ಪಿರಿಯಾಪಟ್ಟಣ ತಾಲ್ಲೂಕುಗಳನ್ನು ಪರಿಗಣಿಸಲಾಗಿದೆ. ಇವೆರಡೂ ಜಿಲ್ಲೆಗಳಲ್ಲಿ ಕಂಡು ಬರುವ ಜೇನುಕುರುಬರು, ಬೆಟ್ಟಕುರುಬರು, ಯರವರು ಮತ್ತು ಸೋಲಿಗರನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ಜಾರಿಯಾದ ನಂತರ ಎಷ್ಟು ಕುಟುಂಬಗಳಿಗೆ ವೈಯಕ್ತಿಕ ಹಕ್ಕು ನೀಡಲಾಗಿದೆ. ಮತ್ತು ಎಷ್ಟು ಹಾಡಿ/ಪೋಡು/ಕಾಲೊನಿಗಳಿಗೆ ಸಮುದಾಯ ಹಕ್ಕುಗಳನ್ನು ಕೊಡಲಾಗಿದೆ ಎಂಬುದರ ಜೊತೆಗೆ ಇವುಗಳನ್ನು ಕೊಡುವಲ್ಲಿ ನಿಜವಾಗಿಯೂ ಎದುರಾಗಿರುವ ಸಮಸ್ಯೆಗಳು ಮತ್ತು ಗೊಂದಲಗಳನ್ನು ಕುರಿತು ಅಧ್ಯಯನ ಮಾಡುವುದು. ಜೊತೆಗೆ ಪರಿಣಾಮಕಾರಿ ಅನುಷ್ಠಾನದ ಸಾಧ್ಯತೆಗಳನ್ನು ಕಂಡುಕೊಳ್ಳುವುದಾಗಿದೆ. ಒಟ್ಟಾರೆ ಪ್ರದೇಶ ವ್ಯಾಪ್ತಿ, ಸಮುದಾಯ ವ್ಯಾಪ್ತಿ ಮತ್ತು ವಿಷಯ ವ್ಯಾಪ್ತಿಯನ್ನು ಪ್ರಸ್ತುತ ಅಧ್ಯಯನವು ಒಳಗೊಂಡಿದೆ.

### ೧.೨. ಅಧ್ಯಯನದ ಉದ್ದೇಶಗಳು (The Objectives of the Study)

೧) ಅರಣ್ಯ ಹಕ್ಕುಗಳ ಕಾಯಿದೆಯಿಂದ ಆದಿವಾಸಿ ಸಮುದಾಯಗಳ (ಅರಣ್ಯವಾಸಿ ಬುಡಕಟ್ಟುಗಳು) ಮೇಲಾಗಿರುವ ಪರಿಣಾಮಗಳನ್ನು ತಿಳಿದುಕೊಳ್ಳುವುದು.

೨) ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನದಲ್ಲಿ ಅರಣ್ಯ ಇಲಾಖೆ, ಕಂದಾಯ ಇಲಾಖೆ, ಸಮಾಜ ಕಲ್ಯಾಣ ಇಲಾಖೆಗಳಲ್ಲಿ ಎದುರಾಗಿರುವ ಗೊಂದಲಗಳನ್ನು ಅರಿಯುವುದು.

೩) ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನ ಆದಿವಾಸಿ ಸಮುದಾಯಗಳ ಅಭಿವೃದ್ಧಿಗೆ ಪೂರಕವೋ ಅಥವಾ ಮಾರಕವೋ ಎಂಬುದನ್ನು ಅರ್ಥಮಾಡಿಕೊಳ್ಳುವುದು.

### ೧.೩. ಅಧ್ಯಯನದ ಮಹತ್ವ (Importance of the Study)

ಭಾರತಕ್ಕೆ ಸ್ವಾತಂತ್ರ್ಯ ಬಂದು ದಶಕಗಳೇ ಕಳೆದಿವೆ. ಆದಾಗ್ಯೂ ತಳ ಸಮುದಾಯಗಳ ಬದುಕು ಶೋಚನೀಯವಾಗಿದೆ. ಮೂಲನಿವಾಸಿಗಳಾದ ಆದಿವಾಸಿಗಳ ಬದುಕು ಮತ್ತು ಬವಣೆ ತೀರಾ ನಿಕೃಷ್ಟವಾಗಿದೆ. ಇದನ್ನು ಮನಗಂಡ ಸರ್ಕಾರ ಆದಿವಾಸಿಗಳ

ಅಭಿವೃದ್ಧಿಗಾಗಿ ಕಾಲಕಾಲಕ್ಕೆ ಹಲವಾರು ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತಂದಿದೆ. ಭೂಮಿ ನೀಡುವಂತಹ ಹಲವು ಯೋಜನೆಗಳನ್ನೂ ಹಾಕಿಕೊಳ್ಳಲಾಗಿದೆ. ಆದರೆ ಈ ಯಾವುದೇ ಯೋಜನೆಗಳಿಗೆ ಕಾನೂನಾತ್ಮಕ ನೆರವು ಇರದಿದ್ದುದರಿಂದ ಆದಿವಾಸಿಗಳ ಅಭಿವೃದ್ಧಿ ಮರೀಚಿಕೆಯಾಗಿಯೇ ಉಳಿದಿದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಕಾನೂನಾತ್ಮಕವಾಗಿ ಆದಿವಾಸಿಗಳ ಪಾರಂಪರಿಕ ಹಕ್ಕುಗಳನ್ನು ನೀಡುವ ಉದ್ದೇಶದಿಂದ ಕೇಂದ್ರ ಸರ್ಕಾರವು ೨೦೦೬ ರಲ್ಲಿ ರಾಷ್ಟ್ರೀಯ ಆದಿವಾಸಿ ನೀತಿಯನ್ನು ಜಾರಿಗೆ ತಂದಿತು. ಈ ಕಾಯಿದೆಯಿಂದ ಆದಿವಾಸಿಗಳ ಪಾರಂಪರಿಕ ಆಸ್ತಿ ಹಕ್ಕು ದೊರೆಯುವ ಮೂಲಕ ಅವರ ಆರ್ಥಿಕ ಸ್ಥಿತಿ ಸುಧಾರಿಸುತ್ತದೆ. ಹಾಗೂ ಅವರ ಬದುಕಿನ ಎಲ್ಲಾ ಬವಣೆ ದೂರವಾಗುವುದು ಎಂಬ ಆಶಯವನ್ನು ಹೊಂದಲಾಗಿದೆ. ಈ ದೃಷ್ಟಿಯಿಂದ ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದಲ್ಲಿನ ಸವಾಲುಗಳು ಮತ್ತು ಸಾಧ್ಯತೆಗಳ ಕುರಿತು ವಿವರಣಾತ್ಮಕ ಅಧ್ಯಯನವು ಬಹಳ ಮಹತ್ವದ್ದಾಗಿದೆ. ಅಲ್ಲದೆ,

- ಸ್ವಾತಂತ್ರ್ಯಾನಂತರದಲ್ಲಿ ಬುಡಕಟ್ಟು ಸಮುದಾಯಗಳ ಸಮಗ್ರ ಅಭಿವೃದ್ಧಿಗೆಂದು ರಚಿಸಿದ ಅನೇಕ ಸಮಿತಿಗಳು ನೀಡಿದ ಶಿಫಾರಸ್ಸುಗಳು ಅನುಷ್ಠಾನಗೊಳ್ಳಲೇ ಇಲ್ಲ. ಆ ಹಿನ್ನೆಲೆಯಲ್ಲಿ ೨೦೦೬ ರ ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನದ ಫಲಿತವನ್ನು ಕಂಡುಕೊಳ್ಳಬೇಕಿದೆ.
- ಬಹುಮುಖ್ಯವಾಗಿ ಆದಿವಾಸಿಗಳ ಪಾರಂಪರಿಕ ಜ್ಞಾನ ಮುಂದುವರಿಕೆ. ಭಾವನಾತ್ಮಕ ಆಸ್ತಿ ಹಕ್ಕುಗಳ ರಕ್ಷಣೆ. ಅನಿವಾರ್ಯವೆಂದು ಕಂಡು ಬಂದಲ್ಲಿ ಮಾತ್ರ ಸ್ಥಳಾಂತರ ಮತ್ತು ಪುನರ್ವಸತಿಗೆ ಕ್ರಮವಹಿಸುವುದು. ಶಿಕ್ಷಣ, ಆರೋಗ್ಯ, ಭಾಷೆ, ಭೂ-ಪರಾಧಿನತೆ ವಿಷಯಗಳ ಬಗೆಗೆ ಅರಣ್ಯವಾಸಿಗಳ ಪರವಾದ ಧೋರಣೆಯನ್ನು ಹೊಂದಿರುವುದು ಗುಣಾತ್ಮಕ ಅಂಶವಾಗಿದೆ. ಈ ಹಿನ್ನೆಲೆಯಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದ ಸತ್ಯತೆಯನ್ನು ಅರಿಯಬೇಕಿದೆ.
- ಅರಣ್ಯ ಹಕ್ಕುಗಳ ಕಾಯಿದೆ ೨೦೦೬ ರ ಅನುಷ್ಠಾನವನ್ನು ಕುರಿತ ಅಧ್ಯಯನವು ಮುಂದಿನ ಅಧ್ಯಯನಕಾರರಿಗೆ ಪೂರಕ ಮಾಹಿತಿಯನ್ನು ಹೊದಗಿಸುವುದು. ಹಾಗೆಯೇ ಕಾಯಿದೆಗಳನ್ನು ಅನುಷ್ಠಾನ ಮಾಡುವವರಿಗೆ ಯಾವ ರೀತಿ ಎಡರು ತೊಡರುಗಳು ಕಂಡು ಬರುತ್ತವೆ ಎಂಬ ದೃಷ್ಟಿಯಿಂದಲೂ ಅಧ್ಯಯನ ಬೇಕಾಗಿದೆ.
- ಆದಿವಾಸಿ ಸಮುದಾಯಗಳು ಅನಕ್ಷರಸ್ಥರಾಗಿದ್ದಾರೆ. ಆದರೆ ಕಾಯಿದೆಯ ಬಗ್ಗೆ ಅಂತರ್ಜಾಲದಲ್ಲಿ ಮಾಹಿತಿ ಪ್ರಕಟವಾಗಿದೆ. ಆದಿವಾಸಿ ಸಮುದಾಯ ಇದನ್ನು ಅರಿತುಕೊಳ್ಳಲು ಸಾಧ್ಯವಾಗುತ್ತಿಲ್ಲ. ಹಾಗಾಗಿ ಕಾಯಿದೆ ೨೦೦೬ರಲ್ಲಿ ಜಾರಿಗೆ ಬಂದಿದೆ. ಆದರೆ ಯಶಸ್ವಿಯಾಗಿ ಅನುಷ್ಠಾನ ಮಾಡಲಾಗಿದೆಯೇ? ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳಲು.

➢ ಆದಿವಾಸಿ ಸಮುದಾಯಗಳ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಮತ್ತು ಶೈಕ್ಷಣಿಕ ಅಂಶಗಳ ಮೇಲೆ ಈ ಕಾಯಿದೆ ವ್ಯತಿರಿಕ್ತ ಪರಿಣಾಮ ಬೀರುತ್ತದೆ. ಆದರೆ ಆದಿವಾಸಿ ಸಮುದಾಯವನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೆ ಕಾಯಿದೆ ರಚಿಸಿ ಅನುಷ್ಠಾನಗೊಳಿಸಲು ಪ್ರಯತ್ನಿಸಲಾಗುತ್ತಿದೆ.

➢ ಆದಿವಾಸಿ ಸಮುದಾಯಗಳ ಸಮಗ್ರ ಬೆಳವಣಿಗೆಗೆ ನೆರವಾಗಲು ಸರ್ಕಾರ ಮತ್ತು ಸರ್ಕಾರೇತರ ಸೇವಾ ಸಂಸ್ಥೆಗಳಿಗೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಮತ್ತು ಆದಿವಾಸಿ ಸಮುದಾಯಗಳ ಮೇಲೆ ಪ್ರಭಾವ ಬೀರುವ ಇನ್ನಾವುದೇ ಕಾಯಿದೆ ರಚಿಸುವಾಗ ಗಮನಿಸಬೇಕಾದ ಅಂಶಗಳ ಮೇಲೆ ಗಮನಹರಿಸುವುದು ಅವಶ್ಯಕವಾಗಿದೆ.

➢ ಆದಿವಾಸಿಗಳನ್ನು ಸ್ಥಳಾಂತರಿಸಿದ ಮೇಲೆ ಅವರ ಪಾರಂಪರಿಕ ವೈದ್ಯಕೀಯ ಜ್ಞಾನವನ್ನು ಹೇಗೆ ರಕ್ಷಿಸಬಹುದು. ಕಾಡಿನಿಂದ ಹೊರ ಹಾಕಲ್ಪಟ್ಟರೆ ಅವರಿಗೆ ಅರಣ್ಯದ ಪರಿಚಯವೇ ಇಲ್ಲದಂತಾಗಿ ಪಾರಂಪರಿಕ ಜ್ಞಾನ ಸಂಪೂರ್ಣ ನಾಶವಾಗುವ ಸಾಧ್ಯತೆ ಇದೆ. ಅಲ್ಲದೆ ಇವರ ಪಾರಂಪರಿಕ ಭಾವನಾತ್ಮಕ ಆಸ್ತಿಗಳನ್ನು ಯಾವ ರೀತಿ ರಕ್ಷಿಸಲಾಗುವುದು ಎಂಬ ಅಂಶದ ಮೇಲೆ ಹೆಚ್ಚು ಗಮನಹರಿಸಿಲ್ಲ ಈ ಮೇಲಿನ ಎಲ್ಲಾ ಅಂಶಗಳ ದೃಷ್ಟಿಯಿಂದ ಇದರ ಅಧ್ಯಯನ ಮಹತ್ವದ್ದೆನಿಸಿದೆ.

### ೧.೪. ಅಧ್ಯಯನದ ಪ್ರಸ್ತುತತೆ (Relevancy of the Study)

೨೦೦೬ ಅರಣ್ಯ ಹಕ್ಕುಗಳ ಕಾಯಿದೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸುವಲ್ಲಿ ಸರ್ಕಾರ ಮತ್ತು ಸರ್ಕಾರಿ ಅಧಿಕಾರಿಗಳು ವಿಫಲವಾಗಿದ್ದಾರೆ ಎಂಬ ಕೂಗು ಕೇಳಿ ಬರುತ್ತಿದೆ. ನಿಜವಾಗಿಯೂ ವಿಫಲರಾಗಿದ್ದಾರಾ? ಈ ವಿಫಲತೆಗೆ ಕಾರಣಗಳೇನು? ಎಲ್ಲಿ ಸಮಸ್ಯೆಗಳು ಎದುರಾಗುತ್ತಿವೆ? ಅನುಷ್ಠಾನದ ಸಾಧ್ಯತೆಗಳೇನು? ಎಂಬುದು ಅಲ್ಲಲ್ಲಿ ಸಾರ್ವಜನಿಕವಾಗಿ ಚರ್ಚೆ ನಡೆದಿದೆ. ಆದರೆ ಅನುಷ್ಠಾನದಲ್ಲಿ ಆಗುತ್ತಿರುವ ಸವಾಲು ಮತ್ತು ಸಾಧ್ಯತೆಗಳನ್ನು ಅರಿಯಲು ವೈಜ್ಞಾನಿಕವಾಗಿ ಕ್ಷೇತ್ರ ಕಾರ್ಯದ ಮುಖಾಂತರ ಅಧ್ಯಯನ ನಡೆದಿಲ್ಲ. ಅಂದರೆ ಆದಿವಾಸಿ ಸಮೂಹಗಳ ಸಾಮಾಜಿಕ ಜೀವನ, ಆರ್ಥಿಕ ಜೀವನ, ಸಂಪ್ರದಾಯ, ಆಚರಣೆಗಳು, ನಂಬಿಕೆಗಳು ಇತ್ಯಾದಿ ಅಂಶಗಳ ಮೇಲೆ ಕಾಯಿದೆ ಯಾವ ಪರಿಣಾಮ ಬೀರುತ್ತದೆ ಎಂಬಿತ್ಯಾದಿ ವಿಷಯಗಳ ಅಧ್ಯಯನದ ದೃಷ್ಟಿಯಿಂದ ಇದರ ಪ್ರಸ್ತುತತೆ ಕಂಡುಬರುತ್ತದೆ.

ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನವು ನೇರವಾಗಿ ಪರಿಣಾಮ ಬೀರುವುದು ಅರಣ್ಯದಲ್ಲಿ ವಾಸಿಸುತ್ತಿರುವ ಆದಿವಾಸಿ ಸಮುದಾಯಗಳಿಗೆ, ಇಂತಹ ಆದಿವಾಸಿಗಳು ತಾವು ತಲೆ ತಲಾಂತರದಿಂದ ನೆಲೆಸಿರುವ ಪ್ರದೇಶವನ್ನು ಬಿಟ್ಟು ಬೇರೆಡೆ ನೆಲೆಸಲು ಮಾನಸಿಕವಾಗಿ ಸಿದ್ಧರಿರುವುದಿಲ್ಲ. ಹಾಗೂ ಅವರ ನಂಬಿಕೆ ಆಚರಣೆಗಳಿಗೆ ಇದು

ವಿರುದ್ಧವಾದುದ್ದೆಂದು ತಿಳಿಯುತ್ತಾರೆ. ಇದರಿಂದ ನಾವು ನಮ್ಮ ಮೂಲ ನೆಲೆಯನ್ನೇ ಕಳೆದುಕೊಳ್ಳುತ್ತೇವೆ ಎಂಬ ಆತಂಕ ಅವರಲ್ಲಿ ಮೂಡಿರುವುದರಿಂದ ಅವರು ಬೇರೆ ಕಡೆಗೆ ತೆರಳಲು ಸಿದ್ಧರಿಲ್ಲ. ಅಲ್ಲದೆ ಆದಿವಾಸಿ ಸಮುದಾಯಗಳ ನಂಬಿಕೆಗೆ ದಕ್ಕೆಯಾಗದಂತೆ ಅವರ ಮನವೊಲಿಸಿ ಅರಣ್ಯ ಹಕ್ಕುಗಳ ಕಾಯಿದೆಯನ್ನು ಅನುಷ್ಠಾನಗೊಳಿಸುವಲ್ಲಿ ಸಾಕಷ್ಟು ಸವಾಲುಗಳನ್ನು ಎದುರಿಸುತ್ತಿರುವ ಸದ್ಯದ ಪರಿಸ್ಥಿತಿಯಲ್ಲಿ ಅಧ್ಯಯನ ಅವಶ್ಯಕವಾಗಿದೆ.

ಆದಿವಾಸಿ ಸಮುದಾಯದವರ ರೀತಿ ರಿವಾಜುಗಳ ಬಗ್ಗೆ ಮತ್ತು ಅವರ ಅಗಾಧ ಜ್ಞಾನ ಭಂಡಾರದ ಮುಂದುವರೆಕೆ ಬಗ್ಗೆ ಕಾಯಿದೆಯಲ್ಲಿ ಎಲ್ಲಿಯೂ ನಮೂದಿಸಿಲ್ಲ. ಮತ್ತು ಅವುಗಳ ಸಮರ್ಪಕ ಕಾರ್ಯಾನುಷ್ಠಾನದ ಕುರಿತು ನೀತಿಯಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿಲ್ಲ. ಇಂತಹ ಸಂದರ್ಭದಲ್ಲಿ ಕಾಯಿದೆಯ ಅನುಷ್ಠಾನದಲ್ಲಿನ ಸವಾಲು ಮತ್ತು ಸಾಧ್ಯತೆಗಳನ್ನು ಅಭ್ಯಸಿಸಬೇಕಾಗಿದೆ. ಆದಿವಾಸಿಗಳ ಪಾರಂಪರಿಕ ಜ್ಞಾನವನ್ನು ಉಳಿಸಿ ಬೆಳೆಸಬೇಕೆಂಬುದು ನೀತಿಯ ಉದ್ದೇಶವಾಗಿದೆ. ಇದನ್ನು ಹೇಗೆ ಸಾಧಿಸಬೇಕು ಎಂಬುದರ ಸ್ಪಷ್ಟತೆ ಮಾತ್ರ ಇಲ್ಲ. ಹಾಗಾಗಿ ಯೋಜನೆಯ ಅನುಷ್ಠಾನದಲ್ಲಿ ಆಗುತ್ತಿರುವ ಗೊಂದಲಗಳ ಬಗ್ಗೆ ಅರಿಯಬೇಕಾಗಿದೆ. ಮತ್ತು ಯಶಸ್ವೀ ಅನುಷ್ಠಾನಕ್ಕೆ ಪೂರಕ ಮಾಹಿತಿ ನೀಡುವ ದೃಷ್ಟಿಯಿಂದ ಪ್ರಾಮುಖ್ಯತೆ ಹೊಂದಿದೆ. ಜೊತೆಗೆ ಈಗಾಗಲೇ ಅನುಷ್ಠಾನಗೊಳಿಸಲು ಸಿದ್ದವಾಗಿರುವ ಕಾಯಿದೆಯಲ್ಲಿ ನೇರ ಪರಿಣಾಮಕ್ಕೊಳಗಾದ ಆದಿವಾಸಿ ಸಮುದಾಯದ ನಂಬಿಕೆ, ಆಚರಣೆಗಳಿಗೆ ದಕ್ಕೆಯಾಗದಂತೆ ಈ ಸಮುದಾಯಗಳ ಸ್ಥಳಾಂತರಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ ಎಂಬುದನ್ನು ಪರಿಶೀಲಿಸಬೇಕಾಗಿದೆ.

ಆಧುನಿಕ ಸಮಾಜವು ಹಳೆಯ ತಲೆಮಾರಿನ ಜ್ಞಾನವು ಮೌಢ್ಯವೆಂದು ಕಡೆಗಣಿಸಿರುವುದು ತಿಳಿದ ಸಂಗತಿ. ಇದಕ್ಕೆ ಬುಡಕಟ್ಟು ಸಮುದಾಯಗಳು ಹೊರತಾಗಿಲ್ಲ. ಕಾಡಿನಲ್ಲಿ ಸಾವಿರಾರು ವರ್ಷಗಳಿಂದ ಜೀವಿಸುತ್ತಿರುವ ಆದಿವಾಸಿ ಸಮುದಾಯಗಳು ತಮ್ಮ ಅನುಭವದ ಹಿನ್ನೆಲೆಯಲ್ಲಿ ಅಪಾರವಾದ ಸಸ್ಯರಾಶಿ, ಪ್ರಾಣಿ ಪಕ್ಷಿಗಳ ಕುರಿತು ಮೌಲ್ಯಯುತವಾದ ಜ್ಞಾನವನ್ನು ಹೊಂದಿರುವುದು ಉಂಟು. ಆದರೆ ಅಭಿವೃದ್ಧಿಯ ಹೆಸರಿನಲ್ಲಿ ಅರಣ್ಯವಾಸಿಗಳನ್ನು ಒಕ್ಕಲೆಬ್ಬಿಸುತ್ತಿರುವುದರಿಂದ ಅವರಲ್ಲಿನ ಪಾರಂಪರಿಕ ಜ್ಞಾನವು ನಶಿಸಿ ಹೋಗುವ ಸಾಧ್ಯತೆ ಇದೆ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಆದಿವಾಸಿಗಳಲ್ಲಿ ರೂಡಿಯಲ್ಲಿರುವ ಆಚಾರ, ವಿಚಾರ, ಜೀವನ ಕ್ರಮ ಮತ್ತು ಕಾಡಿನ ಬಗೆಗೆ ಇರುವ ವಿವಿಧ ಮಜಲುಗಳನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸುವುದರಿಂದ ನಾಗರೀಕ ಜಗತ್ತಿಗೆ ಹಲವು ಮಹತ್ವದ ಅಂಶಗಳನ್ನು ತಿಳಿದುಕೊಳ್ಳುವುದು ಸಾಧ್ಯವಿದೆ. ಅಲ್ಲದೆ ಆದಿವಾಸಿ ಸಮುದಾಯಗಳಿಗೋಸ್ಕರ ಅನುಷ್ಠಾನವಾಗತ್ತಿರುವ ಮಹತ್ವದ ಅರಣ್ಯ ಹಕ್ಕುಗಳ ಕಾಯಿದೆ ಇದಾಗಿರುವುದರಿಂದ ಈಗಲಾದರೂ ಬುಡಕಟ್ಟುಗಳು

ಸುಧಾರಣೆಯನ್ನು ಹೊಂದಬಹುದೆ ಎಂಬ ವಾಸ್ತವ ಚಿತ್ರಣವನ್ನು ಕಂಡುಕೊಳ್ಳುವುದು ಸಾಧ್ಯವಿದೆ.

ಕೊನೆಯದಾಗಿ ರಾಷ್ಟ್ರೀಯ ಆದಿವಾಸಿ ನೀತಿ ಜಾರಿಗೆ ಬಂದು ಸಮಾರು ಹತ್ತು ವರ್ಷಗಳಾದರೂ ಕಾಯಿದೆಯ ಅನುಷ್ಠಾನ ಕುಂಟುತ್ತಾ ಸಾಗಿ ಅರ್ಹ ಫಲಾನುಭವಿಗಳು ಯಾವುದೇ ಪ್ರಯೋಜನ ಪಡೆಯದಂತಾಗಿದೆ. ಇದಕ್ಕೆ ಇರುವ ಸವಾಲುಗಳು ಮತ್ತು ಸಾಧ್ಯತೆಗಳನ್ನು ಕಂಡುಕೊಳ್ಳುವ ಅವಶ್ಯಕತೆ ಇದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಅಧ್ಯಯನದ ಪ್ರಸ್ತುತತೆ ಕಂಡುಬರುತ್ತದೆ.

## ೧.೫. ಅಧ್ಯಯನದ ವಿಧಾನ (Method of the Study)

ಪ್ರಸ್ತುತ ಅಧ್ಯಯನದಲ್ಲಿ 'ವಿವರಣಾತ್ಮಕ ಸಂಶೋಧನೆ ವಿಧಾನ'ವನ್ನು ಅಳವಡಿಸಿಕೊಳ್ಳಲಾಗಿದೆ. ಗುಣಾತ್ಮಕ ಮತ್ತು ಪರಿಮಾಣಾತ್ಮಕ ಸ್ವರೂಪದ ಮಾಹಿತಿಗಳನ್ನು ಸಂಗ್ರಹಿಸಲು ಅವಲೋಕನ, ಸಂದರ್ಶನ ಅನುಸೂಚಿ, ವ್ಯಕ್ತಿ ಅಧ್ಯಯನ ಮತ್ತು ಅಂಚೆ ಪ್ರಶ್ನಾವಳಿ ಸಾಧನ/ತಂತ್ರಗಳನ್ನು ಅಳವಡಿಸಿಕೊಳ್ಳಲಾಗಿದೆ. ಕ್ಷೇತ್ರಕಾರ್ಯ ಕೈಗೊಂಡು ಪ್ರಾಥಮಿಕ ಮತ್ತು ಆನುಷಂಗಿಕ ಮಾಹಿತಿಗಳನ್ನು ಕಲೆಹಾಕಲಾಗಿದೆ.

ಅಧ್ಯಯನದ ಉದ್ದೇಶಗಳಲ್ಲಿ ಹೇಳಿರುವಂತೆ ಕಾಯಿದೆಯ ಅನುಷ್ಠಾನದ ಸವಾಲುಗಳು ಮತ್ತು ಸಾಧ್ಯತೆಗಳನ್ನು ಅಭ್ಯಸಿಸುವುದಾಗಿದೆ. ವ್ಯಾಪ್ತಿಯಲ್ಲಿ ಹೇಳಿರುವಂತೆ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳು ಅಧ್ಯಯನ ಕ್ಷೇತ್ರವಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಮುಖ್ಯವಾಗಿ ಅರಣ್ಯ ಹಕ್ಕುಗಳ ಕಾಯಿದೆ ಅಡಿಯಲ್ಲಿ ಸೋಲಿಗರು, ಯರವರು, ಜೇನುಕುರುಬರು ಮತ್ತು ಬೆಟ್ಟಕುರುಬರಿಗೆ ದೊರಕಿರುವ ವೈಯಕ್ತಿಕ ಹಕ್ಕುಗಳು ಮತ್ತು ಸಮುದಾಯ ಹಕ್ಕುಗಳ ದತ್ತಾಂಶಗಳು ಅವಶ್ಯಕವಾಗಿವೆ. ಹಾಗೆಯೇ ಅಧ್ಯಯನಕ್ಕೆ ಒಳಪಡಿಸಿರುವ ಸಮುದಾಯಗಳಿಗೆ ದೊರಕಿರುವ ಸರ್ಕಾರಿ ಸೇವೆಗಳ ಬಗೆಗಿನ ಮಾಹಿತಿ ಕೂಡ ಅವಶ್ಯವಾಗಿದೆ. ಹಾಗೂ ಅರಣ್ಯ ಇಲಾಖೆ ಮತ್ತು ಆದಿವಾಸಿ ಸಮುದಾಯಗಳ ನಡುವಿನ ಸಂಬಂಧಗಳ ಮಾಹಿತಿ ಬೇಕಾಗುವುದು. ಈ ಎಲ್ಲ ಮಾಹಿತಿಗಳು ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ ಕಛೇರಿ, ಸಮಾಜ ಕಲ್ಯಾಣ ಇಲಾಖೆ, ಕಂದಾಯ ಇಲಾಖೆ, ಅರಣ್ಯ ಇಲಾಖೆ, ಲೋಕೋಪಯೋಗಿ ಇಲಾಖೆ ಇಲ್ಲಿ ದೊರೆಯುವುದು ಜೊತೆಗೆ ಆದಿವಾಸಿ ಸಮುದಾಯದವರನ್ನು ಸಂದರ್ಶನ ನಡೆಸುವುದರಿಂದಲೂ ಮಾಹಿತಿಯು ಲಭ್ಯವಿದೆ. ಅಧ್ಯಯನವು ೨೦೦೬ ರ ಡಿಸೆಂಬರ್ ನಿಂದ ೨೦೧೬ ರ ಆಗಸ್ಟ್ ವರೆಗಿನ ಅವಧಿಯನ್ನು ಒಳಗೊಂಡಿದೆ.

### ೧.೫.೧. ದತ್ತಾಂಶಗಳ ಮೂಲ (Sources of Data)

ಈ ಅಧ್ಯಯನದಲ್ಲಿ ಪ್ರಾಥಮಿಕ ಮತ್ತು ಆನುಷಂಗಿಕ ಅಂಕಿ ಅಂಶ ಮೂಲಗಳನ್ನು ಬಳಸಿಕೊಳ್ಳಲಾಗಿದೆ. ಈಗಾಗಲೇ ಮೇಲೆ ಹೇಳಿರುವಂತೆ ಸಂದರ್ಶನಾ ಅನುಸೂಚಿ, ಪೂರ್ವರಚಿತ ಮತ್ತು ಅರಚಿತ ಪ್ರಶ್ನಾವಳಿ ಮುಖಾಂತರ ಪ್ರಾಥಮಿಕ ಮಾಹಿತಿಯನ್ನು ಆದಿವಾಸಿ ಸಮುದಾಯಗಳ ಹಾಡಿ/ಪೋಡು/ಕಾಲೊನಿಗಳಿಗೆ ಭೇಟಿ ನೀಡಿ ಗುಂಪು ಚರ್ಚೆ ಮೂಲಕ ಪಡೆಯಲಾಗಿದೆ. ಅದೇ ರೀತಿ ಸರ್ಕಾರಿ ಇಲಾಖೆಗಳ ಕಡತಗಳ ಮಾಹಿತಿಯನ್ನು ಮಾಹಿತಿ ಹಕ್ಕು ಕಾಯಿದೆ ಮುಖಾಂತರ ಪಡೆಯಲಾಗಿದೆ. ಮತ್ತು ಇಲಾಖೆಗಳಿಗೆ ಭೇಟಿ ನೀಡಿ ಅಧಿಕಾರಿಗಳೊಂದಿಗೆ ಚರ್ಚಿಸಿ ದತ್ತಾಂಶಗಳನ್ನು ಸಂಗ್ರಹಿಸಲಾಗಿದೆ. ಹಾಗೂ ಅಂತರ್ಜಾಲದಲ್ಲಿ ಲಭ್ಯವಿರುವ ಮಾಹಿತಿಗಳನ್ನು ಆನುಷಂಗಿಕ ಮೂಲಗಳಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

### ೧.೫.೨. ನಮೂನೆ ಅಥವಾ ಮಾದರಿ ರಚನಾ ಕ್ರಮ (Sampling Plan)

ಅಧ್ಯಯನ ಪ್ರದೇಶ ಅಂದರೆ ಮೈಸೂರು, ನಂಜನಗೂಡು, ಹೆಗ್ಗಡದೇವನಕೋಟೆ, ಹುಣಸೂರು, ಪಿರಿಯಾಪಟ್ಟಣ, ಚಾಮರಾಜನಗರ, ಗುಂಡ್ಲುಪೇಟೆ, ಯಳಂದೂರು ಮತ್ತು ಕೊಳ್ಳೆಗಾಲ ತಾಲ್ಲೂಕುಗಳಲ್ಲಿ ಯರವರು, ಸೋಲಿಗರು, ಜೇನುಕುರುಬರು ಮತ್ತು ಬೆಟ್ಟಕುರುಬರು ವಾಸವಾಗಿರುವ ಹಾಡಿ/ ಪೋಡು/ಕಾಲೊನಿಗಳ ಯಾದಿಯನ್ನು ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ ಕಛೇರಿಯಿಂದ ಪಡೆಯಲಾಯಿತು. ನಂತರ ಎಲ್ಲಾ ತಾಲ್ಲೂಕುಗಳೂ ಪ್ರಮುಖವಾಗಿದ್ದುದರಿಂದ ಪ್ರತೀ ತಾಲ್ಲೂಕಿನಿಂದಲೂ ಪ್ರತಿಶತ ೨೦ ಹಾಡಿ/ ಪೋಡು/ಕಾಲೊನಿಗಳನ್ನು ಆಯ್ಕೆ ಮಾಡಲಾಯಿತು. (ಇಲ್ಲಿ ಅರಣ್ಯ ಗ್ರಾಮ, ಅರಣ್ಯದಂಚಿನ ಗ್ರಾಮ ಮತ್ತು ಗ್ರಾಮಗಳ ಪಕ್ಕದಲ್ಲಿ ನೆಲೆಸಿರುವ ಕಾಲೊನಿಗಳಿಗೆ ಸಮಾನ ಅವಕಾಶ ನೀಡಲಾಗಿದೆ) ಇದಕ್ಕೆ ಸಂಭವನೀಯ ನಮೂನೆಯ ಸರಳ ಯಾದೃಚ್ಛಿಕ ವಿಧಾನದ ಮೂಲಕ ದತ್ತಾಂಶಗಳನ್ನು ಸಂಗ್ರಹಿಸಲಾಗಿದೆ. ಮಾಹಿತಿ ಸಂಗ್ರಹಣೆಗಾಗಿ ಸಂದರ್ಶನ ಅನುಸೂಚಿ ಮತ್ತು ರಚಿತ ಪ್ರಶ್ನಾವಳಿ ಮತ್ತು ಅರಚಿತ ಪ್ರಶ್ನಾವಳಿ ಎರೆಡನ್ನೂ ಬಳಸಲಾಗಿದೆ ಜೊತೆಗೆ ಅವಲೋಕನ ವಿಧಾನ ಕೂಡ ಬಳಸಲ್ಪಟ್ಟಿದೆ. ಸಂಗ್ರಹಿಸಿದ ಮಾಹಿತಿಯನ್ನು ಮೊದಲು ಕೋಷ್ಟಕೀಕರಣ ಮಾಡಿಕೊಂಡು ದತ್ತಾಂಶಗಳ ಜೊತೆಗೆ ವಿಷಯವನ್ನು ವಿಶ್ಲೇಷಿಸಲಾಗಿದೆ. ನಂತರ ಪ್ರಚಲಿತವಿರುವ ಸಂಶೋಧನಾ ವರದಿ ತಯಾರಿಸುವ ಮಾದರಿಯಲ್ಲಿ ವಿಸ್ತೃತ ಪ್ರಬಂಧ ರಚಿಸಲಾಗಿದೆ.

### ೧.೫.೩. ದತ್ತಾಂಶ ಸಂಗ್ರಹಣೆಯ ಸಾಧನಗಳು (Data Collection Instruments)

ಕ್ಷೇತ್ರಕಾರ್ಯ ಕೈಗೊಂಡು ಅವಲೋಕನ ವಿಧಾನ ಮತ್ತು ಸಂದರ್ಶನ ಅನುಸೂಚಿಗಳನ್ನು ಬಳಸಿಕೊಂಡು ಮಾಹಿತಿ ಸಂಗ್ರಹಿಸಲಾಗಿದೆ. ಅವಲೋಕನ

ವಿಧಾನದಲ್ಲಿ 'ಭಾಗಶಃ ಸಹಭಾಗಿತ್ವ'ದ ಮುಖಾಂತರ ಮಾಹಿತಿಯನ್ನು ಕಲೆಹಾಕಲಾಯಿತು. ಉದಾ:- ಸೋಲಿಗರ ರೊಟ್ಟಿ ಹಬ್ಬ ಆಚರಣೆಯಲ್ಲಿ ಪಾಲ್ಗೊಂಡು ಒಂದು ಹಗಲು ಮತ್ತು ಒಂದು ರಾತ್ರಿ ಅವರ ಆಚಾರಣೆ, ಅವರ ನೃತ್ಯದಲ್ಲಿನ ತಲ್ಲಿನತೆ ಇವುಗಳನ್ನು ಅವಲೋಕಿಸಲಾಗಿದೆ. ಅವರು ಕಾಡಿನ ಮಧ್ಯೆ ಈ ಹಬ್ಬ ಆಚರಿಸಲು ಅರಣ್ಯ ಇಲಾಖೆ ಸಹಕಾರ ಯಾವ ರೀತಿ ಇದೆ. ಅರಣ್ಯ ಹಕ್ಕುಗಳ ಕಾಯಿದೆ ಪ್ರಕಾರ ಆದಿವಾಸಿಗಳು ತಮ್ಮ ಸಾಂಸ್ಕೃತಿಕ ಹಕ್ಕನ್ನು ಪಡೆದಿದ್ದಾರೆಯೇ, ಒಂದು ವೇಳೆ ಪಡೆದಿದ್ದರೆ ಇದು ನಿಯಂತ್ರಿತವೋ ಅನಿಯಂತ್ರಿತವೋ ಎಂಬುದನ್ನು ಸೂಕ್ಷ್ಮವಾಗಿ ಅವಲೋಕಿಸಿ ಆಡಿಯೋ ಮತ್ತು ವಿಡಿಯೋ ಮುಖಾಂತರ ಅದನ್ನು ದಾಖಲಿಸಿಕೊಳ್ಳಲಾಯಿತು. ಅಲ್ಲದೇ ನೇರವಾಗಿ ಅವಲೋಕನ ಮಾಡಲಾಗದ್ದನ್ನು ಆಡಿಯೋ ಮತ್ತು ವಿಡಿಯೋ ಮುಖಾಂತರ ದಾಖಲಿಸಿಕೊಂಡ ದಾಖಲೆಗಳನ್ನು ಕಂಪ್ಯೂಟರ್ ಮುಖಾಂತರ ಪರೋಕ್ಷವಾಗಿ ಅವಲೋಕನ ಕೂಡ ಮಾಡಲಾಗಿದೆ. ಇದರಿಂದಾಗಿ ಸಮುದಾಯದವರ ಹಾವ ಭಾವ ಅವರ ಆಚರಣೆಯಲ್ಲಿ ಮತ್ತು ತಮ್ಮ ಮೂಲ ನೆಲೆಯ ನಂಬಿಕೆ ಅವರ ಸಂತೃಪ್ತ ಭಾವನೆ ಇವುಗಳನ್ನು ಅಧ್ಯಯನ ಮಾಡಲು ಇದು ಸಹಕಾರಿಯಾಯಿತು.

ಪ್ರಾಥಮಿಕ ಮಾಹಿತಿಯನ್ನು ಅವಲೋಕನ ವಿಧಾನ ಅಷ್ಟೇ ಅಲ್ಲದೇ ನೇರ ಸಂದರ್ಶನ ವಿಧಾನದ ಮೂಲಕವೂ ಪಡೆಯಲಾಗಿದೆ. ಇಲ್ಲಿ ರಚಿತ ಪ್ರಶ್ನಾವಳಿ ಮತ್ತು ಅರಚಿತ ಪ್ರಶ್ನಾವಳಿ ಎರಡೂ ವಿಧಾನ ಬಳಸಲಾಗಿದೆ. ಹಾಡಿ/ಪೋಡುಗಳಿಗೆ ತೆರಳಿದಾಗ ಅಲ್ಲಿಯ ಹಿರಿಯರನ್ನು ಮತ್ತು ಗ್ರಾಮ ಪಂಚಾಯತ್ ಸದಸ್ಯರನ್ನು, ಹಿರಿಯರ ಹಾಗೂ ವಿದ್ಯಾವಂತರ ೦೮ ರಿಂದ ೧೫ ಜನರ ಒಂದು ಗುಂಪು ಕೂಡಿಸಿಕೊಂಡು ಆ ಪೋಡು/ಹಾಡಿಯ ಮಾಹಿತಿಯನ್ನು ಪೂರ್ವರಚಿತ ಸಂದರ್ಶನಾ ಅನುಸೂಚಿ ಮುಖಾಂತರ ಪಡೆಯಲಾಗಿದೆ. ಸಂದರ್ಶನಾ ಅನುಸೂಚಿಯು ಮಾರ್ಗದರ್ಶಕರ ನಿರ್ದೇಶನದಂತೆ ಮೂರು ಬಾರಿ ಪರೀಕ್ಷೆಗೆ ಒಳಪಟ್ಟು ತಯಾರಿಸಲಾಗಿದೆ.

ಅದೇ ರೀತಿ ಪ್ರತೀ ಹಾಡಿ/ಪೋಡಿನಲ್ಲಿ ಇರುವಂತಹ ಅನುಭವಿ ಹಿರಿಯರು, ಕಲಾವಿದರು ಮತ್ತು ವಿದ್ಯಾವಂತ ಯುವಕರನ್ನು ಪ್ರತ್ಯೇಕವಾಗಿ ಭೇಟಿ ಮಾಡಲಾಗಿದೆ. ಇಲ್ಲಿ ಯಾವುದೇ ಪೂರ್ವರಚಿತ ಪ್ರಶ್ನಾವಳಿಗಳಿಲ್ಲದೆ ಅವರೆದುರಿಗೆ ಯಾವುದೇ ರೀತಿಯಲ್ಲಿ ದಾಖಲೀಕರಣ ಮಾಡುತ್ತಿರುವುದನ್ನು ತೋರ್ಪಡಿಸದೇ ಅವರ ಅರಿವಿಗೆ ಬಾರದಂತೆ ಧ್ವನಿಮುದ್ರಣ ಮಾಡುತ್ತಾ ಅವರ ಸಂದರ್ಶನ ಮಾಡಲಾಗಿದೆ. ಇದನ್ನು ಗಣಕ ಯಂತ್ರದ ಸಹಾಯದಿಂದ ಮತ್ತೊಮ್ಮೆ ಆಲಿಸಿ ವಿಷಯ ಸಂಗ್ರಹಿಸಲಾಗಿದೆ. ಇಲ್ಲಿ ನೈಜ ಮಾಹಿತಿ ದೊರೆಯುತ್ತದೆ. ಅವರ ಭಾವನೆಗಳು ಯಾವುದೇ ಅಡೆತಡೆ ಇಲ್ಲದೆ ವ್ಯಕ್ತವಾಗುತ್ತವೆ. ಇದು ಅಧ್ಯಯನಕಾರರಿಗೆ ಉಪಯುಕ್ತಕಾರಿ.

ಪೂರ್ವರಚಿತ ಪ್ರಶ್ನಾವಳಿಗಳನ್ನು ಅರಣ್ಯ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಲೋಕೋಪಯೋಗಿ ಇಲಾಖೆ, ವಿದ್ಯುತ್ ಮಂಡಳಿ, ಕಂದಾಯ ಇಲಾಖೆ ಸಿಬ್ಬಂದಿಗಳಿಗೆ ಪ್ರತ್ಯೇಕವಾಗಿ ರಚಿಸಿ ಧ್ವನಿ ಮುದ್ರಣದ ಮೂಲಕ ಅವರ ಹೇಳಿಕೆಗಳನ್ನು ಸಂಗ್ರಹಿಸಲಾಗಿದೆ. ಕೆಲವು ವಿದ್ವಾಂಸರುಗಳಿಗೆ ಅಂಚೆ-ಪ್ರಶ್ನಾವಳಿಗಳನ್ನು ಕಳುಹಿಸಿ ಮಾಹಿತಿ ತರಿಸಿಕೊಳ್ಳಲಾಗಿದೆ. ಇದಕ್ಕಾಗಿ ಪ್ರಶ್ನಾವಳಿ ಜೊತೆಗೆ ಪ್ರತ್ಯೇಕ ಒಂದು ಮನವಿ ಪತ್ರ ಹಾಗೂ ಅಂಚೆ ಚೀಟಿ ಸಹಿತ ಸ್ವ-ವಿಳಾಸವಿರುವ ಲಕೋಟೆಯನ್ನು ಇಟ್ಟು ಅಂಚೆ ಮುಖಾಂತರ ಪ್ರಶ್ನಾವಳಿಗಳನ್ನು ರವಾನಿಸಿ ನಂತರ ದೂರವಾಣಿ ಮುಖಾಂತರ ಅನುಸರಣೆ ಮಾಡಿ ಅಧ್ಯಯನಕ್ಕೆ ಬೇಕಾದ ಮಾಹಿತಿ ತರಿಸಿಕೊಳ್ಳುವ ಕ್ರಮ ಅನುಸರಿಸಲಾಗಿದೆ. ಇದರಿಂದ ಸಮಯ, ಹಣ ಮತ್ತು ಶ್ರಮ ಉಳಿತಾಯವಾಗುತ್ತದೆ. ಮತ್ತು ಹೆಚ್ಚು ಜನರ ಮಾಹಿತಿ ಪಡೆಯಲು ಸಾಧ್ಯ.

### ೧.೫.೪. ಕ್ಷೇತ್ರ ಕಾರ್ಯ (Field Work)

ಕಾಯಿದೆ ಅನುಷ್ಠಾನದಲ್ಲಿ ಎದುರಾಗಿರುವ ಸವಾಲುಗಳನ್ನು ಅಧ್ಯಯನ ಮಾಡಲು, ಸಾಧ್ಯತೆಗಳನ್ನು ಗೊತ್ತುಪಡಿಸಿಕೊಳ್ಳಲು ಆದಿವಾಸಿ ಸಮುದಾಯಗಳು ವಾಸಮಾಡುವ ನೆಲೆಗಳನ್ನು ಹತ್ತಿರದಿಂದ ಅವಲೋಕನ ಮಾಡಿ, ಅಲ್ಲಿಯ ಜನರನ್ನು ಸಂದರ್ಶಿಸಲು ಕ್ಷೇತ್ರ ಕಾರ್ಯವನ್ನು ಮಾಡಲಾಯಿತು. ಕ್ಷೇತ್ರಕಾರ್ಯವನ್ನು ಅಧ್ಯಯನದ ಪ್ರಾರಂಭದಲ್ಲಿ ಕೈಗೊಳ್ಳದೆ ಸೋಲಿಗರು, ಜೇನುಕುರುಬರು, ಬೆಟ್ಟಕುರುಬರು ಮತ್ತು ಯರವ ಸಮುದಾಯದವರ ಕುರಿತು ಲಭ್ಯವಿರುವ ಮಾಹಿತಿಯನ್ನು ಮೊದಲು ಆನುಷಂಗಿಕ ಮೂಲಗಳ ಮುಖಾಂತರ ಸಂಗ್ರಹಿಸಿ ಅಧ್ಯಯನದ ಎರಡನೇ ವರ್ಷದ ಆರಂಭದಲ್ಲಿ ದೂರವಾಣಿ ಮುಖಾಂತರ ಬಿಳಿಗಿರಿ ರಂಗನ ಬೆಟ್ಟದ ಸೋಲಿಗರು ಸಮುದಾಯದ ಒಬ್ಬ ಹಿರಿಯರನ್ನು ಸಂಪರ್ಕಿಸಿ ಅವರ ಮುಖಾಂತರ ಪೋಡುಗಳಿಗೆ ಭೇಟಿ ನೀಡಲಾಯಿತು. ಹೀಗೆ ಒಂದು ಪೋಡಿನ ಅಧ್ಯಯನ ಮುಗಿಸಿ ಮುಂದಿನ ಪೋಡಿಗೆ ತೆರಳುವಾಗ ಮುಂದಿನ ಪೋಡಿನ ಸಂಪೂರ್ಣ ವಿವರ ಪಡೆದು ಆ ಪೋಡಿನಲ್ಲಿ ಸಂಪರ್ಕಿಸಬೇಕಾದ ವ್ಯಕ್ತಿಯ ವಿವರ ಪಡೆದು ಕೊಂಡು ಮತ್ತೊಂದು ಪೋಡಿಗೆ ಭೇಟಿ ನೀಡಲಾಯಿತು. ಇದರಿಂದಾಗಿ ಈಗಾಗಲೇ ಅವರದೇ ಸಮುದಾಯದ ಒಬ್ಬ ವ್ಯಕ್ತಿ ಪರಿಚಯ ಹೇಳುತ್ತಿದ್ದುದರಿಂದ ಮಾಹಿತಿ ಪಡೆಯುವುದು ಸುಲಭವಾಗುತ್ತಿತ್ತು. ಕೆಲವು ಹಾಡಿಗಳಿಗೆ ಭೇಟಿ ನೀಡುವ ಪೂರ್ವದಲ್ಲಿ ಆ ಹಾಡಿಗಳಲ್ಲಿ ಸೇವೆ ಸಲ್ಲಿಸುತ್ತಿರುವ ಕೆಲವು ಸ್ವಯಂ ಸೇವಾ ಸಂಸ್ಥೆಗಳ ಅಧಿಕಾರಿಗಳನ್ನು ಭೇಟಿ ಮಾಡಿ ಅವರ ಮುಖಾಂತರ ಹಾಡಿಗಳಲ್ಲಿ ಸೇವೆ ಸಲ್ಲಿಸುತ್ತಿರುವ ಸಂಸ್ಥೆಗಳ ಪ್ರತಿನಿಧಿಗಳ ಸಂಪರ್ಕ ಸಾಧಿಸಿ ಅವರ ಮುಖಾಂತರ ಹಾಡಿಗಳ ಯಜಮಾನರನ್ನು ಸಂಪರ್ಕಿಸಿ ಮಾಹಿತಿ ಕಲೆಹಾಕಲಾಯಿತು.

### ೧.೫.೫.ದತ್ತಾಂಶಗಳ ಕಾರ್ಯವಿಧಾನ ಮತ್ತು ವಿಶ್ಲೇಷಣೆ ರಚನಾ ಕ್ರಮ (Data Processing and Analysis Plan)

ಸಂಗ್ರಹಿಸಿದ ದತ್ತಾಂಶಗಳನ್ನು ಗಣಕ ಯಂತ್ರದ ಎಕ್ಸ್-ಎಲ್ ಕಡತದಲ್ಲಿ ನಮೂದಿಸಲಾಯಿತು. ಹೀಗೆ ನಮೂದಿಸಿದ ದತ್ತಾಂಶಗಳನ್ನು ಕ್ರೂಢೀಕರಿಸಲು ಕೋಷ್ಟಕೀಕರಣ ಮತ್ತು ವರ್ಗೀಕರಣವನ್ನು ಮಾಡಲಾಯಿತು. ನಂತರ ದೊರಕಿದ ಮಾಹಿತಿಯ ಆಧಾರದ ಮೇಲೆ ದತ್ತಾಂಶಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಸಂಗ್ರಹಿಸಿದ ಚಲಕಗಳ ಪರಿವರ್ತಕಗಳನ್ನು ವಿಶ್ಲೇಷಿಸಲು ಸಹಸಂಬಂಧವನ್ನು ಬಳಸಲಾಗಿದೆ.

## ೧.೬. ಅಧ್ಯಯನದ ಮಿತಿಗಳು (Limitations of the Study)

ಅ. ಅಧ್ಯನಯಯನಕ್ಕೆ ಕೇಂದ್ರ ಸರ್ಕಾರದ ಕೆಲವು ನೀತಿ ನಿಯಮಗಳು ಸಕಾರಾತ್ಮಕವಾಗಿ ಸ್ಪಂದಿಸದೇ ಇರುವುದು.

ಬ. ಕೆಲವು ಕಡೆ ಅರಣ್ಯ ಇಲಾಖೆಯವರು ಅರಣ್ಯ ಗ್ರಾಮಗಳಿಗೆ ಭೇಟಿ ಮಾಡಲು ಅವಕಾಶ ಕಲ್ಪಿಸದೇ ಇರುವುದರಿಂದ ಅಂತಹ ಅರಣ್ಯ ಗ್ರಾಮಗಳ ನೈಜ ಚಿತ್ರಣ ತಿಳಿದುಕೊಳ್ಳಲು ಅವಕಾಶ ದೊರೆತಿಲ್ಲ.

## ೧.೭. ಅಧ್ಯಯನದ ಪ್ರಾಕಲ್ಪನೆಗಳು (Hypotheses)

೧) ೨೦೦೬ ರ ಅರಣ್ಯ ಹಕ್ಕುಗಳ ಕಾಯಿದೆಯು ಆದಿವಾಸಿ ಸಮುದಾಯಗಳಿಗೆ (ಅರಣ್ಯವಾಸಿ ಬುಡಕಟ್ಟುಗಳಿಗೆ) ಹೆಚ್ಚಿನ ಸವಲತ್ತುಗಳನ್ನು ಕಲ್ಪಿಸಿದ್ದರೂ ಅದನ್ನು ಅನುಷ್ಠಾನಗೊಳಿಸುವಲ್ಲಿ ಇಲಾಖೆಗಳಲ್ಲಿ ಕಾನೂನಿನ ತೊಡಕು ಎದುರಾಗಿದ್ದು ಆ ಗೊಂದಲದಿಂದ ಉದ್ದೇಶಿತ ಬುಡಕಟ್ಟುಗಳು ಸಂಕಷ್ಟಗಳನ್ನು ಎದುರಿಸುವಂತಾಗಿದೆ.

೨) ಅರಣ್ಯ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಕಂದಾಯ ಇಲಾಖೆಗಳಲ್ಲಿ ಉಂಟಾಗಿರುವ ಗೊಂದಲಗಳನ್ನು ಪರಸ್ಪರ ಚರ್ಚೆಯಿಂದ ಬಗೆಹರಿಸಿಕೊಳ್ಳದ ಕಾರಣ ಪ್ರಸ್ತುತ ಕಾಯಿದೆ ಅನುಷ್ಠಾನ ವಿಳಂಬವಾಗುತ್ತಿದೆ. ಇದರಿಂದಾಗಿ ಆದಿವಾಸಿ ಸಮುದಾಯಗಳ ಅಭಿವೃದ್ಧಿ ಕುಂಟಿತವಾಗಿದೆ.

## ೧.೮. ಸಾಹಿತ್ಯ ಪರಾಮರ್ಶೆ (Review of Literature)

ಸೋಲಿಗರು, ಬೆಟ್ಟಕುರುಬರು, ಜೇನುಕುರುಬರು ಮತ್ತು ಯರವರ ಕುರಿತು ಈಗಾಗಲೇ ನಡೆದಿರುವಂತಹ ಅಧ್ಯಯನ ವರದಿಗಳನ್ನು, ಮಹಾಪ್ರಬಂಧಗಳನ್ನು, ಸರ್ಕಾರದ ವರದಿಗಳನ್ನು ಪ್ರಸ್ತುತ ಅಧ್ಯಯನದ ನೆಲೆಗಟ್ಟಿನಲ್ಲಿ ಪರಾಮರ್ಶಿಸಲಾಗಿದೆ. ೨೦೦೬ ರ ಅರಣ್ಯ ಹಕ್ಕುಗಳ ಕಾಯಿದೆ ರಚನೆಯ ಹಿನ್ನೆಲೆ ಮತ್ತು ಆ ಸಂದರ್ಭದಲ್ಲಿ ಸಂಸತ್ತಿನಲ್ಲಿ ನಡೆದ ಚರ್ಚೆಗಳನ್ನು ಅವಲೋಕಿಸಲಾಗಿದೆ. ಕಾಯಿದೆ ಜಾರಿಗೊಂಡ ನಂತರದ ಪರಿಣಾಮಗಳ ಕುರಿತ ವಿದ್ವಾಂಸರ ಲೇಖನಗಳನ್ನು ಅಭ್ಯಸಿಸಲಾಗಿದೆ. ಜೊತೆಗೆ ಈಗಾಗಲೇ ಅರಣ್ಯದ ಬಗೆಗೆ ರಚಿಸಲ್ಪಟ್ಟ ಕಾಯಿದೆಗಳನ್ನು ಮತ್ತು ಹುಲಿ ಸಂರಕ್ಷಣಾ ಯೋಜನೆ, ಮರಗಳ ಸಂರಕ್ಷಣಾ ಕಾಯಿದೆ, ರಾಷ್ಟ್ರೀಯ ಉದ್ಯಾನವನ ಕಾಯಿದೆಗಳನ್ನು ಹಾಗೂ ಭಾರತದ ಸಂವಿಧಾನವನ್ನು ಪ್ರಸ್ತುತ ಅಧ್ಯಯನ ವಿಷಯದ ಹಿನ್ನೆಲೆಯಲ್ಲಿ ಪರಾಮರ್ಶಿಸಲಾಗಿದೆ.

**AITPN** (Assion Indigenious and Tribal Peoples Network) ಇವರ '*India's Forest Rights Act Of 2006 Illusion Or Solution'* ಎಂಬ ಲೇಖನದಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ರಚನೆ ಮಾಡುವಲ್ಲಿ ಪಾರ್ಲಿಮೆಂಟಿನಲ್ಲಿ ನಡೆದ ಚರ್ಚೆಗಳ ಕುರಿತು ದಾಖಲಿಸಲಾಗಿದೆ. ಈ ಕಾಯಿದೆಯ ಫಲಾನುಭವಿಗಳಾಗಲು ಈ ಮೊದಲು ೨೫.೧೦.೧೯೮೦ ನ್ನು ಕೊನೆಯ ದಿನಾಂಕವನ್ನಾಗಿಸಿತ್ತು. ಆದರೆ ನಂತರದಲ್ಲಿ ೧೩.೧೨.೨೦೦೫ ನ್ನು ಅಂತಿಮ ದಿನಾಂಕವನ್ನಾಗಿ ವಿಸ್ತರಿಸಿತು. ಇದರ ಮುಖ್ಯ ಉದ್ದೇಶ ಅರಣ್ಯವಾಸಿ ಆದಿವಾಸಿಗಳ ಪಾರಂಪರಿಕ ಹಕ್ಕನ್ನು ಕೊಡಮಾಡುವುದಕ್ಕಿಂತ ಇತರೆ ಆದಿವಾಸಿಯೇತರರ ಹಿತ ಕಾಪಾಡುವುದು ಎಂಬ ಅಂಶವನ್ನು ಹೇಳುತ್ತದೆ. ಅಲ್ಲದೆ ಈ ಕಾಯಿದೆಯು ಕಿತ್ತಳೆ ಹಣ್ಣಿನ ರಸದೊಂದಿಗೆ ಸೇಬು ಹಣ್ಣಿನ ರಸ ಬೆರೆಸಿದಂತಿದೆ ಎಂದು ಹೇಳುತ್ತದೆ. ಆದಿವಾಸಿಗಳು ಅರಣ್ಯದೊಂದಿಗೆ ಭಾವನಾತ್ಮಕ, ಮಾನಸಿಕ ಮತ್ತು ಸಾಂಸ್ಕೃತಿಕ ಪ್ರೀತಿ ಹೊಂದಿದ್ದಾರೆ. ಆದರೆ ಆದಿವಾಸಿಯೇತರರು ಅರಣ್ಯ ಮತ್ತು ಅರಣ್ಯ ಸಂಬಂಧೀ ಉತ್ಪನ್ನಗಳ ಮುಖಾಂತರ ಜೀವನೋಪಾಯ ನಡೆಸುವ ಅಂತಿಮ ಗುರಿ ಹೊಂದಿದ್ದಾರೆ ಹೊರತು ಅರಣ್ಯದ ಬಗೆಗೆ ಇನ್ನಾವುದೆ ಬಾವನೆಗಳಿಲ್ಲ ಎಂಬುದನ್ನು ದಾಖಲಿಸಿದ್ದಾರೆ. ಇದು ಸಂಶೋಧನೆಗೆ ನಿರ್ದೇಶನ ನೀಡುವಲ್ಲಿ ಸಹಕಾರಿಯಾಗಿದೆ.

**Chough. A.K, (2011)** ಇವರು ೦೭.೦೪.೨೦೧೧ ರಲ್ಲಿ ದೆಹಲಿಯ ವಿಜ್ಞಾನ ಭವನದಲ್ಲಿ ನಡೆದ ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನದ ಪ್ರಗತಿ ಪರಿಶೀಲನಾ ಸಭೆಯ ನಡಾವಳಿಗಳನ್ನು ಇಲ್ಲಿ ದಾಖಲಿಸಿದ್ದಾರೆ. ಅದರ ಪ್ರಕಾರ ಸಭೆಯಲ್ಲಿ ಕ್ಲೇಮು ಕೋರಿ ಸಲ್ಲಿಸಿರುವ ಅರ್ಜಿಗಳ ನಿರಾಕರಣೆಯ ದರ ಬಹಳಷ್ಟಿದೆ. ಹಾಗೆಯೇ ಸಮುದಾಯ ಹಕ್ಕುಗಳ ಸ್ವೀಕೃತಿ ಬಹಳ ಕಡಿಮೆ ಇದೆ. ಇದು ಗಂಭೀರ ವಿಚಾರ

ಧಾರೆಯಾಗಿದೆ. ಜೊತೆಗೆ ವಿವಿಧ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳು ಈ ಕಾಯಿದೆಯ ವ್ಯಾಪ್ತಿಗೆ ಒಳಪಡುವ ಸಮುದಾಯದ ಅಭಿವೃದ್ಧಿಗೆ ಈಗಾಗಲೇ ಇರುವ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಯೋಜನೆಗಳ ಕುರಿತು ಮಾಹಿತಿ ನೀಡಿ ಅವರ ಜೀವನಮಟ್ಟ ಸುಧಾರಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲು ಸೂಚಿಸಿರುವುದನ್ನು ಗಮನಿಸಬಹುದಾಗಿದೆ. ಇದು ಕಾಯಿದೆ ಅನುಷ್ಠಾನಕ್ಕೆ ಇರುವ ನಿಜವಾದ ತೊಡಕುಗಳನ್ನು ಅರಿಯುವಲ್ಲಿ ಮತ್ತು ಅನುಷ್ಠಾನದ ಸಾಧ್ಯತೆಗಳನ್ನು ಕಂಡುಕೊಳ್ಳುವ ಕೈಪಿಡಿಯಾಗಿದೆ.

**Mahadeo Singh Khandela (2011)** ಇವರು ೦೭.೦೪.೨೦೧೧ ರಲ್ಲಿ ದೆಹಲಿಯ ವಿಜ್ಞಾನ ಭವನದಲ್ಲಿ ನಡೆದ ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನದ ಪ್ರಗತಿ ಪರಿಶೀಲನಾ ಸಭೆಯ ನಡಾವಳಿಗಳನ್ನು ಇಲ್ಲಿ ದಾಖಲಿಸಿದ್ದಾರೆ. ಅದರಂತೆ ಕಾಯಿದೆಯ ಅನುಷ್ಠಾನದಲ್ಲಿ ವಿವಿಧ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳು ಅನುಸರಿಸಿರುವ ಬೇರೆ ಬೇರೆ ರೀತಿಯ ನೀತಿಗಳನ್ನು ಚರ್ಚಿಸುವಂತೆ ಒತ್ತಾಯಿಸಲಾಗಿದೆ. ಮತ್ತು ಇತರೆ ರಾಜ್ಯಗಳ ಕ್ಷೇತ್ರ ಮಟ್ಟದ ಸಮಸ್ಯೆಗಳನ್ನು ಹಂಚಿಕೊಳ್ಳಲು ತಿಳಿಸಿದ್ದನ್ನು ಇಲ್ಲಿ ದಾಖಲಿಸಲಾಗಿದೆ. ಇದರಿಂದಾಗಿ ನಮಗೆ ಸ್ಪಷ್ಟವಾಗಿ ತಿಳಿದು ಬರುವುದೆಂದರೆ ಈ ಕಾಯಿದೆಯ ಅನುಷ್ಠಾನಕ್ಕೆ ನಿರ್ದಿಷ್ಟವಾದ ಮಾರ್ಗಸೂಚಿ ಇಲ್ಲದಿರುವುದು. ಮತ್ತು ವಿಭಿನ್ನ ಭಾಷೆ, ಆಚರಣೆ, ಆಲೋಚನಾ ಕ್ರಮಗಳನ್ನು ಹೊಂದಿರುವ ಮತ್ತು ವಿಶಿಷ್ಟ ಭೌಗೋಳಿಕ ನೆಲೆಗಟ್ಟಿನಲ್ಲಿ ವಾಸಿಸುವ ಬೃಹತ್ ಪ್ರಜಾಪ್ರಭುತ್ವ ರಾಷ್ಟ್ರಕ್ಕೆ ಒಂದೇ ತೆರನಾದ ಕಾಯಿದೆಯನ್ನು ತರಲಾಗಿದೆ. ಹೀಗಿರುವಾಗ ವೈವಿಧ್ಯತೆಯನ್ನು ಪ್ರಾಂತೀಯತೆ ಮೇಲೆ ನಿರ್ಧರಿಸಬೇಕಾದ ಅನಿವಾರ್ಯತೆ ಇದೆ ಎಂಬ ಅಂಶ ವ್ಯಕ್ತಪಡಿಸಿದ್ದಾರೆ. ಇದು ಪ್ರಸ್ತುತ ಕಾಯಿದೆ ಅನುಷ್ಠಾನ ಮಾಡುವಾಗ ವಿಭಿನ್ನ ನೆಲೆಗಟ್ಟಿನಲ್ಲಿ ಆಲೋಚನೆ ಮಾಡುವ ಅವಶ್ಯಕತೆ ಮತ್ತು ಅನಿವಾರ್ಯತೆಯನ್ನು ಬಯಸುತ್ತದೆ ಎಂಬುದನ್ನು ವ್ಯಕ್ತಪಡಿಸಿದ್ದಾರೆ.

**Kantilal Bhuria (2011)** ಇವರು ೦೭.೦೪.೨೦೧೧ ರಲ್ಲಿ ದೆಹಲಿಯ ವಿಜ್ಞಾನ ಭವನದಲ್ಲಿ ನಡೆದ ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನದ ಪ್ರಗತಿ ಪರಿಶೀಲನಾ ಸಭೆಯ ನಡಾವಳಿಗಳನ್ನು ಇಲ್ಲಿ ದಾಖಲಿಸಿದ್ದಾರೆ. ಇವರು ದಾಖಲಿಸಿರುವಂತೆ ಅರಣ್ಯ ಹಕ್ಕುಗಳ ಕಾಯಿದೆಯು ಒಂದು ಕಲ್ಯಾಣ ನೀತಿಯಾಗಿದೆ. ಇದರ ಮುಖ್ಯ ಗುರಿ ಆದಿವಾಸಿ ಮತ್ತು ಇತರೇ ಪಾರಂಪರಿಕ ಅರಣ್ಯವಾಸಿಗಳ ಅರಣ್ಯ ಹಕ್ಕುಗಳನ್ನು ಗುರುತಿಸುವುದು. ಮತ್ತು ಅವುಗಳ ಮೇಲೆ ಅಧಿಕಾರ ಕೊಡಿಸುವುದಾಗಿದೆ. ಜೊತೆಗೆ ಜೀವವೈವಿಧ್ಯತೆ ಮತ್ತು ಅರಣ್ಯ ಸಂರಕ್ಷಣೆ ಗುರಿಹೊಂದಲಾಗಿದೆ. ಈ ಸಮುದಾಯಗಳು ಕೇವಲ ಅರಣ್ಯ ಹಕ್ಕು ಕಾಯಿದೆಯ ಲಾಭವನ್ನು ಮಾತ್ರ ಅನುಭವಿಸದೇ ಇತರೇ ಕಲ್ಯಾಣ ಕಾರ್ಯಕ್ರಮಗಳು ಮತ್ತು ಯೋಜನೆಗಳ ಲಾಭ ಪಡೆಯುವ ಅಧಿಕಾರ ನೀಡಲಾಗಿದೆ. ಅಲ್ಲದೆ ವಿವಿಧ ರಾಜ್ಯಗಳಲ್ಲಿ ನಿರಾಕರಿಸಿರುವ ಅರ್ಜಿಗಳ ಕುರಿತು ಪುನರ್‌ಚಿಂತನೆ ಅವಶ್ಯಕ ಎಂಬಂತಹ ಅಂಶವನ್ನು ಹಂಚಿಕೊಂಡ ಬಗ್ಗೆ ಇಲ್ಲಿ ದಾಖಲಿಸಲಾಗಿದೆ.

**Bachittar Singh, Joint Secretary (2011)** ಇವರು ೦೭.೦೪.೨೦೧೧ ರಲ್ಲಿ ದೆಹಲಿಯ ವಿಜ್ಞಾನ ಭವನದಲ್ಲಿ ನಡೆದ ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನದ ಪ್ರಗತಿ ಪರಿಶೀಲನಾ ಸಭೆಯ ನಡಾವಳಿಗಳನ್ನು ಇಲ್ಲಿ ದಾಖಲಿಸಿದ್ದಾರೆ. ಅದರಂತೆ ಅರಣ್ಯ ಹಕ್ಕುಗಳ ಕಾಯಿದೆ  ಅಡಿ ಕ್ಲೇಮು ಕೋರಿ ಅರ್ಜಿ ಸಲ್ಲಿಸಿರುವವರ ನಿರಾಕರಣೆ ಅರ್ಜಿಗಳನ್ನು ವಿಂಗಡಣೆ ಮಾಡಿ ಗ್ರಾಮ ಸಭೆಯ ಸಹಾಯದೊಂದಿಗೆ ಒಬ್ಬ ಸುಗಮಕಾರರ ಮುಖಾಂತರ ಅರ್ಜಿ ಭರ್ತಿಮಾಡಲು ಸಲಹೆ ನೀಡಿದ್ದಾರೆ. ಮತ್ತು ಸಮುದಾಯ ಹಕ್ಕುಗಳ ಬಗೆಗೆ ವಿಶೇಷ ಶಿಬಿರಗಳ ಮೂಲಕ ಜಾಗೃತಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲು ಸೂಚಿಸಿದ್ದನ್ನು ಇಲ್ಲಿ ದಾಖಲಿಸಲಾಗಿದೆ. ಇದರಿಂದ ನಮಗೆ ವೇದ್ಯವಾಗುವುದೇನೆಂದರೆ ಕಾಯಿದೆಯ ಪ್ರಚಾರ ಇನ್ನೂ ತಳಮಟ್ಟವನ್ನು ಮುಟ್ಟಿಲ್ಲ ಮತ್ತು ಸ್ಪಷ್ಟೀಕರಣ ಇಲ್ಲ ಎಂಬುದು. ಈ ಪೂರಕವಾದಂತಹ ಮಾಹಿತಿಯು ಅಧ್ಯಯನದಲ್ಲಿ ವಿಶ್ಲೇಷಣೆಗೆ ಸಹಾಯಕವಾದುದಾಗಿದೆ.

**ಶಿವಸ್ವಾಮಿ. ಜಿ.ಎಸ್,** ನಿರ್ದೇಶಕರು, ಪರಿಶಿಷ್ಠ ಪಂಗಡಗಳ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರ. ಇವರು ೦೭.೦೪.೨೦೧೧ ರಲ್ಲಿ ದೆಹಲಿಯ ವಿಜ್ಞಾನ ಭವನದಲ್ಲಿ ನಡೆದ ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನದ ಪ್ರಗತಿ ಪರಿಶೀಲನಾ ಸಭೆಯ ಭಾಗವಹಿಸಿ ದಿನಾಂಕ ೩೧.೦೩.೨೦೧೧ ರವರೆಗೆ ಕರ್ನಾಟಕದಲ್ಲಿನ ಪ್ರಗತಿಯನ್ನು ಇದರಲ್ಲಿ ದಾಖಲಿಸಿದ್ದಾರೆ. ಇದರ ಅನ್ವಯ ಕರ್ನಾಟಕದಲ್ಲಿ ೧೬೩೮೯೦ ಕ್ಲೇಮು ಅರ್ಜಿಗಳು ಬಂದಿದ್ದು ೬೫೨೨ ಅರ್ಜಿಗಳಿಗೆ ಹಕ್ಕು ಪತ್ರ ನೀಡಲಾಗಿದೆ. ೧೪೩೮೨೫ ಅರ್ಜಿಗಳು ತಿರಸ್ಕೃತಗೊಂಡಿವೆ. ಇದಕ್ಕೆ ಕಾರಣ ಅರ್ಜಿದಾರರು ಕ್ಲೇಮು ಕೋರಿದ ಸ್ಥಳದಲ್ಲಿ ವಾಸಿಸುತ್ತಿಲ್ಲ ಮತ್ತು ಭೂಮಿ ಸಾಗುವಳಿ ಮಾಡದೇ ಇರುವುದಾಗಿದೆ. ಇತರ ಪಾರಂಪರಿಕ ಅರಣ್ಯವಾಸಿ ಅರ್ಜಿದಾರರು ತಾವು ಅರಣ್ಯವಾಸಿಗಳು ಎಂಬುದಕ್ಕೆ ಪುರಾವೆ ಹೊದಗಿಸಿರುವುದಿಲ್ಲ. ಹಾಗೆಯೇ ಆದಿವಾಸಿ ಕ್ಲೇಮುದಾರರು ತಾವು ಅರಣ್ಯವಾಸಿಗಳು ಎಂಬುದಕ್ಕೆ ಸೂಕ್ತ ಪುರಾವೆಗಳನ್ನು ಹೊದಗಿಸಿರುವುದಿಲ್ಲ. ಒಂದು ಕುಟುಂಬದಲ್ಲಿ ಒಂದಕ್ಕಿಂತ ಹೆಚ್ಚು ಅರ್ಜಿಗಳು ಬಂದಿವೆ. ಮತ್ತು ಕೆಲವು ಕ್ಲೇಮುದಾರರು ಈಗಾಗಲೇ ಅರಣ್ಯ ಇಲಾಖೆಯಿಂದ ವಿವಿಧ ಯೋಜನೆಗಳಡಿ ಪುನರ್ವಸತಿಗೊಂಡಿರುತ್ತಾರೆ. ಸಮುದಾಯ ಹಕ್ಕಿಗಾಗಿ ೨೭೮೫ ಅರ್ಜಿಗಳು ಬಂದಿದ್ದು ಅವುಗಳಲ್ಲಿ ೨೦೯ ತಿರಸ್ಕೃತಗೊಂಡಿವೆ. ಉಳಿದ ೭೫೬ ಕ್ಲೇಮುಗಳನ್ನು ಪರಿಗಣಿಸಲಾಗಿದೆ. ಕರ್ನಾಟಕದಲ್ಲಿ ಯಾವುದೇ ಅರಣ್ಯ ಗ್ರಾಮಗಳಿಲ್ಲ ಹಾಗಾಗಿ ಕಂದಾಯ ಗ್ರಾಮವಾಗಿ ಪರಿವರ್ತಿಸುವ ಅವಶ್ಯಕತೆ ಇಲ್ಲ ಎಂಬುದನ್ನು ಇಲ್ಲಿ ದಾಖಲಿಸಲಾಗಿದೆ. ಈ ಎಲ್ಲಾ ಅಂಶಗಳು ಸಂಶೋಧನೆಗೆ ಮಾರ್ಗದರ್ಶಿಯಾಗಿವೆ.

**ಅಧಿಸೂಚನೆ** (೨೦೧೨) ಈಗಾಗಲೇ ಜಾರಿಯಾಗಿರುವ ಅರಣ್ಯ ಹಕ್ಕುಗಳ ಕಾಯಿದೆಯಲ್ಲಿನ ಕೆಲವು ತಿದ್ದುಪಡಿ ಅಂಶಗಳನ್ನು ಭಾರತ ಸರ್ಕಾರದ ಈ

ಅಧಿಸೂಚನೆಯಲ್ಲಿ ಪ್ರಕಟಿಸಲಾಗಿದೆ. ಇಲ್ಲಿ ಈ ಮೊದಲಿನ ಕಾಯಿದೆಯಲ್ಲಿದ್ದ ಕೆಲವು ಗೊಂದಲಗಳಿಗೆ ಪರಿಹಾರ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ವಾಸ್ತವಿಕ ಜೀವನೋಪಾಯ ಅಗತ್ಯತೆಗಳು, ಸಮುದಾಯ ಹಕ್ಕುಗಳು, ಸಮುದಾಯದ ಅರಣ್ಯ ಸಂಪನ್ಮೂಲದ ರೂಢಿಗತ ಸರಹದ್ದುಗಳ ರೂಪಿಸುವಿಕೆ, ಹಕ್ಕುಗಳ ಮಾನ್ಯತೆಯ ಪ್ರಕ್ರಿಯೆ. ಅರಣ್ಯ ಹಕ್ಕುಗಳನ್ನು ಹೊಂದಿದವರಿಗೆ ಕ್ಲೇಮು ತರುವಾಯ ಬೆಂಬಲ ಮತ್ತು ಆಸರೆ ನೀಡುವುದು. ವಲಸೆಗಾರರ ಕ್ಲೇಮುಗಳ ಸಲ್ಲಿಸುವಿಕೆ. ಸಮುದಾಯ ಅರಣ್ಯ ಹಕ್ಕುಗಳನ್ನು ಸಮುದಾಯ ಅರಣ್ಯ ಸಂಪನ್ಮೂಲ ಎಂದು ಪರಿಗಣಿಸಿರುವುದು. ಮುಂತಾದ ಅಂಶಗಳನ್ನು ಈ ತಿದ್ದುಪಡಿಯಲ್ಲಿ ಸೇರಿಸಲಾಗಿದೆ. ಪ್ರಸ್ತುತ ಅಧ್ಯಯನವು ಈ ತಿದ್ದುಪಡಿ ಆಧಾರದ ಮೇಲೆ ನೆಡೆದಿದೆ.

**ರಾಯ್ ಬರ್ಮನ್.ಬಿ.ಕೆ, (೨೦೦೬)** ಇವರು '*Draft National Tribal Policy of 2006 Creating Consternation*' ಎಂಬ ಶೀರ್ಷಿಕೆಯಡಿಯಲ್ಲಿ ಈ ಕಾಯಿದೆಯ ಲೋಪದೋಷಗಳನ್ನು ಎತ್ತಿ ದಾಖಲಿಸಿದ್ದಾರೆ. ಇವರು ಮುಖ್ಯವಾಗಿ ಜಮ್ಮು ಮತ್ತು ಕಾಶ್ಮೀರವನ್ನು ಕೇಂದ್ರವಾಗಿಟ್ಟುಕೊಂಡು ಈ ಲೇಖನ ರಚಿಸಿದ್ದಾರೆ. ಇಲ್ಲಿ ಎರೆಡು ದೇಶಗಳು, ಎರೆಡು ಸರ್ಕಾರಗಳು ಎರೆಡು ಸಂವಿಧಾನಗಳು, ಎರೆಡು ರೀತಿಯ ಜನರು ಇವರ ಮೇಲೆ ಭಯೋತ್ಪಾದನೆ ಇದೆ. ಇಂತಹದ್ದರಲ್ಲಿ ಮತ್ತೊಂದು ಭಯೋತ್ಪಾದನೆ ಈ ರಾಷ್ಟ್ರೀಯ ಆದಿವಾಸಿ ನೀತಿಯ ಕರಡು ಎಂದು ಆತಂಕ ವ್ಯಕ್ತಪಡಿಸಿದ್ದಾರೆ. ಈ ಕರಡು ನೀತಿ ಕೇವಲ ಹಳೆಯ ಮಧ್ಯವನ್ನು ಹೊಸ ಬಾಟಲಿಯಲ್ಲಿ ತುಂಬಿದಂತಿದೆ ಎಂದು ದಾಖಲಿಸಿದ್ದಾರೆ.

**ರಾಹುಲ್ ಬ್ಯಾನರ್ಜಿ (೨೦೦೭)** ಇವರು *Adivasis and Unjust Laws* ಎಂಬ ಲೇಖನದಲ್ಲಿ ದಾಖಲಿಸಿರುವಂತೆ. ೧೯೨೭ ರಲ್ಲಿ ಬ್ರಿಟಿಷರು ಭಾರತೀಯ ಅರಣ್ಯ ಕಾಯಿದೆಯನ್ನು ಜಾರಿಗೆ ತಂದಾಗ ಅಧೀಕೃತ ದಾಖಲೆ ಇಲ್ಲದವರು ಅರಣ್ಯ ಪ್ರದೇಶದ ಭೂಮಿ ಹೊಂದಲು ಅವಕಾಶವಿಲ್ಲದಂತೆ ಮಾಡಿದ್ದರು. ಆದರೆ ಆದಿವಾಸಿಗಳು ಖಾಸಗೀ ಭೂಮಿ ಪರಿಕಲ್ಪನೆ ಉಳ್ಳವರಾಗಿರಲಿಲ್ಲ. ಹೀಗಾಗಿ ಅವರ ಬಳಿ ಯಾವುದೇ ಭೂ ಒಡೆತನದ ದಾಖಲೆ ಇರಲಿಲ್ಲ. ಇಂತಹ ಅಂಶಗಳ ಕಡೆ ಗಮನಹರಿಸಬೇಕಾಗಿದೆ. ಪಂಚಾಯತ್ ಎಕ್ಸ್‌ಟೆನ್‌ಷನ್ ಶೆಡ್ಯೂಲ್ಡ್ ಏರಿಯಾ ಕಾಯಿದೆ ೧೯೯೬(ಪಿ.ಇ.ಎಸ್.ಎ) ಮತ್ತು ಪ್ರಸ್ತುತ ೨೦೦೬ ರ ಅರಣ್ಯ ಹಕ್ಕುಗಳ ಕಾಯಿದೆ ಇವು ಆದಿವಾಸಿಗಳಿಗೆ ಹೆಚ್ಚು ಅಧಿಕಾರ ಕೊಡುವ ನಿಟ್ಟಿನಲ್ಲಿ ಪ್ರಯತ್ನಿಸುತ್ತಿವೆ ಎಂಬಂತಹ ಅಂಶಗಳಿವೆ.

**ಮದುಸೂಧನ್.ಎಂ.ಡಿ, (೨೦೦೫)** ಇವರು *Of Rights and Wrongs: Wildlife Conservation and the Tribal Bill* ಎಂಬ ಲೇಖನದಲ್ಲಿ ಭಾರತದಾದ್ಯಂತ ಅರಣ್ಯ ಆಧಾರಿತ ಆದಿವಾಸಿಗಳಿಗೆ ಶತಮಾನಗಳಿಂದ ಕರಿನೆರಳ ಛಾಯೇ ಬೀರುತ್ತಲೇ

ಇದೆ. ವಸಹಾತು ಕಾಲದಲ್ಲಿ ಅಷ್ಟೇ ಅಲ್ಲದೆ ಭಾರತೀಯ ಸರ್ಕಾರ ಆಡಳಿತದಲ್ಲಿಯೂ ಆದಿವಾಸಿಗಳು ಇದರಿಂದ ತಮ್ಮ ಭೂಮಿ ಕಳೆದುಕೊಂಡರು. ಅಲ್ಲದೆ ತಮ್ಮ ಜೀವನೋಪಾಯ ಸಂಪನ್ಮೂಲಗಳನ್ನು ಕಳೆದುಕೊಂಡರು. ಜೊತೆಗೆ ದೊಡ್ಡ ದೊಡ್ಡ ಕೈಗಾರಿಕೆಗಳ ಸ್ಥಾಪನೆ, ವಾಣಿಜ್ಯೋದ್ದೇಶಿತ ಯೋಜನೆಗಳು, ಅರಣ್ಯದಲ್ಲಿನ ವಾಸ ನೆಲೆಯನ್ನು ಕಡಿಮೆಗೊಳಿಸುತ್ತಾ ಬಂದವು. ಅದೇ ವೇಳೆಗೆ ಹೆಚ್ಚು ಹೆಚ್ಚು ಬೇಟೆಗಾರಿಕೆಯಿಂದ ವನ್ಯಪ್ರಾಣಿಗಳ ಸಂತತಿ ವಿನಾಶದಂಚಿನತ್ತ ಸಾಗಿತು. ಕೃಷಿ ವಿಸ್ತರಣೆ ಮತ್ತು ಅಭಿವೃದ್ಧಿ ಯೋಜನೆಗಳೂ ಇದಕ್ಕೆ ಕಾರಣವಾದವು. ಆದರೆ ಆದಿವಾಸಿಗಳು ಮತ್ತು ಆದಿವಾಸಿಯೇತರ ಅರಣ್ಯ ಅವಲಂಬಿತರು ಅಳಿದುಳಿದ ಸ್ವಲ್ಪವೇ ಸ್ವಲ್ಪ ಅರಣ್ಯದ ಮೇಲೆ ಅವಲಂಬಿಸುವಂತಾಯಿತು. ಎಂಬ ಹಲವು ಅಂಶಗಳನ್ನು ವ್ಯಕ್ತಪಡಿಸಿದ್ದಾರೆ.

**ಅಜಿತ್ ಮೆನನ್** (೨೦೦೭) ಇವರು *Engaging with the Law on Adivasi Rights* ಎಂಬ ಲೇಖನದಲ್ಲಿ ಭಾರತದ ಸಂವಿಧಾನದಲ್ಲಿ ಆದಿವಾಸಿಗಳ ಸಂರಕ್ಷಣೆಗಾಗಿ ಇರುವ ಅವಕಾಶಗಳು, ಆದಿವಾಸಿಗಳ ಸಂರಕ್ಷಣೆಗೆ ಮತ್ತು ಅವರ ಹಕ್ಕುಗಳಿಗಾಗಿ ರಚಿಸಲ್ಪಟ್ಟ ಕಾಯಿದೆಗಳು ಹಾಗೂ ಇತರೆ ಕಾಯಿದೆಗಳಲ್ಲಿ ಆದಿವಾಸಿಗಳಿಗೆ ಕೊಡಮಾಡಲಾಗಿರುವ ಮಾನ್ಯತೆಗಳನ್ನು ಕುರಿತು ಹೇಳಿದ್ದಾರೆ.

**ವಿನಯ್ ಕುಮಾರ್ ಶ್ರೀವಾಸ್ತವ** (೨೦೦೮) ಇವರು Concept of 'Tribe' in the Draft National Tribal Policy ಎಂಬ ಲೇಖನದಲ್ಲಿ ಆದಿವಾಸಿ ಎಂದರೆ ಯಾರು? ಮತ್ತು ಆದಿವಾಸಿಗಳ ಪರಿಕಲ್ಪನೆ ಕುರಿತು ದಾಖಲಿಸಿದ್ದಾರೆ. ಈ ಎಲ್ಲಾ ಮಾಹಿತಿಗಳು ಆದಿವಾಸಿಗಳನ್ನು ನೋಡಬೇಕಾದ ದೃಷ್ಟಿಕೋನವನ್ನು ನೀಡುತ್ತವೆ.

**ಗೀತಾಂಜಯ್ ಸಾಹು** (೨೦೦೮) ಇವರು Mining in the Niyamgiri Hills and Tribal Rights ಎಂಬ ಲೇಖನದಲ್ಲಿ ಒರಿಸ್ಸಾ ಸರ್ಕಾರವು ಬಾಕ್ಸೈಟ್ ಗಣಿಗಾರಿಕೆಗೆ ಅನುವು ಮಾಡಿ ಕೊಟ್ಟಿದ್ದರಿಂದ, ಅಲ್ಲಿನ ಮೂಲನಿವಾಸಿಗಳಾದ ದೋಗ್ರಾ ಬುಡಕಟ್ಟಿನ ದೈನಂದಿನ ಬದುಕಿನ ಮೇಲೆ ಯಾವ ರೀತಿಯ ಪರಿಣಾಮ ಬೀರಿದೆ. ಮತ್ತು ಪರಿಸರ ಹೇಗೆ ನಾಶವಾಗುತ್ತಿದೆ. ಇತ್ಯಾದಿ ಅಂಶಗಳನ್ನು ದಾಖಲಿಸಲಾಗಿದೆ. ಈ ಎಲ್ಲಾ ಅಂಶಗಳು ಆದಿವಾಸಿಗಳಿಗೆ ಗಣಿಗಾರಿಕೆಯಿಂದ ಯಾವ ರೀತಿಯ ತೊಂದರೆ ಉಂಟಾಗುತ್ತದೆ. ಮತ್ತು ಬಂಡವಾಳಶಾಹಿಗಳು ಹೇಗೆ ಆದಿವಾಸಿಗಳ ಅನ್ನಕ್ಕೆ ಕಲ್ಲಾಗಿದ್ದಾರೆ ಎಂಬುದನ್ನು ಅರಿಯಬಹುದಾಗಿದೆ.

**ಶಂಕರ್ ಗೋಪಾಲಕೃಷ್ಣನ್** (೨೦೦೮) ಇವರು Forest Rights ಎಂಬ ಲೇಖನದಲ್ಲಿ ಅರಣ್ಯ ಹಕ್ಕುಗಳನ್ನು ಪಡೆಯಲು ಹೊಂದಿರಬೇಕಾದ ಪ್ರಾಥಮಿಕ ಅರ್ಹತೆಯಾದ ಕನಿಷ್ಠ ನಿವಾಸಿ ದೃಡೀಕರಣದ ಕುರಿತು ಚರ್ಚಿಸಿದ್ದಾರೆ. ಇಲ್ಲಿ ಆದಿವಾಸಿಯೇತರರು ಕನಿಷ್ಠ 75

ವರ್ಷ ಒಂದು ಸ್ಥಳದಲ್ಲಿ ವಾಸವಾಗಿದ್ದರೆ ಅಂತಹವರನ್ನು ಒಕ್ಕಲೆಬ್ಬಿಸಬಾರದು ಎಂಬುದನ್ನು ಮತ್ತು ಆದಿವಾಸಿಗಳ ಕನಿಷ್ಠ ಅರ್ಹತೆ ಕುರಿತು ದಾಖಲಿಸಲಾಗಿದೆ. ಇಲ್ಲಿ 75 ವರ್ಷ ಎಂಬುದನ್ನು ಅರಣ್ಯ ಇಲಾಖೆ ಹೇಗೆ ಅರ್ಥೈಸಿಕೊಂಡಿದೆ. ಮತ್ತು ಪರಿಶಿಷ್ಟ ಪಂಗಡಗಳ ಮಂತ್ರಾಲಯ ಹೇಗೆ ಅರ್ಥೈಸುತ್ತದೆ. ಎಂಬುದನ್ನು ಸೂಕ್ಷ್ಮವಾಗಿ ಗಮನಿಸಲು ಸಹಕಾರಿಯಾಗಿದೆ.

**ಸಂಪಾದಕೀಯ (Economic and Political weekly ೨೦೦೭)** ಸಂಪಾದಕರು Tribal Rights: Promises and Reality ಎಂಬ ಲೇಖನದಲ್ಲಿ 'ಆದಿವಾಸಿ ಅರಣ್ಯ ಹಕ್ಕುಗಳ ಕಾಯಿದೆಯಡಿ' ಆದಿವಾಸಿಗಳಿಗೆ ಕಾನೂನಿನಲ್ಲಿ ಕಲ್ಪಿಸಲಾಗಿರುವ ಹಕ್ಕುಗಳು ಹಾಗೂ ಅವರಿಗೆ ನಿಜವಾಗಿಯೂ ದೊರಕುತ್ತಿರುವ ಹಕ್ಕುಗಳ ಕುರಿತು ಅಂಕಿ ಅಂಶಗಳ ಸಮೇತ ಮಾಹಿತಿ ದಾಖಲಿಸಿದ್ದಾರೆ. ಇಲ್ಲಿ ನೀಡಿರುವ ಅಂಕಿ ಅಂಶಗಳು ಪ್ರಸ್ತುತ ಅಧ್ಯಯನದೊಂದಿಗೆ ಹೋಲಿಸಲು ಮತ್ತು ವಿಶ್ಲೇಷಿಸಲು ಸಹಕಾರಿಯಾಗಿವೆ.

**ತಪನ್ ಕುಮಾರ್ ಮಿಶ್ರ (೨೦೦೬)** ಇವರು Forest Policy and Deprivation of Forest Dwellers in Independent India: The Story of the Baidharas and Other Forest Dependent Communities ಎಂಬ ಲೇಖನದಲ್ಲಿ ಸ್ವಾತಂತ್ರ ಭಾರತದಲ್ಲಿ ಅರಣ್ಯ ನೀತಿ ಮತ್ತು ಅರಣ್ಯವಾಸಿಗಳ ಪದಚ್ಯುತಿ ಕುರಿತು ದಾಖಲಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಬೈದಾರರು ಮತ್ತು ಇತರೆ ಅರಣ್ಯ ಅವಲಂಬಿತರ ಕುರಿತ ಮಾಹಿತಿ ಇದೆ. ಪ್ರಸ್ತುತ ಅಧ್ಯಯನ ವ್ಯಾಪ್ತಿಗೆ ಒಳಪಡುವ ಸೋಲಿಗರು, ಯರವರು, ಜೇನುಕುರುಬರು, ಬೆಟ್ಟಕುರುಬರು ಇವರ ಅರಣ್ಯವಾಸಿ ಪದಚ್ಯುತಿ ಹೇಗಾಯಿತು ಎಂಬ ಅಂಶಗಳನ್ನು ಕಂಡುಕೊಳ್ಳಲು ಮಾರ್ಗದರ್ಶಿಯಾಗಿದೆ.

**ಸಾಗರಿ ಆರ್ ರಾಮದಾಸ್ (೨೦೦೯)** ಇವರು Women, Forest spaces and the Law: Transgressing the Boundaries ಎಂಬ ಲೇಖನದಲ್ಲಿ ಅರಣ್ಯ ಹಕ್ಕುಗಳ ಕಾಯಿದೆಯಲ್ಲಿ ಪರಿಸರ ನ್ಯಾಯ ಮತ್ತು ಲಿಂಗ ಸಮಾನತೆಗೆ ಅವಕಾಶ ಕಲ್ಪಿಸುವಾಗ ಯಾವ ಕ್ರಮ ಕೈಗೊಳ್ಳಲಾಗುತ್ತಿದೆ ಎಂಬುದನ್ನು ಇಲ್ಲಿ ದಾಖಲಿಸಿದ್ದಾರೆ. ಪ್ರಸ್ತುತ ಅಧ್ಯಯನ ವ್ಯಾಪ್ತಿಯಲ್ಲಿ ಲಿಂಗ ಸಮಾನತೆಗೆ ಒತ್ತು ನೀಡಲಾಗಿದೆಯೇ? ಮಹಿಳೆಯೇ ಕುಟುಂಬದ ಯಜಮಾನಿಯಾದ ಸಂದರ್ಭದಲ್ಲಿ ವೈಯಕ್ತಿಕ ಮತ್ತು ಸಮುದಾಯ ಹಕ್ಕು ವಿತರಿಸುವಾಗ ಯಾವ ಕ್ರಮ ಕೈಗೊಳ್ಳಲಾಗಿದೆ. ಎಂಬುದನ್ನು ಗಮನಿಸಲು ಇದು ನಿರ್ದೇಶಕವಾಗಿದೆ.

**ವರ್ಷಾ ಗಂಗೂಲಿ (೨೦೦೫)** ಇವರು Displacement, Rehabilitation and Resettlement: The Case of Maldhari Families of Gir Forest ಎಂಬ ಲೇಖನದಲ್ಲಿ ಸ್ಥಳಾಂತರ, ಪುನರ್ವಸತಿ ಮತ್ತು ಮರುನೆಲೆಗೊಳಿಸುವುಕೆ ಒಂದು ಮಹತ್ವದ ಮತ್ತು ಅತೀ ಸೂಕ್ಷ್ಮ ಕಾರ್ಯವಾಗಿದೆ. ಇಂತಹ ಪ್ರಕ್ರಿಯೆಗೆ ಭಾರತದ ಆದಿವಾಸಿಗಳು ಮೇಲಿಂದ ಮೇಲೆ ಒಳಗಾಗುತ್ತಿದ್ದಾರೆ. ಇಲ್ಲಿ ಗುಜರಾತಿ ಗಿರ್ ಅರಣ್ಯದಲ್ಲಿನ ಮಾಲ್ದಾರಿ ಕುಟುಂಬಗಳನ್ನು ಸ್ಥಳಾಂತರ, ಪುನರ್ವಸತಿ ಮತ್ತು ಮರುನೆಲೆಗೊಳಿಸುವುದನ್ನು ಯಾವ ನಿಟ್ಟಿನಲ್ಲಿ ಕೈಗೊಳ್ಳಲಾಗಿದೆ. ನಿಯಮಗಳು ಏನು ಹೇಳುತ್ತವೆ ಇತ್ಯಾದಿ ಅಂಶಗಳನ್ನು ಚರ್ಚಿಸುತ್ತಾ ದಾಖಲಿಸಿದ್ದಾರೆ. ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ಪುನರ್ವಸತಿ ಅಂಶಗಳನ್ನು ಗಮನಿಸಲು ಮತ್ತು ಪುನರ್ವಸತಿಗೊಂಡವರ ಸಮುದಾಯ ಅರಣ್ಯ ಹಕ್ಕುಗಳು ಮತ್ತು ವೈಯಕ್ತಿಕ ಹಕ್ಕುಗಳ ಕುರಿತು ಅಧ್ಯಯನ ಕೈಗೊಳ್ಳಲು ಇವುಗಳ ಅಧ್ಯಯನ ಮಹತ್ವ ಪೂರ್ಣವಾಗಿದ್ದು ಮಾರ್ಗದರ್ಶಿಯಾಗಿದೆ.

**ಶರಚ್ಚಂದ್ರ ಲೇಲೇ (೨೦೦೭)** A 'Defining' Moment for Forests? ಎಂಬ ಲೇಖನದಲ್ಲಿ ಮುಖ್ಯವಾಗಿ ಅರಣ್ಯದ ಅರ್ಥ ಕುರಿತು ಹೆಚ್ಚು ಚರ್ಚಿಸಲಾಗಿದೆ. ಈ ಸಂದರ್ಭದಲ್ಲಿ ಲೇಖಕರು ಈ ಹಿಂದಿನ ಕಾಯಿದೆಗಳು ಮತ್ತು ಅರಣ್ಯ ಸಂರಕ್ಷಕರ ಮಾತುಗಳನ್ನು ಇಲ್ಲಿ ದಾಖಲಿಸಿದ್ದಾರೆ. ಅರಣ್ಯ ಮತ್ತು ಆದಿವಾಸಿಗಳ ಒಡನಾಟವನ್ನು ಅರ್ಥೈಸಿಕೊಳ್ಳವಲ್ಲಿ ಇದು ಪೂರಕವಾಗಿದೆ.

**ಶರದ್ ಕುಲಕರ್ಣಿ (೧೯೮೭)** ಇವರ Forest Legislation and Tribals: Comments on Forest Policy Resolution ಎಂಬ ಲೇಖನದಲ್ಲಿ ಬ್ರಿಟಿಷರ ಆಡಳಿತದ ಅವಧಿಯಲ್ಲಿ ಕಾಲಕಾಲಕ್ಕೆ ಅರಣ್ಯದ ಮೇಲೆ ಯಾವ ಯಾವ ಕಾಯಿದೆಗಳನ್ನು ತರಲಾಯಿತು. ಪ್ರಸ್ತುತ ಆದಿವಾಸಿ ನೀತಿ ನೀಡಿರುವ ಭರವಸೆ ಏನು? ಇದು ಈಡೇರಬೇಕಾದರೆ ಅರಣ್ಯದ ಮೇಲೆ ನಿರೂಪಿಸಲಾಗಿರುವ ಕಾಯಿದೆಗಳು ಹೇಗೆ ತಮ್ಮ ಪ್ರಭಾವ ಬೀರುತ್ತವೆ. ಎಂಬ ಅಂಶಗಳನ್ನು ಚರ್ಚಿಸುತ್ತಾ ದಾಖಲಿಸಿದ್ದಾರೆ. ಇದು ಅರಣ್ಯ ಹಕ್ಕುಗಳ ಕಾಯಿದೆಯನ್ನು ನೋಡಬೇಕಾದ ದೃಷ್ಟಿಕೋನವನ್ನು ತಿಳಿಸುತ್ತದೆ. ಕಾಯಿದೆಯ ಅನುಷ್ಠಾನದಲ್ಲಿನ ತೊಡಕುಗಳನ್ನು ವಿಶ್ಲೇಷಿಸಲು ಸಹಕಾರಿಯಾಗಿದೆ. ಅದೇ ರೀತಿ ಇದೇ ಲೇಖಕರ ಮತ್ತೊಂದು ಲೇಖನ **Forests: Law versus Policy (೧೯೮೯)** ಇದರಲ್ಲಿ ದಾಖಲಿಸಿರುವಂತೆ. ಭಾರತ ಸರ್ಕಾರವು ಕೈಗೊಳ್ಳುವ ದೊಡ್ಡ ದೊಡ್ಡ ಯೋಜನೆಗಳು ಸ್ವಾಭಾವಿಕ ಅರಣ್ಯಕ್ಕೆ ದೊಡ್ಡ ಮಟ್ಟದಲ್ಲಿ ಹಾನಿಯನ್ನುಂಟು ಮಾಡುತ್ತಿವೆ. ಆದಾಗ್ಯೂ ಅವುಗಳಿಗೆ ಬಹು ಬೇಗ ಅನುಮತಿ ಸಿಗುತ್ತದೆ. ಆದರೆ ಆದಿವಾಸಿಗಳು ಮತ್ತು ಗ್ರಾಮೀಣ ಭಾಗದ ಬಡ ಜನರಿಗೆ ಸ್ವಲ್ಪ ಮಟ್ಟಿನ ಸಹಾಯಕಾರಿಯಾಗಬಹುದಾದ ಯೋಜನೆಗಳಿಗೆ ಅನುಮತಿ ಯಾಕೆ ಸಿಗುವುದಿಲ್ಲ. ಎಂಬ ಅಂಶಗಳ ಕುರಿತು ಹೇಳುತ್ತದೆ.

ಇದು ನೇರವಾಗಿ ಬಂಡವಾಳಶಾಹಿಗಳು ಮತ್ತು ಪ್ರಭುತ್ವದ ಹಿಡಿತವನ್ನು ಎತ್ತಿ ತೋರಿಸುತ್ತದೆ. ಅಲ್ಲದೆ ಅಂಚಿನ ಸಮುದಾಯದವರು ತಾವೇ ಚುನಾವಣೆ ಮೂಲಕ ಆಯ್ಕೆ ಮಾಡಿದ ತಮ್ಮ ಪ್ರತಿನಿದಿಗಳಿಂದ ಹೇಗೆ ತುಳಿತಕ್ಕೊಳಗಾಗುತ್ತಾರೆ. ಎಂಬುದನ್ನೂ ದಾಖಲಿಸಿರುವುದು ವೈಚಾರಿಕವಾಗಿ ಆಲೋಚಿಸಲು ಮಾರ್ಗದರ್ಶಿಯಾಗಿದೆ.

**ಅಮಿತ್ ಬಾವಿಸ್ಕರ್** (೧೯೯೪) ಇವರು Fate of the Forest: Conservation and Tribal Rights ಲೇಖನದಲ್ಲಿ ಭವಿಷ್ಯದ ಭಾರತವು ಆದಿವಾಸಿಗಳಿಲ್ಲದ ಭಾರತವಾಗಬಾರದು. ಅದಕ್ಕಾಗಿ ಆದಿವಾಸಿಗಳ ಅರಣ್ಯ ಹಕ್ಕುಗಳನ್ನು ನೀಡುವುದು ತಪ್ಪಲ್ಲ. ಹಾಗಾಗಿ ಇನ್ನೂ ಉತ್ತಮ ಆದಿವಾಸಿ ಅಭಿವೃದ್ಧಿ ಯೋಜನೆಗಳನ್ನು ರೂಪಿಸಬೇಕಿದೆ. ಮತ್ತು ಅವುಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದು ಸರ್ಕಾರದ ಕೆಲಸ ಎಂದು ದಾಖಲಿಸಿದ್ದಾರೆ. ಆದಿವಾಸಿಗಳ ಉಪಯುಕ್ತತೆ ಮತ್ತು ಯಾವತ್ತೂ ಅವರ ಪ್ರಸ್ತುತತೆಯನ್ನು ಅಧ್ಯೆಸಿಕೊಳ್ಳುವಲ್ಲಿ ಮತ್ತು ಕಾಯಿದೆಯ ಅನುಷ್ಠಾನದ ಪ್ರಸ್ತುತತೆಯನ್ನು ಸಾದರಪಡಿಸಲು ಮತ್ತು ಪ್ರತಿಪಾದಿಸಲು ಅಧ್ಯಯನಕಾರರಿಗೆ ಸಹಕಾರಿಯಾಗಿದೆ.

**ವಿದ್ಯಾ ದಾಸ್** (೧೯೯೬) ರವರು Minor Forest Produce and Rights of Tribals ಎಂಬ ಲೇಖನದಲ್ಲಿ ದಾಖಲಿಸಿರುವಂತೆ ಸರ್ಕಾರವು ಮೇಲ್ನೋಟಕ್ಕೆ ಜೀವನೋಪಾಯ ಅರಣ್ಯ ಉಪ ಉತ್ಪನ್ನಗಳನ್ನು ಆದಿವಾಸಿಗಳಿಗೆ ದೊರಕಿಸಿಕೊಡುವ ನೆಪ ಮಾಡುತ್ತಿದೆ. ಆದರೆ ಆದಿವಾಸಿಗಳ ನೈಜ ಸಮಸ್ಯೆಗಳ ಕಡೆ ಗಮನಹರಿಸಿಲ್ಲ. ಅರಣ್ಯ ಉಪ ಉತ್ಪನ್ನಗಳನ್ನು ಸಂಗ್ರಹಿಸಲು ಮತ್ತು ಕೂಡಿಟ್ಟು ಕೊಳ್ಳಲು ಹಾಗೂ ಮಾರಾಟ ಮಾಡುವಲ್ಲಿ ಆದಿವಾಸಿಗಳು ಎದುರಿಸುತ್ತಿರುವ ನಿಜವಾದ ಸಮಸ್ಯೆಗಳನ್ನು ಇಲ್ಲಿ ದಾಖಲಿಸಿದ್ದಾರೆ. ಇದು ಪ್ರಸ್ತುತ ಅಧ್ಯಯನ ವ್ಯಾಪ್ತಿಯಲ್ಲಿ ಅರಣ್ಯ ಹಕ್ಕುಗಳ ಅನುಷ್ಠಾನದ ಪರಿಸ್ಥಿತಿಯನ್ನು ಹೋಲಿಸಿ ನೋಡಲು ಸಹಕಾರಿಯಾಗಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನ ವ್ಯಾಪ್ತಿಯಲ್ಲಿ ಐ.ಟಿ.ಡಿ.ಪಿ ಹೇಗೆ ಕೆಲಸ ಮಾಡುತ್ತಿದೆ ಎಂದು ತಿಳಿದುಕೊಳ್ಳಲು ಮತ್ತು ಆ ನಿಟ್ಟಿನಲ್ಲಿ ಆಲೋಚಿಸಲು ಸಹಕಾರಿಯಾಗಿದೆ.

**ಅಸ್ಮಿತ ಕಬ್ರ** (೧೯೯೬) ರವರು Displacement and Rehabilitation of an Adivasi Settlement: Case of Kuno Wildlife Sanctuary, Madhya Pradesh ಈ ಲೇಖನದಲ್ಲಿ 'ಆದಿವಾಸಿಗಳನ್ನು ಸ್ಥಳಾಂತರಿಸಿದಾಗ ಅವರ ಪುನರ್ವಸತಿ ಹೇಗಿರಬೇಕು, ಸರಿಯಾದ ಪುನರ್ವಸತಿ ಮಾಡದಿದ್ದರೆ ಆದಿವಾಸಿಗಳ ಜೀವನೋಪಾಯದ ಮೇಲೆ ಯಾವ ರೀತಿ ವ್ಯತಿರಿಕ್ತ ಪರಿಣಾಮ ಬೀರುತ್ತದೆ ಎಂಬುದನ್ನು ದಾಖಲಿಸಿದ್ದಾರೆ. ಇದು ಅಧ್ಯಯನಕಾರರಿಗೆ ಪುನರ್ವಸತಿ ಕಾಲೊನಿಗಳ

ಜನರ ಬದುಕು ಮತ್ತು ಬವಣೆಗಳನ್ನು ಅರಿಯಲು ಸಹಕಾರಿಯಾಗಿದೆ. ಪುನರ್ವಸತಿಗೊಂಡ ಆದಿವಾಸಿಗಳು ತೊತ್ತಿನ ಚೀಲದ ಮೂಲವೇ ತುಂಡರಿಸಲ್ಪಟ್ಟಾಗ ಕೇವಲ ಆರ್ಥಿಕವಾಗಿಯಲ್ಲದೆ, ಭಾವನಾತ್ಮಕ ಮತ್ತು ಸಾಮಾಜಿಕ ಹಾಗೂ ಸಾಂಸ್ಕೃತಿಕವಾಗಿ ಅನುಭವಿಸುವ ನೋವುಗಳಿಗೆ ಸಹಾನುಭೂತಿಯಿಂದ ಸ್ಪಂದಿಸಲು ಮತ್ತು ರಚನಾತ್ಮಕವಾಗಿ ಆಲೋಚಿಸಿ ಸಲಹೆ-ಸೂಚನೆಗಳನ್ನು ಕಂಡುಕೊಳ್ಳುವಲ್ಲಿ ಪರಿಣಾಮಕಾರಿಯಾಗಿದೆ.

**ಪಂಕಜ್ ಶೆಕ್ಸಾರಿಯ** (೨೦೦೭) ರವರು Conservation in India and the Need to Think beyond 'Tiger v/s Tribal' ಈ ಲೇಖನದಲ್ಲಿ ಆದಿವಾಸಿ ನೀತಿ ಮತ್ತು ಹುಲಿ ಯೋಜನೆ ಹೇಗೆ ಪರಸ್ಪರ ವಿರುದ್ಧ ಗುರಿ ಇಟ್ಟು ಕೊಂಡು ರಚಿಸಲ್ಪಟ್ಟಿವೆ. ಹುಲಿ ಯೋಜನೆ ಇರುವೆಡೆ ಆದಿವಾಸಿ ನೀತಿಯನ್ನು ಅನುಷ್ಠಾನಗೊಳಿಸುವಲ್ಲಿ ಎದುರಾಗುವ ಅಡೆ ತಡೆಗಳೇನು? ಈ ನಿಟ್ಟಿನಲ್ಲಿ ಆದಿವಾಸಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹೇಗೆ ನಿರೂಪಿಸಬೇಕು. ನಿಯಮಗಳು ಏನು ಹೇಳುತ್ತವೆ. ಇತ್ಯಾದಿ ಅಂಶಗಳನ್ನು ದಾಖಲಿಸಿದ್ದಾರೆ. ಇಲ್ಲಿ ಇತರೆ ಯಾವುದೇ ಕಾಯಿದೆಗಳಿದ್ದಾಗ್ಯೂ ಅರಣ್ಯ ಹಕ್ಕುಗಳ ಕಾಯಿದೆ ಯಾವ ರೀತಿ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತದೆ ಎಂಬುದನ್ನೂ ದಾಖಲಿಸಿದೆ.

**ರಾಹುಲ್ ಸೇನ್** (೧೯೯೨) ಇವರು Tribal Policy of India ಈ ಲೇಖನದಲ್ಲಿ ಮುಖ್ಯವಾಗಿ ಭಾರತದಲ್ಲಿ ಆದಿವಾಸಿ ನೀತಿ ಹೇಗೆ ಬೆಳೆದು ಬಂದಿತು. ಅದಕ್ಕೆ ಹಿನ್ನೆಲೆ ಏನು? ಆದಿವಾಸಿ ನೀತಿಗಳ ರಚನೆಯಲ್ಲಿ ಸ್ವಾತಂತ್ರ್ಯ ಪೂರ್ವ ಮತ್ತು ನಂತರ ವಿವಿಧ ಕಾಯಿದೆಗಳಲ್ಲಿ ಆದಿವಾಸಿಗಳ ಕುರಿತು ಹೇಳಿರುವ ಅಂಶಗಳನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಇದು ಆದಿವಾಸಿಗಳ ಮೇಲೆ ರಚಿಸಲ್ಪಟ್ಟ ವಿವಿಧ ಕಾಯಿದೆಗಳನ್ನು ಆಯಾ ಕಾಲಗಟ್ಟದ ಹಿನ್ನೆಲೆಯಲ್ಲಿ ಅರ್ಥೈಸಿಕೊಳ್ಳಲು ಸಹಕಾರಿಯಾಗಿದೆ.

**ಸಾಗರ್ ಪ್ರೀತ್** (೧೯೯೪) ಇವರು Tribal Problems: A Gandhian Perspective ಎಂಬ ಲೇಖನದಲ್ಲಿ ಆದಿವಾಸಿಗಳ ಸಮಸ್ಯೆಗಳಿಗೆ ಗಾಂಧೀಜಿಯವರ ದೃಷ್ಟಿಯಲ್ಲಿ ಪರಿಹಾರಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಿದ್ದಾರೆ. ವೇರಿಯರ ಎಲ್ವಿನ್ ಮತ್ತು ಠಕ್ಕರ್ ಬಾಪಾ ಇವರು ಗಾಂಧೀಜಿಯವರ ಅನುಯಾಯಿಗಳಾಗಿದ್ದರೂ ಕೂಡ ಆದಿವಾಸಿಗಳ ಸಮಸ್ಯೆಗಳಿಗೆ ನಿರ್ದಿಷ್ಟ ಪರಿಹಾರಗಳನ್ನು ನೀಡಿರುವುದಿಲ್ಲ. ಅಷ್ಟೇ ಏಕೆ ಗಾಂಧೀಜಿಯವರೂ ಆದಿವಾಸಿಗಳ ಸಮಸ್ಯೆಗಳಿಗೆ ಸಮಗ್ರ ಮಾರ್ಗ ತೋರಿಸಿರುವುದಿಲ್ಲ ಎಂಬುದನ್ನು ಇಲ್ಲಿ ದಾಖಲಿಸಿದ್ದಾರೆ. ಆದಾಗ್ಯೂ ಇಲ್ಲಿ ಲೇಖಕರು ಗಾಂಧೀಜಿಯವರ ದೃಷ್ಟಿಯಲ್ಲಿ ಆದಿವಾಸಿಗಳ ಸಮಸ್ಯೆಗಳು ಮತ್ತು ಅವುಗಳಿಗೆ ಪರಿಹಾರಗಳನ್ನು ಚರ್ಚಿಸುವ ಪ್ರಯತ್ನ ಮಾಡಿದ್ದಾರೆ ಈ ಅಂಶಗಳು ಪ್ರಸ್ತುತ

ಅಧ್ಯಯನದಲ್ಲಿ ಆದಿವಾಸಿಗಳ ಸಮಸ್ಯೆಗಳ ಆಂತರ್ಯವನ್ನು ಅರಿಯುವ ನಿಟ್ಟಿನಲ್ಲಿ ಉಪಯೋಗಕಾರಿಯಾಗಿದೆ. ಠಕ್ಕರ್ ಬಾಪಾ, ಬಾಬಾ ಸಾಹೇಬ್ ಅಂಬೇಡ್ಕರ್, ಮಹಾತ್ಮ ಗಾಂಧೀಜಿ ಇವರು ಆದಿವಾಸಿಗಳ ಸಮಸ್ಯೆಗಳನ್ನು ಹೇಗೆ ಅರ್ಥೈಸಿಕೊಂಡಿದ್ದರು. ಯಾವ ಪರಿಹಾರ ಮಾರ್ಗಗಳನ್ನು ಸೂಚಿಸಿದ್ದರು. ಎಂಬುದನ್ನು ಪರಾಮರ್ಶಿಸಿ ಪಸ್ತುತ ಅಧ್ಯಯನ ಸಂದರ್ಭದಲ್ಲಿ ಕಾಯಿದೆ ಅನುಷ್ಠಾನಕ್ಕೆ ಇವರ ಕೊಡುಗೆಗಳನ್ನು ನಾವು ಹೇಗೆ ಬಳಸಿಕೊಳ್ಳಬಹುದು ಎಂಬುದರ ಅನ್ವಯವನ್ನು ಕಂಡುಕೊಳ್ಳಲು ಇದು ಮಾರ್ಗಸೂಚಿಯಾಗಿದೆ.

**Pierre Oberling (1970)** ಇವರ British Tribal Policy In Southern Persia 1906-1911ಎಂಬ ಲೇಖನವು, ಕಾಯಿದೆಗಳ ರಚನೆಯ ಸಂದರ್ಭದಲ್ಲಿ ಇತರೆ ದೇಶಗಳ ಕಾಯಿದೆಗಳು ನಮ್ಮ ದೇಶದ ಕಾಯಿದೆ ರಚನೆಯ ಮೇಲೆ ಹೇಗೆ ಪ್ರಭಾವ ಬೀರುತ್ತವೆ. ಇವು ನಮ್ಮ ದೇಶದ ಜನರಿಗೆ ಮಾರಕವೋ? ಪೂರಕವೋ? ಎಂಬುದನ್ನು ಅರಿಯಲು ಸಹಕಾರಿಯಾಗಿದೆ. ಇಲ್ಲಿ ಲೇಖಕರು ೧೯೦೬ ರಿಂದ ೧೯೧೧ ರ ನಡುವೆ ಬ್ರಿಟಿಷರು ದಕ್ಷಿಣ ಪರ್ಷಿಯಾದಲ್ಲಿ ಯಾವ ರೀತಿಯ ಆದಿವಾಸಿ ನೀತಿಗಳನ್ನು ನಿರೂಪಿಸಿದ್ದರು. ಮತ್ತು ಅದಕ್ಕೆ ಕಾರಣಗಳೇನು? ಎಂಬುದನ್ನು ಚರ್ಚಿಸಿದ್ದಾರೆ. ಹಾಗಾಗಿ ಯಾವುದೇ ದೇಶದ ಕಾನೂನುಗಳನ್ನು ಎರವಲಾಗಿ ಪಡೆಯುವ ಮುನ್ನ ಅದರ ಸಾಧಕ ಬಾಧಕಗಳನ್ನು ಆಲೋಚಿಸಬೇಕಾಗುತ್ತದೆ ಎಂಬುದನ್ನು ದಾಖಲಿಸಿದ್ದಾರೆ. ಪ್ರಸ್ತುತ ಕಾಯಿದೆಯ ರಚನೆಯು ಯಾವ ಹಿನ್ನೆಲೆಯಲ್ಲಿ ರಚಿಸಲ್ಪಟ್ಟಿರಬಹುದು ಎಂಬುದರ ಸಂಶೋಧನೆಗೆ ಇದು ಕೈಗನ್ನಡಿಯಾಗಿದೆ.

**ಮಹದೇವ.ಆರ್, (೨೦೦೬)** 'ಸೋಲಿಗ ಜನಾಂಗದ ಸಾಂಪ್ರದಾಯಿಕ ಕುಲ ಮತ್ತು ನ್ಯಾಯ' ಇವುಗಳನ್ನು ಬಲಗೊಳಿಸುವ ಕಾರ್ಯಾಗಾರ. ಇದು ಕಾರ್ಯಾಗಾರದ ವರದಿ. ಈ ಕಾರ್ಯಾಗಾರದಲ್ಲಿ ಸೋಲಿಗರಲ್ಲಿರುವ ವಿವಿಧ ಕುಲಗಳ ಜವಾಬ್ದಾರಿ ಕುರಿತು ಚರ್ಚಿಸಲಾಗಿದೆ. ಹಾಗೆಯೇ ಕಾಡಿನ ಸಂರಕ್ಷಣೆಯಲ್ಲಿ ಕುಲದ ಪಾತ್ರ ಕುರಿತು ಹಿರಿಯರು ತಮ್ಮ ಅನುಭವಗಳನ್ನು ತಿಳಿಯಪಡಿಸಿದ್ದಾರೆ. ಅದರಂತೆ ಸೋಲಿಗರು ಕಾಡನ್ನು ದೇವರೆಂದು ಪರಿಗಣಿಸುತ್ತಿದ್ದರು. ಜೊತೆಗೆ ಕೆಲವೊಂದು ಪ್ರದೇಶವನ್ನು ನಿಷೇಧಿತ ಪ್ರದೇಶವೆಂದು ಗುರುತಿಸಿ ಅಲ್ಲಿ ಯಾರೂ ಸಹ ಒಳಗೆ ಹೋಗುವುದು, ಮರ ಕಡಿಯುವುದು, ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹಿಸುವುದನ್ನು ಮಾಡುತ್ತಿರಲಿಲ್ಲ. ಇಂತಹ ನಿಷೇಧಿತ ಪ್ರದೇಶದ ಹಣ್ಣು ಹಂಪಲನ್ನು ಪ್ರಾಣಿ ಪಕ್ಷಿಗಳು ತಿಂದು ಬೇರೆಡೆ ಅವುಗಳನ್ನು ಹರಡುತ್ತಿದ್ದುದರಿಂದ ಕಾಡು ಅಭಿವೃದ್ಧಿಯಾಗುತ್ತಿತ್ತು. ಇಂತಹ ಹಲವು ಅಂಶಗಳನ್ನು ದಾಖಲಿಸಲಾಗಿದೆ. ಆದಿವಾಸಿಗಳು ಕಾಡನ್ನು ವಿನಾಶ ಮಾಡುತ್ತಾರೆ ಎಂದು ಹೇಳುವ ಕೆಲವು ಅರಣ್ಯ ಇಲಾಖೆ ಅಧಿಕಾರಿಗಳಿಗೆ ಇದು ಉತ್ತರವೆನಿಸುತ್ತದೆ. ಈ ವರದಿಯ ಅಧ್ಯಯನವು ಪ್ರಸ್ತುತ ಸಂಶೋಧನೆಗೆ ಒಂದು ಮಾರ್ಗದರ್ಶಿಯಂತಿದೆ.

**ಜಯದೇವ.ಜಿ.ಎಸ್, (೨೦೧೨)** ಇವರ ಅಪ್ರಕಟಿತ ಲೇಖನ. ಇದಕ್ಕೆ ತಲೆಬರಹ ಕೂಡ ನೀಡಿಲ್ಲ. ಲೇಖಕರು ಹಳೆಯ ತಲೆಮಾರಿನ ಸೋಲಿಗ ಸಮುದಾಯವನ್ನು ಭೇಟಿ ಮಾಡಿ ಅವರ ಅನುಭವಗಳನ್ನು ಇಲ್ಲಿ ದಾಖಲಿಸಿದ್ದಾರೆ. ಸೋಲಿಗರ ಆಹಾರ ಪದ್ಧತಿಯಲ್ಲಿನ ಬದಲಾವಣೆಗೆ ಅರಣ್ಯ ಸಂರಕ್ಷಣೆ ಕಾಯಿದೆ ಮತ್ತು ಅರಣ್ಯ ಇಲಾಖೆ ಸಿಬ್ಬಂದಿ ಹೇಗೆ ಕಾರಣರಾಗಿದ್ದಾರೆ. ಅರಣ್ಯ ಇಲಾಖೆಯವರ ಭಯದಿಂದಾಗಿ ಅವರ ಪಾರಂಪರಿಕ ಜ್ಞಾನ ಹೇಗೆ ನಾಶವಾಗುತ್ತಿದೆ. ಸರ್ಕಾರಿ ಯೋಜನೆಗಳು ಆದಿವಾಸಿಗಳ ಆಹಾರವನ್ನು ಕಿತ್ತುಕೊಂಡ ಪರಿ ಜೀವನ ಪದ್ಧತಿಯ ಬದಲಾವಣೆಗೆ ಹೇಗೆ ಪರೋಕ್ಷವಾಗಿ ಕಾರಣವಾಯಿತು ಎಂಬುದನ್ನೆಲ್ಲಾ ಈ ಲೇಖನದಲ್ಲಿ ದಾಖಲಿಸಿದ್ದಾರೆ.

**ಟೀಡ್ ಟ್ರಸ್ಟ್** ರಚಿಸಿರುವ 'ಅರಣ್ಯ ಹಕ್ಕಿನ ಕಾಯಿದೆಯ ಮಾರ್ಗದರ್ಶಿ, ಜೀವನೋಪಾಯ ಹಾಗೂ ಬದುಕಿನ ಘನತೆಗಾಗಿ ಆಂದೋಲನ' ಈ ಕೈಪಿಡಿಯಲ್ಲಿ ಅರಣ್ಯ ಹಕ್ಕುಗಳಿಗೆ ಯಾರು ಅರ್ಹರು ಎಂಬ ಅಂಶವನ್ನು ಹೇಳಿದ್ದಾರೆ. ಜೊತೆಗೆ ಸರ್ಕಾರದ ಯುಕ್ತಿಗಳಿಂದಾಗಿ ಆದಿವಾಸಿಗಳನ್ನು ತೊಡಕುಗಳು ಹೇಗೆ ಆಕ್ರಮಿಸಲ್ಪಟ್ಟವು, ಸಂಪನ್ಮೂಲಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಕಾನೂನನ್ನು ಹೇಗೆ ಬಳಸಲಾಯಿತು. ಇಂತಹ ಅಂಶಗಳನ್ನು ಇಲ್ಲಿ ದಾಖಲಿಸಲಾಗಿದೆ.

**ಮಾಧವ ಗಾಡ್ಗಿಳ್ (೨೦೦೭)** ಇವರು *Empowering Gramsabhas to Manage Biodiversity: The Science Agenda*ಎಂಬ ಲೇಖನದಲ್ಲಿ ವೈದ್ಯಕೀಯ ಶಾಸ್ತ್ರದಲ್ಲಿ "ಪ್ರತಿರೋಧಕ"ಗಳನ್ನು ಉಪಯೋಗಿಸಲಾಗುತ್ತದೆ. ಅದರಂತೆ ಪರಿಸರ ವಿನಾಶದ ತಡೆಗಟ್ಟುವಿಕೆಗಾಗಿ ಜೀವವೈವಿಧ್ಯತೆ ರಕ್ಷಿಸುವುದು ಅವಶ್ಯಕವಾಗಿದೆ ಎಂಬುದನ್ನು ದಾಖಲಿಸಿದ್ದಾರೆ. ಮತ್ತು 'ಗರಿಷ್ಟ ನಿರಂತರ ಬೆಳೆ' ಹಾಗೂ ವೈಜ್ಞಾನಿಕ ಅರಣ್ಯೀಕರಣದ ಲೋಪಗಳ ಬಗ್ಗೆ ಗಮನ ಕೇಂದ್ರೀಕರಿಸಿದ್ದಾರೆ.

**ಕೇಶವನ್ ಪ್ರಸಾದ್ ಕೆ (2005)** ಇವರ 'ಸೋಲಿಗರು ಹಾಡಿದ ಬಿಳಿಗಿರಿ ರಂಗನ ಕಾವ್ಯ' ಎಂಬ ಕೃತಿಯಲ್ಲಿ ಸೋಲಿಗರ ಜೀವನ ಕ್ರಮ ಮತ್ತು ಆಚರಣೆ ಬಗ್ಗೆ ತಿಳಿದು ಕೊಳ್ಳಬಹುದಾಗಿದೆ. ಜೊತೆಗೆ ಅವರ ಮೂಲ ಮತ್ತು ಸಾಂಸ್ಕೃತಿಕ ನಾಯಕರ ಸಾಹಸದ ಬಗ್ಗೆ ತಿಳಿದು ಕೊಳ್ಳಲು ಉಪಯುಕ್ತವಾಗಿದೆ. ಹಾಗೆಯೇ ಸೋಲಿಗರ ಪರಿಸರ ಪ್ರಜ್ಞೆ ಮತ್ತು ಅವರ ಬದುಕಿನ ಬವಣೆಯನ್ನು ತಿಳಿಯಲು ನೆರವಾಗಿದೆ.

**ಕಿಕ್ಕೇರಿ ನಾರಾಯಣ (ಅನುವಾದ: ರಾಜೇಶ್ವರಿ ಮಹೇಶ್ವರಯ್ಯ) (2000),** ಇವರು 'ಜೇನು ಕುರುಬರಲ್ಲಿ ಸ್ಥಳ ಹಾಗೂ ವಿಶ್ವದ ಪರಿಕಲ್ಪನೆ' ಎಂಬ ಲೇಖನದಲ್ಲಿ ಜೇನುಕುರುಬರ ಸ್ಥಳ ಕಲ್ಪನೆ ಮತ್ತು ಸಂಬಂಧಗಳ ಕುರಿತು ತಮ್ಮ ಅಧ್ಯಯನ ಜ್ಞಾನವನ್ನು ದಾಖಲಿಸಿದ್ದಾರೆ. ಜೊತೆಗೆ ಅವರ ಪಾರಂಪರಿಕ ಜ್ಞಾನದ ಅಭಿವೃದ್ಧಿಯಲ್ಲಿ ಜೇನುಕುರುಬರ ದೈನಂದಿನ

ಕಾರ್ಯಚಟುವಟಿಕೆಗಳು ಯಾವ ರೀತಿ ಪರಿಣಾಮ ಬೀರುತ್ತವೆ ಎಂಬುದನ್ನು ತಿಳಿಯಬಹುದು. ಈ ಎಲ್ಲಾ ಅಂಶಗಳು ಮಹಾಪ್ರಬಂಧ ರಚನೆಯ ಸಂದರ್ಭದಲ್ಲಿ ವಿಶ್ಲೇಷಣೆ ಮಾಡಲು ಸಹಕಾರಿಯಾಗಿವೆ.

**ಜಯದೇವ.ಜಿ.ಎಸ್, (2012),** ಇವರ 'ಗಿರಿಜನ ಸಂಸ್ಕೃತಿಯ ಮೇಲೆ ಬದಲಾಗುತ್ತಿರುವ ಆಹಾರ–ವ್ಯವಸಾಯ ಪದ್ಧತಿಯ ಪರಿಣಾಮಗಳು' ಈ ಲೇಖನವು ಅಭಿವೃದ್ಧಿ ಎಂದರೆ ಕೇವಲ ಆರ್ಥಿಕ ಪ್ರಗತಿ ಮಾತ್ರ ಅಲ್ಲ ಎಂಬ ಅಂಶವನ್ನು ತಿಳಿಯಪಡಿಸುತ್ತದೆ. ಆರ್ಥಿಕ ಪ್ರಗತಿ ಸಾಧಿಸಿದಾಗ ಇತರೆ ಕೆಲವು ಶಿಷ್ಟಾಚಾರ ಮತ್ತು ಸಂಸ್ಕೃತಿ ಹೇಗೆ ವಿನಾಶದತ್ತ ಹೆಜ್ಜೆ ಹಾಕುತ್ತವೆ. ಇಂತಹ ಅಂಶಗಳನ್ನು ದಾಖಲಿಸಿದ್ದಾರೆ. ಇವು ಬದಲಾದ ಸೋಲಿಗರ ಜೀವನ ಕ್ರಮ ಅರಿಯುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಮತ್ತು ಬದಲಾದ ಕಾಲ ಸಂದರ್ಭದಲ್ಲಿ ಸೋಲಿಗರ ಆಸಕ್ತಿ ಮತ್ತು ಆಯ್ಕೆಗಳನ್ನು ಅರಿತುಕೊಳ್ಳಲು ಸಹಕಾರಿಯಾಗಿದೆ.

**ಪಾರ್ವತಮ್ಮ.ಸಿ, (2007)** ಇವರ 'ಆದಿವಾಸಿ ಸಮುದಾಯಗಳ ಅಭಿವೃದ್ಧಿ' ಎಂಬ ಸದರಿ ಪುಸ್ತಕದಿಂದ ಮೈಸೂರು ಜಿಲ್ಲೆಯಲ್ಲಿರುವ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ (ವಿ.ಜಿ.ಕೆ.ಕೆ.), ಸ್ವಾಮಿ ವಿವೇಕಾನಂದ ಯೂತ್ ಮೂವ್‌ಮೆಂಟ್, ಡೀಡ್ ಮತ್ತಿತರ ಸಂಸ್ಥೆಗಳು ಸೋಲಿಗರು, ಬೆಟ್ಟಕುರುಬರು, ಜೇನುಕುರುಬರ ಅಭಿವೃದ್ಧಿಯಲ್ಲಿ ಕೈಗೊಂಡಿರುವ ಕಾರ್ಯಗಳ ಬಗ್ಗೆ ತಿಳಿದುಕೊಳ್ಳಲಾಯಿತು. ಇದೇ ಲೇಖಕರು **ರಾಜೇಗೌಡ. ಜಿ.ಎಸ್,** ಇವರೊಂದಿಗೆ ರಚಿಸಿರುವ 'ಆದಿವಾಸಿ ಸಮುದಾಯಗಳ ಬದುಕು–ಬವಣೆ' ಎಂಬ ಪುಸ್ತಕದಲ್ಲಿ ಗಿರಿಜನರ ನಂಬಿಕೆಗಳೇನು? ಅವರು ಭೂಮಿಗೆ ನೀಡಿರುವ ಸ್ಥಾನ ಮಾನ ಏನು? ಜೀವ ಮತ್ತು ಮಣ್ಣಿಗೆ ಇರುವ ಅನ್ಯೋನ್ಯ ಸಂಬಂಧ. ಆದಿವಾಸಿ ಬದುಕಿನ ಆರ್ಥಿಕ ಮೂಲ. ಆದಿವಾಸಿಗಳ ಹೆಮ್ಮೆಯ ಬದುಕು ಮತ್ತು ಘನತೆಯ ಮನೋಭಾವಗಳನ್ನು ದಾಖಲಿಸಿದ್ದಾರೆ. ಹಾಗಾಗಿ ಭೂಮಿಯನ್ನು ಏಕೆ ಒಂದು ವಸ್ತುವಾಗಿ ಪರಿಗಣಿಸಬೇಕು ಎನ್ನುತ್ತಾರೆ? ಈ ಪರಿಕಲ್ಪನೆಯಿಂದ ಇಂದಿನ ಪರಿಸರ ಸಮಸ್ಯೆಗಳಿಗೆ ಉತ್ತರ ದೊರೆಯಬಹುದು. ಜಗತ್ತು ಉಳಿಯಬಹುದು. ಸ್ಥಳಾಂತರ ಉತ್ತರವಲ್ಲ. ಹಾಗಾಗಿ ಅವರನ್ನು ಅವರ ಬದುಕಿನ ತಾಣದಲ್ಲಿ ಬದುಕಲು ಬಿಡುವುದೇ ಸರಿಯಾದ ಮಾರ್ಗ. ಇಂತಹ ಹಲವು ಅಂಶಗಳು ಪ್ರೌಢ ಪ್ರಬಂಧದ ರಚನೆಗೆ ಮಾರ್ಗದರ್ಶಿಯಾಗಿವೆ.

**ಸುನಂದಮ್ಮ.ಎಸ್ (2011)** ಇವರ 'ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಸೋಲಿಗ ಜನಾಂಗದ ಅಭಿವೃದ್ಧಿಗೆ ಕರ್ನಾಟಕ ಸರ್ಕಾರದ ಕಾರ್ಯಕ್ರಮಗಳು ಒಂದು ವಿಮರ್ಶಾತ್ಮಕ ಅಧ್ಯಯನ' ಎಂಬುದು ಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ. ಆದಿವಾಸಿ ಸೋಲಿಗರ ಕುರಿತು ಕೈಗೊಳ್ಳಲಾಗಿರುವ ಅಧ್ಯಯನ. ಕರ್ನಾಟಕ ಸರ್ಕಾರ ಸೋಲಿಗರಿಗೆ

ಯಾವೆಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಎಂಬುದನ್ನು ವಿಸ್ತೃತವಾಗಿ ವಿವರಿಸುತ್ತದೆ. ಇದು ಸೋಲಿಗರ ಸ್ಥಿತ್ಯಂತರಗಳನ್ನು ಅರಿಯುವಲ್ಲಿ ಮಹತ್ವದ ಪಾತ್ರವಹಿಸುತ್ತದೆ. ಈ ನಿಟ್ಟಿನಲ್ಲಿ ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ಪೂರಕವಾದ ಹಲವು ಮಾಹಿತಿಗಳನ್ನು ಇಲ್ಲಿ ದಾಖಲೆ ಮಾಡಿದ್ದಾರೆ.

**ಸುಜ್ಞಾನ ಮೂರ್ತಿ.ಬಿ, (ಮೂಲ:ಮಹಾಶ್ವೇತಾದೇವಿ) (2003)** ಇವರ 'ಯಾರದೀ ಕಾಡು' ಎಂಬ ಪುಸ್ತಕದಲ್ಲಿ ಮುಂಡಾ ಬುಡಕಟ್ಟು ಸಮುದಾಯದ ಜನರ ಬದುಕು ಮತ್ತು ಬವಣೆಗಳನ್ನು ಅರಿಯಬಹುದಾಗಿದೆ. ಆದಿವಾಸಿಗಳನ್ನು ಕಾಡಿನಿಂದ ಹೊರಗೆ ಹಾಕಲು ಹೇಗೆ ವಿಚಿತ್ರ ಕಾನೂನುಗಳನ್ನು ರಚಿಸಿದರು. ಈ ಮುಖಾಂತರ ಹೇಗೆ ಅವರ ಬದುಕನ್ನು ಅತಂತ್ರಗೊಳಿಸಿದರು. ಪ್ರಭುತ್ವ ಮತ್ತು ಬಂಡವಾಳಶಾಹಿ ವರ್ಗ ಹೇಗೆ ಮುಂಡಾ ಆದಿವಾಸಿಗಳನ್ನು ಸಂಕಷ್ಟಕ್ಕೆ ಸಿಲಿಕಿಸುತ್ತಾ ಹೋದರು ಎಂಬುದನ್ನು ಚಿತ್ರಿಸಲಾಗಿದೆ. ಇಲ್ಲಿ ಕಾಡಿನ ಆದಿವಾಸಿಗಳಾದ ಮುಂಡಾ ಜನರ ಬದುಕಿನ ಅತಂತ್ರ ಸ್ಥಿತಿಯನ್ನು ಸೋಲಿಗರು, ಬೆಟ್ಟಕುರುಬರು ಮತ್ತು ಜೇನುಕುರುಬರು ಇವರೊಂದಿಗೆ ಹೋಲಿಸಿದಾಗ ಅವರ ಪರಿಸ್ಥಿತಿ ಕೂಡ ಭಿನ್ನವಾಗಿಲ್ಲ ಎಂದೆನಿಸದು. ಹೀಗಿರುವಾಗ ಕಾಡು ಯಾರದು? ಎಂಬ ಪ್ರಶ್ನೆಗೆ ಉತ್ತರ ಬಂಡವಾಳ ಶಾಹಿಗಳದ್ದೇ? ಎಂಬ ಪ್ರಶ್ನಾ ರೂಪದ ಉತ್ತರ ಕಂಡುಕೊಳ್ಳುವ ಪರಿಸ್ಥಿತಿ ಎದುರಾಗಿದೆ. ಏಕೆಂದರೆ ಕಾನೂನುಗಳ ಸಹಾಯದಿಂದ ಆದಿವಾಸಿಗಳಲ್ಲದವರು ಕಾಡನ್ನು ಆಕ್ರಮಿಸಿಕೊಂಡಿರುವ ಅಂಶ ವ್ಯಕ್ತವಾಗಿದೆ. ಹೀಗಾಗಿ ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನದ ಅಧ್ಯಯನದಲ್ಲಿ ಈ ಕಾದಂಬರಿ ಮಹತ್ವದ್ದೇನಿಸಿದೆ.

**ವೀರಪ್ಪ.ಕೆ.ಎಂ, (2006)** ಇವರು ಪರಿಸರ ಸಂರಕ್ಷಣಾ ಕಾಯಿದೆಗಳು ೧೯೮೬ ಎಂಬ ತಮ್ಮ ಪುಸ್ತಕದ ಅರಿಕೆಯಲ್ಲಿ ಹೇಳುವಂತೆ "ಭಾರತ ದೇಶದಲ್ಲಿ ಪರಿಸರವನ್ನು ಸಂರಕ್ಷಿಸಲು ಅತ್ಯುತ್ತಮವಾದ ಕಾಯಿದೆಗಳಿವೆ. ಆದರೆ ಪ್ರಮುಖವಾಗಿ ಬೇಕಾದದ್ದು ಆ ಕಾನೂನುಗಳನ್ನು ಪ್ರಾಮಾಣಿಕವಾಗಿ ಜಾರಿಗೊಳಿಸುವುದು." ಈ ಮಾತನ್ನು ಗಮನಿಸಿದಾಗ ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನದಲ್ಲಿನ ಸವಾಲುಗಳನ್ನು ಅರಿಯಲು ಮತ್ತು ಸಾಧ್ಯತೆಗಳನ್ನು ಗುರುತಿಸುವಲ್ಲಿ ಈ ಕಾಯಿದೆ ಅಧ್ಯಯನ ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ಸಹಕಾರಿಯಾಗಿದೆ.

**ಪ್ರಕಾಶಕರು,** ಸಮಾಜ ಪುಸ್ತಕಾಲಯ, ಧಾರವಾಡ (**2009** ಇವರು 'ಕರ್ನಾಟಕ ಅರಣ್ಯ ಅಧಿನಿಯಮ, 1963 ಮತ್ತು ಕರ್ನಾಟಕ ಅರಣ್ಯ ನಿಯಮಗಳು, 1969' ಈ ನಿಯಮದ 7ನೇ ಕಲಮಿನ (ಎ) ಪ್ರಕಾರ ಚೌಬೀನೆ, ಇದ್ದಿಲು, ಇಂಡಿಯನ್ ರಬ್ಬರ್, ಕಾಚು, ಲೂಟಿಕಾಯಿ, ಮರದೆಣ್ಣೆ, ಶ್ರೀಗಂಧದೆಣ್ಣೆ, ರೆಸಿನ್, ನೈಸರ್ಗಿಕ ವಾರ್ನಿಷ್, ತೊಗಟೆ, ಅರಗು, ಮಹ್ವಾ, ಎಲೆ, ಹೂವು, ಕಾಯಿಗಳು ಮುಂತಾದವುಗಳ ಜೊತೆಗೆ ಹುಲ್ಲು, ಬಳ್ಳಿಗಳು, ಜೊಂಡುಗಳು ಮತ್ತು ಆಲಸೆ, ವನ್ಯ ಮೃಗಗಳು, ಕೀಟಗಳು, ಹಣ್ಣುಗಳು, ಸಸ್ಯ

ಪ್ರಭೇದಗಳು ಹೀಗೆ ಎಲ್ಲವನ್ನೂ ಅರಣ್ಯ ಜನ್ಯ ಉತ್ಪನ್ನಗಳೆಂದು ಪರಿಗಣಿಸಿ ಇವುಗಳ ದುರ್ಬಳಕೆಯನ್ನು ನಿಷೇಧಿಸಿದೆ. ಅಲ್ಲದೆ ಈ ಕಾಯಿದೆಯು ಕಾಡಿನ ಉತ್ಪನ್ನಗಳ ಸಂಗ್ರಹ ಮತ್ತು ಮಾರಾಟವನ್ನು ನಿಯಂತ್ರಿಸುತ್ತದೆ. ಆದರೆ ಅರಣ್ಯ ಹಕ್ಕುಗಳ ಕಾಯಿದೆ ಈ ಎಲ್ಲಾ ಅರಣ್ಯ ಉಪ ಉತ್ಪನ್ನಗಳ ಸಂಗ್ರಹ ಮತ್ತು ಮಾರಾಟಕ್ಕೆ ಅವಕಾಶ ಮಾಡಿಕೊಡುತ್ತದೆ. ಈ ವೈರುದ್ಯವು ಆದಿವಾಸಿಗಳನ್ನು ಹೇಗೆ ಅತಂತ್ರರನ್ನಾಗಿಸಿದೆ. ಮತ್ತು ಅರಣ್ಯ ಇಲಾಖೆ ಸಿಬ್ಬಂದಿಗಳಿಗೆ ಹೇಗೆ ಗೊಂದಲ ಉಂಟಾಗಿದೆ ಎಂಬುದನ್ನು ಕಂಡುಕೊಳ್ಳಲು ಸಹಕಾರಿಯಾಗಿದೆ.

**ಚೈತನ್ಯ ಪ್ರಕಾಶನ, (2010),**'ವನ್ಯಜೀವಿ (ರಕ್ಷಣಾ) ಅಧಿನಿಯಮ, 1972, ವನ್ಯಜೀವಿ (ವ್ಯವಹರಣೆಗಳು ಮತ್ತು ಪ್ರಾಣಿ ವಸ್ತುಗಳ) ನಿಯಮಗಳೂ, 1973' ಈ ಕಾಯಿದೆ ಅಧ್ಯಯನದಿಂದ ವನ್ಯಜೀವಿಗಳ ಸಂರಕ್ಷಣೆ ಯಾರ ಜವಾಬ್ದಾರಿ ಮತ್ತು ಅವುಗಳ ದುರುಪಯೋಗದಿಂದ ಗುರಿಪಡಿಸಲಾಗುವ ಶಿಕ್ಷೆಗಳ ಬಗ್ಗೆ ಅರಿಯಲಾಯಿತು. ಅಲ್ಲದೆ ಈ ಕಾಯಿದೆ ಆದಿವಾಸಿಗಳ ಮೇಲೆ ಯಾವ ಪರಿಣಾಮ ಬೀರುತ್ತದೆ ಎಂಬುದನ್ನು ತಿಳಿಯಬಹುದು.

**ಸತ್ಯಲಿಂಗರಾಜು.ಜಿ.ಆರ್, (2005)** ಅವರು ಕನ್ನಡಕ್ಕೆ ಅನುವಾದ ಮಾಡಿರುವ 'ಪರಿಸರ (ಸಂರಕ್ಷಣೆ) ಅಧಿನಿಯಮ 1986 ಮತ್ತು ಪರಿಸರ (ಸಂರಕ್ಷಣೆ) ನಿಯಮಗಳು, 1986' ಇದು ಜೀವ ವೈವಿಧ್ಯತೆ ಬಗ್ಗೆ ಅರಿಯಲು ಮತ್ತು ಜೀವ ವೈವಿದ್ಯತೆಯಲ್ಲಿ ಅರಣ್ಯ ಸಂರಕ್ಷಣೆ ಪಾತ್ರದ ಮಹತ್ವ ಅರಿಯುವಲ್ಲಿ ಈ ಅಧ್ಯಯನ ಸಹಕಾರಿಯಾಗಿದೆ.

**ಬೋರಲಿಂಗಯ್ಯ.ಹಿ.ಚಿ,** ಇವರು 'ಕರ್ನಾಟಕದಲ್ಲಿ ಭೂಸುಧಾರಣೆ: ಒಂದು ಪಕ್ಷಿ ನೋಟ' ಲೇಖನದಲ್ಲಿ ದಾಖಲಿಸಿರುವಂತೆ. ಇತ್ತೀಚಿನ ದಿನಗಳವರೆಗೂ ಆದಿವಾಸಿಗಳಲ್ಲಿ ಆಸ್ತಿಯ ಕಲ್ಪನೆಯಿರದಿದ್ದರೂ ಅಭಿವೃದ್ಧಿ ಎಂಬ ವಿಷ ಬೀಜದಿಂದಾಗಿ ಅರಣ್ಯ ಒತ್ತುವರಿಯಂತಹ ಸಮಸ್ಯೆಗಳು ಆದಿವಾಸಿಗಳಲ್ಲೂ ಕಂಡುಬಂದು ಅರಣ್ಯ ಕಾಯಿದೆ ಅನುಷ್ಠಾನದಲ್ಲಿ ಸಮಸ್ಯೆಗಳು ತಲೆದೋರುತ್ತಿವೆ. ಇದನ್ನು ನಾವು ಗಮನಿಸಿದಾಗ ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ ಏಕೆ ಕಷ್ಟ ಸಾಧ್ಯ ಎಂಬುದನ್ನು ಅರಿಯಲು ಸಹಾಯವಾಗುತ್ತದೆ. ಹಾಗೆಯೇ ಇದೇ ಲೇಖಕರ **'ಕಾಡು ಕಾಂಕ್ರೀಟ್ ಮತ್ತು ಜಾನಪದ'** ಪುಸ್ತಕದ ಎಲ್ಲಾ ಬಿಡಿ ಲೇಖನಗಳ ಅಧ್ಯಯನದಿಂದ ನಮಗೆ ಕಾಡಿನ ಸಂಸ್ಕೃತಿ, ಗಿರಿಜನರ ಬದುಕು ಮತ್ತು ಅವರ ಜಾನಪದ ಅರಿಯಬಹುದು. ಜೊತೆಗೆ ಅವರನ್ನು ನಾವು ಹೇಗೆ ಗುಲಾಮಗಿರಿ ಕೂಪಕ್ಕೆ ವ್ಯವಸ್ಥಿತವಾಗಿ ತಳ್ಳುತ್ತಾ ಬಂದೆವು. ಮತ್ತು ಅವರ ಜಾನಪದವನ್ನು ಹಾಳು ಮಾಡಿ ಅವರ ಅಸ್ಥಿತ್ವಕ್ಕೆ ಚ್ಯುತಿ ತಂದಿದ್ದೇವೆ. ಎಂಬ ಹಲವು ಅಂಶಗಳನ್ನು ಕಂಡುಕೊಳ್ಳಬಹುದಾಗಿದೆ. ಪರಿವರ್ತಿತಗೊಂಡ ತೋಟಗಳಲ್ಲಿ ದುಡಿಯುವವರು ಅಮಾಯಕರಾದ ಗಿರಿಜನರು ಮಾತ್ರ. ಹೀಗಾಗಿ ಭೂಮಿಯ ಸ್ವಾಧೀನವನ್ನು ಕೆಲವೇ

ಕೆಲವರಿಗೆ ಒಪ್ಪಿಸುವ ಮೂಲಕ ಅದೇ ನೆಲದ ಮೂಲನಿವಾಸಿಗಳನ್ನು ಅತಂತ್ರರನ್ನಾಗಿಸುವ ಘನಂದಾರಿ ತಂತ್ರ ಬ್ರಿಟಿಷರ ಕಾಲದಲ್ಲಿ ಹೇಗೆ ವ್ಯವಸ್ಥಿತವಾಗಿ ನಡೆಯಿತು. ಗಿರಿಜನರನ್ನು ಅಲ್ಲಿಯೆ ಕೂಲಿಯಾಳುಗಳಾಗಿ ಉಳಿಯುವಂತೆ ಮಾಡಲಾಯಿತು. ಎಂಬುದನ್ನು ಅರಿಯಲು ಸಹಕಾರಿಯಾಗಿದೆ. ಇಂತಹ ಅಂಶಗಳನ್ನು ಗಮನಿಸಿದಾಗ ಅರಣ್ಯ ಹಕ್ಕು ಕಾಯಿದೆ ಜಾರಿಗೆ ತಂದಿರುವುದೂ ಕೂಡ ಗಿರಿಜನರನ್ನು ಕಾಡಿನ ಮಧ್ಯೆ ಇರುವ ಎಸ್ಟೇಟುಗಳ ಖಾಯಂ ಕೂಲಿಗಳಾಗಿರುವಂತೆ ಮಾಡುವ ಹುನ್ನಾರವಿದೆಯೇನೂ ಎಂಬುದರ ಕಡೆಗೆ ಚಿಂತನೆ ಹಚ್ಚಿಸುತ್ತದೆ. ಇದೇ ಲೇಖಕರ ಮತ್ತೊಂದು ಲೇಖನ **'ಚಿಂಕಿ ಮತ್ತು ವಿದ್ಯುತ್ ಯುಗಗಳ ನಡುವೆ ಗಿರಿಜನ ಸಂಸ್ಕೃತಿ'**. ಈ ಲೇಖನದಲ್ಲಿ ಲೇಖಕರು ಗಿರಿಜನರು ಯಾವ ಹಂತದಲ್ಲಿದ್ದಾರೆ ಮತ್ತು ಇದಕ್ಕೆ ಕಾರಣಗಳೇನು? ಎಂಬುದನ್ನು ದೃಷ್ಟಾಂತಗಳೊಂದಿಗೆ ವಿವರಿಸಿದ್ದಾರೆ. ಗಿರಿಜನರಲ್ಲಿ ಸಂಘಟನೆ ಮತ್ತು ಸಂಘ ಜೀವಿತನ ಹೇಗಿತ್ತು ಎಂಬುದನ್ನು ವಿವರಿಸುತ್ತಾ ಅವರಲ್ಲಿ ಆಧುನಿಕತೆ ಹೇಗೆ ಪ್ರವೇಶ ಮಾಡಿತು ಮತ್ತು ಅವರನ್ನು ಯಾವ ರೀತಿ ದಿಕ್ಕು ತಪ್ಪಿಸುತ್ತಿದೆ ಎಂಬುದನ್ನು ದಾಖಲಿಸಿದ್ದಾರೆ. ಕಾಡನ್ನು ಅವಲಂಬಿಸಿ ಬದುಕುತ್ತಿದ್ದ ಗಿರಿಜನರು ಭೂ ಮಾಲಿಕರ ತೊತ್ತುಗಳಾಗಿ ಹೋದ ಅವಸ್ಥೆಯ ಹಿಂದೆ ಸ್ವತಂತ್ರ ಭಾರತ ಮತ್ತು ಅರಣ್ಯ ಇಲಾಖೆಯ ಪಾತ್ರವನ್ನು ಬಿಂಬಿಸಿದ್ದಾರೆ. ಗಿರಿಜನರ ಹಾಡಿಗಳು ಗುಡಿಸಲುಗಳು ಹೇಗೆ ನಶಿಸುತ್ತಾ ಹೋದವೋ ಹಾಗೆಯೇ ಭೂ ಮಾಲೀಕರ ತೋಟ ತುಕಡಿಗಳು ವಿಸ್ತರಿಸುತ್ತಾ ಹೋದವು ಇದಕ್ಕೆಲ್ಲಾ ಕಾರಣ ಯಾರು? ಮತ್ತು ಯಾಕೆ? ಎಂಬ ಅಂಶಗಳನ್ನು ವ್ಯಕ್ತಗೊಳಿಸಿದ್ದಾರೆ. ಮತ್ತು ಗಿರಿಜನರ ಆಹಾರವನ್ನು ಹೇಗೆ ಅಧಿಕಾರಶಾಹಿ ಮತ್ತು ವ್ಯವಸ್ಥೆ ಕಸಿದು ಕೊಂಡಿದೆ ಎಂಬ ಹಲವು ಅಂಶಗಳನ್ನು ದಾಖಲಿಸಿದ್ದಾರೆ.

**ಪ್ರಭಾಕರ್.ಎ.ಎಸ್, (2002)** ಇವರ 'ಕರ್ನಾಟಕದಲ್ಲಿ ಆದಿವಾಸಿ ರೈತ ಹೋರಾಟಗಳ ಸ್ವರೂಪ' ಎಂಬ ಲೇಖನದಲ್ಲಿ ನಮ್ಮ ದೇಶದಲ್ಲಿ ಯಾವುದೇ ಕಾಯಿದೆ ರಚನೆ ಮತ್ತು ಜಾರಿ ಬಹಳ ಮಂದಗತಿ ಎಂಬುದನ್ನು ತಿಳಿಸಲು ಪ್ರಯತ್ನಿಸಿದ್ದಾರೆ. ಹಾಗೆಯೇ ಅರಣ್ಯ ಸಂರಕ್ಷಣೆ ಕಾಯಿದೆಗಳ ರಚನೆಯ ಹಿಂದೆ ಆದಿವಾಸಿಗಳನ್ನು ಪಳಗಿಸುವ, ಅವರನ್ನು ಅತಂತ್ರರನ್ನಾಗಿಸುವ ಮಾರ್ಗೋಪಾಯಗಳ ಕುರಿತು ಬ್ರಿಟಿಷರು ಹೇಗೆ ಯೋಜನೆಗಳನ್ನು ರೂಪಿಸಿದರು. ಇಂತಹ ವ್ಯಕ್ತತೆಗಳು ಪ್ರಸ್ತುತ ಸಂಶೋಧನಾ ಅಧ್ಯಯನ ಯಾವ ನಿಟ್ಟಿನಲ್ಲಿ ಕೈಗೊಳ್ಳಬೇಕು ಎಂಬುದಕ್ಕೆ ಮಾರ್ಗದರ್ಶಿಯಾಗಿವೆ.

**ಚಿಣ್ಣಪ್ಪ.ಕೆ.ಎಂ, (ನಿರೂಪಣೆ: ಟಿ.ಎಸ್.ಗೋಪಾಲ್) (2011)** ಇವರ 'ಕಾಡಿನೊಳಗೊಂದು ಜೀವ' ಇದು ಅರಣ್ಯಾಧಿಕಾರಿಯವರ ವೃತ್ತಿ ಜೀವನದ ಅನುಭವಗಳ ಪುಸ್ತಕ ರೂಪ. ಇದರಲ್ಲಿ ಒಟ್ಟು ೫೬ ಅಧ್ಯಾಯಗಳಿದ್ದು ಇವುಗಳು ಕಾಡಿನ ಪರಿಚಯ, ಪ್ರಾಣಿಗಳ ಚಲನ ವಲನ, ಕಾಡಿನ ಸಂಸ್ಕೃತಿ, ಬುಡಕಟ್ಟಿಗರ ಜೀವನ ಅವರ ನಂಬಿಕೆಗಳು, ಕಾಡಿನ ಬಗೆಗಿನ ಬುಡಕಟ್ಟು ಜನರ ಜ್ಞಾನ ಮತ್ತು ಕಾಡಿನ ಬಾಂಧವ್ಯಗಳನ್ನು ಅರಿಯಲು

ಸಹಕಾರಿಯಾಗಿದೆ. ಇದು ಒಬ್ಬ ಅರಣ್ಯ ಅಧಿಕಾರಿಯಿಂದ ರಚಿಸಲ್ಪಟ್ಟಿದೆ. ಹಾಗಾಗಿ ಇಲ್ಲಿ ಅರಣ್ಯ ಇಲಾಖೆ, ಅರಣ್ಯ ಇಲಾಖೆ ಸಿಬ್ಬಂದಿಗಳು ಮತ್ತು ಸಾರ್ವಜನಿಕರ ಸಂಬಂಧಗಳನ್ನು ಅರಿಯಬಹುದು. ಅರಣ್ಯ ಮತ್ತು ಅರಣ್ಯ ಕಿರು ಉತ್ಪನ್ನಗಳು ಹಾಗೂ ಜೀವವೈವಿಧ್ಯ ರಕ್ಷಣೆಯಲ್ಲಿ ಎದುರಾಗುವ ತೊಡಕುಗಳ ಬಗ್ಗೆ ತಿಳಿಸುತ್ತದೆ. ಹಾಗೆಯೇ ಕಾಡಿನ ನಾಶಕ್ಕೆ ಯಾರು ಕಾರಣ ಇದರ ಸಂರಕ್ಷಣೆ ಹೇಗೆ, ಬುಡಕಟ್ಟು ಜನರ ಜೀವನ ಪದ್ಧತಿ ಮೇಲೆ ಹೊಸ ಕಾಯಿದೆ ಕಾನೂನುಗಳು ಹೇಗೆ ಪರಿಣಾಮಕಾರಿಯಾಗುತ್ತವೆ. ಅರಣ್ಯವಾಸಿಗಳು ಅರಣ್ಯದಲ್ಲೇ ಇರಬೇಕೆ ಅಥವಾ ಅರಣ್ಯದಿಂದ ಹೊರಬರಬೇಕೇ ಇಂತಹ ಹಲವು ಅಂಶಗಳು ಇಲ್ಲಿ ಚರ್ಚಿಸಲ್ಪಟ್ಟಿವೆ.

**ಮುಜ಼ಾಫ್ಫರ್ ಅಸ್ಸಾದಿ (2011)** ಇವರ 'ಬುಡಕಟ್ಟು ಜನಾಂಗದ ಅತಂತ್ರ ಸ್ಥಳಾಂತರ' ಈ ಲೇಖನದಲ್ಲಿ ಬುಡಕಟ್ಟು ಜನರನ್ನು ಯಾವ ಯಾವ ಉದ್ದೇಶಗಳಿಗೆ ಸ್ಥಳಾಂತರಿಸುತ್ತಾರೆ. ಇಲ್ಲಿ ಒಂದೊಂದು ಬುಡಕಟ್ಟು ನೆಲೆಗಳನ್ನು ಏಳೆಂಟು ಬಾರಿ ಸ್ಥಳಾಂತರಿಸಿರುವ ಉದಾಹರಣೆಗಳನ್ನು ನೀಡಿದ್ದಾರೆ. ಅಲ್ಲದೆ ಸ್ಥಳಾಂತರ ಮಾಡುವಾಗ ಕನಿಷ್ಠ ಪುನರ್ವಸತಿ ಕಲ್ಪಿಸದೇ ಸ್ಥಳಾಂತರಿಸಿರುವ ಉದಾಹರಣೆಗಳನ್ನು ನೀಡಿದ್ದಾರೆ. ಈ ಎಲ್ಲಾ ಅಮಾನವೀಯ ಕೃತ್ಯಗಳು ಯಾಕೆ ನಡೆಯುತ್ತವೆ ಎಂಬುದನ್ನು ಮನದಟ್ಟು ಮಾಡಿಕೊಳ್ಳಬಹುದಾಗಿದೆ.

**ಶಂಕರನಾರಾಯಣ.ತೀ.ನಂ, (೨೦೦೦)** ಇವರ 'ಬುಡಕಟ್ಟುಗಳ ಲಕ್ಷಣ ಮತ್ತು ಸ್ವರೂಪ' ಎಂಬ ಲೇಖನವು ಮುಖ್ಯವಾಗಿ ಬುಡಕಟ್ಟು ಎಂದರೇನು? ಬುಡಕಟ್ಟು ಮತ್ತು ಜಾತಿಗೂ ಇರುವ ವ್ಯತ್ಯಾಸ. ಯಾವಾಗ ಬುಟಕಟ್ಟುಗಳು ಜಾತಿಗಳಾಗಿ ಪರಿವರ್ತಿತವಾಗುತ್ತವೆ. ಬುಡಕಟ್ಟು ಅಧ್ಯಯನ ವಿಧಾನಗಳು ಮತ್ತು ಅವುಗಳ ಸ್ವರೂಪ. ಸಂಶೋಧಕನು ಬುಡಕಟ್ಟು ಸಂಸ್ಕೃತಿ ಅಧ್ಯಯನದಲ್ಲಿ ಕೈಗೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮ ಇವುಗಳನ್ನು ದಾಖಲಿಸಿದ್ದಾರೆ. ಜೊತೆಗೆ ಭಾರತದಲ್ಲಿ ಬುಡಕಟ್ಟುಗಳ ಪರಿಸ್ಥಿತಿ ಕಾಲದಿಂದ ಕಾಲಕ್ಕೆ ಯಾವ ರೀತಿ ಬದಲಾವಣೆ ಹೊಂದುತ್ತಾ ಸಾಗಿತು. ಮತ್ತು ಇದಕ್ಕೆ ಪೂರಕ ಮತ್ತು ಕಾರಕ ಅಂಶಗಳೇನು ಎಂಬ ಅಂಶಗಳೂ ಇಲ್ಲಿ ದಾಖಲಿಸಲ್ಪಟ್ಟಿವೆ.

**ಶಿವರಾಮ ಕಾರಂತ.ಕೆ** ಇವರು **ಚೋಮನ ದುಡಿ** ಎಂಬ ಸದರಿ ಕೃತಿಯಲ್ಲಿ ಲೇಖಕರು ಕೊರಗ ಬುಡಕಟ್ಟು ಸಮುದಾಯದ ಹೊಲೆಯನಾದ ಚೋಮನ ಈಡೇರದ ಆಸೆಯೊಂದಿಗಿನ ಸಂಘರ್ಷವನ್ನು ಚಿತ್ರಿಸಿದ್ದಾರೆ. ಅರಣ್ಯ ಇಲಾಖೆ ಅಧಿಕಾರಿಗಳೊಂದಿಗೆ ಅರಣ್ಯವಾಸಿಗಳ ನಿತ್ಯ ಹೋರಾಟದ ಬದುಕನ್ನು ಅರಿಯಬಹುದಾಗಿದೆ. ಚೋಮನು ಗೇಣು ಭೂಮಿಗಾಗಿ ಇಡೀ ಜೀವನ ಪೂರ್ತಿ ಹಲುಬಿದರೂ ತನ್ನದೆನ್ನುವ ಭೂಮಿ ಪಡೆಯಲು ಸಾಧ್ಯವಾಗಲಿಲ್ಲ ಅದೇ ಪರಿಸ್ಥಿತಿ ಇಂದೂ ಕೂಡ ಮುಂದುವರೆದಿದೆ. ಹಾಗೂ ಚೋಮನಂತ ಹಲವು ಆದಿವಾಸಿಗಳು ಭೂಮಿಗಾಗಿ ಪರದಾಡುವಂತಾಗಿದೆ. ಇದೇ

ಲೇಖಕರ **'ಬೆಟ್ಟದ ಜೀವ'** ಪುತ್ತೂರಿನ ಸುತ್ತಮುತ್ತಲ ಅರಣ್ಯ ಪ್ರದೇಶದ ಜನರ ಜೀವನವನ್ನು ಕುರಿತದ್ದಾಗಿದೆ. ಅರಣ್ಯದೊಂದಿಗೆ ಅಲ್ಲಿ ಒಂಟಿತನ ಮತ್ತು ಚಳಿ, ಕಾಯಿಲೆ ಮತ್ತು ಕಾಡು ಪ್ರಾಣಿಗಳ ಹಾವಳಿ ಇದ್ದರೂ ಅವುಗಳೊಂದಿಗೆ ಪಟ್ಟಣ ಪ್ರದೇಶಗಳಿಂದ ದೂರವಿದ್ದು ಕಾಡಿನೊಂದಿಗಿನ ಅವಿನಾಭಾವ ಸಂಬಂಧ ಮತ್ತು ಜೀವನ ರೀತಿಯನ್ನು ಕಟ್ಟಿಕೊಟ್ಟಿದ್ದಾರೆ. ಮತ್ತು ಅರಣ್ಯ ಇಲಾಖೆ ಮತ್ತು ಸರ್ಕಾರದ ಯಾವುದೇ ಸಹಾಯವಿಲ್ಲದೆ ಅವರ ಯಾತನಾಮಯ ಪ್ರಕೃತಿಯೊಂದಿಗಿನ ರುದ್ರ ರಮಣೀಯ ಬದುಕಿನ ಚಿತ್ರಣ ಅರಣ್ಯವಾಸಿಗಳ ಬದುಕಿಗೆ ಹಿಡಿದ ಕನ್ನಡಿಯಂತಿದೆ. ಈ ಕಾದಂಬರಿಯ ಕೆಲವು ಕಡೆ ಅರಣ್ಯ ಭೂಮಿ ಪ್ರಭಾವಿ ಜನರ ಸ್ವತ್ತು ಹೇಗಾಗುತ್ತದೆ. ಮತ್ತು ನಿಸ್ಸಾಹಯಕರು ತಾವು ವಾಸಿಸಲು ಸಹ ಅರಣ್ಯ ಭೂಮಿ ಬಳಸಿಕೊಳ್ಳಲು ಇರುವ ಅಡೆ ತಡೆಗಳು ಏನು? ಅಧಿಕಾರಶಾಹಿ ಮತ್ತು ಪಭುತ್ವ ಹೇಗೆ ಕಾರ್ಯ ನಿರ್ವಹಿಸುತ್ತದೆ. ಎಂಬ ಹಲವು ಅಂಶಗಳನ್ನು ಇಲ್ಲಿ ಚಿತ್ರಿಸಲಾಗಿದೆ. ಹಾಗೇಯೇ **'ಗೊಂಡಾರಣ್ಯ'** ಎಂಬುದು ಇನ್ನೊಂದು ಇದೇ ಲೇಖಕರ ಪುಸ್ತಕ. ಇಲ್ಲಿ ಹೇಳಿರುವಂತೆ ಪರ್ವತಾವಳಿಗಳಲ್ಲಿ ನಿರ್ಮಾಣವಾದ ಮಾರ್ಗಗಳಿಂದ ಕಾದಿಟ್ಟ ಅರಣ್ಯ ಸಂಪತ್ತು ಲೂಟಿಯಾಗುತ್ತಿದೆ. ವ್ಯಾಪಾರಕ್ಕೆ, ಸೂರೆಗೆ, ಸುಲಿಗೆಗೆ ತೆರವಾಗಿ, ರಾಜಾದಾಯ ಹೆಚ್ಚುತ್ತದೆ ಸತ್ಯ. ಕಳ್ಳ ವ್ಯಾಪಾರದಿಂದ ಹಲವರು ಶ್ರೀಮಂತರಾಗುತ್ತಿದ್ದುದೂ ನಿಜ. ಆದರೆ ಇದರ ಒಂದು ಘನ ಪರಿಣಾಮ ಅರಣ್ಯವಾಸಿಗಳ ಮೇಲೆ ಉಂಟಾಗಿದೆ. ಅವರ ಪ್ರಕೃತಿ ಮಾತೆಯ ಮಡಿಲಿನಲ್ಲಿನ ಬೆಚ್ಚನೆಯ, ಆಹ್ಲಾದಕರ, ಮುಚ್ಚುಮರೆಯ ಬಾಳು ಬಹಿರಂಗವಾಗತೊಡಗಿದೆ. ಹೀಗೆ ಕಾಡನ್ನು ಸವರಿದರೆ ಅವರ ಬೇಸಾಯಕ್ಕೆ ವಿಘ್ನವಿದೆ. ಕಾಡು ಇಲ್ಲದಂತಾಗಿ ಅವರ ಬದುಕು ಅಸಾಧ್ಯಾವಾಗಿದೆ. ಇಂತಹ ಹಲವು ಅಂಶಗಳು ಪ್ರಸ್ತುತ ಅಧ್ಯಯನಕ್ಕೆ ಈ ಕೃತಿಯಿಂದ ಪೂರಕವಾಗಿವೆ. ಇದೇ ಲೇಖಕರ ಮತ್ತೊಂದು ಕೃತಿ **'ಕುಡಿಯರ ಕೂಸು'** ಈ ಕಾದಂಬರಿಯಲ್ಲಿ ಮಲೆಕುಡಿಯರ ಜೀವನ, ಕಾಡಿನೊಂದಿಗಿನ ಅವರ ಅವಿನಾಭಾವ ಸಂಬಂಧ ಮತ್ತು ಕಾಡಿನೊಂದಿಗಿನ ಸೆಣಸಾಟವನ್ನು ದಾಖಲಿಸಿದ್ದಾರೆ. ಹಾಗೆಯೇ ಅರಣ್ಯವಾಸಿಗಳಾದ ಆದಿವಾಸಿಗಳ ಮೇಲೆ ಹೊರಗಿನ ಪ್ರಪಂಚದ ಪ್ರಭಾವ ಮತ್ತು ಹಿಡಿತ ಆದಿವಾಸಿಗಳ ಮೇಲೆ ಹೇಗೆ ಪ್ರಭಾವ ಬೀರುತ್ತಿತ್ತು ಎಂಬುದನ್ನು ಹೇಳಿದ್ದಾರೆ. ಅಲ್ಲದೆ ಯಾವತ್ತೂ ಅರಣ್ಯವಾಸಿಗಳಾದ ಮತ್ತು ಅರಣ್ಯದ ಬಗ್ಗೆ ಸಂಪೂರ್ಣ ಜ್ಞಾನ ಹೊಂದಿದ ಆದಿವಾಸಿಗಳು ಎಂದೂ ಅರಣ್ಯ ತಮ್ಮದು ಎಂದುಕೊಳ್ಳುವುದಿಲ್ಲ ಮತ್ತು ತಾವು ಎಂತಹುದೇ ದಟ್ಟ ಅರಣ್ಯಕ್ಕೆ ಹೋಗಿ ಹೊಸ ನೆಲೆ ಕಂಡು ಕೊಂಡರೂ ಆ ಪ್ರದೇಶ ಯಾವುದೋ ಒಬ್ಬ ಧನಿಗಳದ್ದು ಎಂದೇ ಭಾವಿಸುತ್ತಾರೆ. ಎಂದೂ ತಮ್ಮದೆಂದು ಸಾಧಿಸುವುದಿಲ್ಲ. ತಮ್ಮದನ್ನಾಗಿಸಿಕೊಳ್ಳಲು ಯಾವುದೇ ಪ್ರಯತ್ನ ಮಾಡುವುದಿಲ್ಲ. ಇಂತಹ ಹಲವು ಅಂಶಗಳು ವ್ಯಕ್ತಪಡಿಸಲ್ಪಟ್ಟಿವೆ. ವಿಷಯ ಹೀಗಿರುವಾಗ ಆದಿವಾಸಿಗಳ ಬಳಿ ಸಾಗುವಳಿ ಪತ್ರ ಅಥವಾ ದಾಖಲಾತಿ ಕೇಳಿದರೆ ಯಾವುದೇ ಅಂಶ ದೊರಕದು. ಇಂತಹ ಸಂದರ್ಭದಲ್ಲಿ ಆದಿವಾಸಿಗಳ

ಬದುಕು ಅತಂತ್ರವಾಗುತ್ತದೆ. ಇದಕ್ಕೆ ಅರಣ್ಯ ಹಕ್ಕುಗಳ ಕಾಯಿದೆ ಏನು ಹೇಳುತ್ತದೆ? ಅವರಿಗೆ ಹೇಗೆ ನ್ಯಾಯ ಹೊದಗಿಸಲಾಗುತ್ತದೆ? ಮತ್ತು ಹೊದಗಿಸಲಾಗಿದೆ? ಅಧ್ಯಯನದ ಸಂದರ್ಭದಲ್ಲಿ ಇಂತಹ ಹಲವು ಪ್ರಶ್ನೆಗಳು ಉದ್ಭವಿಸಲು ಇದು ಸಹಕಾರಿಯಾಗಿದೆ.

**ಶಿವಸುಂದರ್ (2011)**

'ಚಾರ್ವಾಕ' ಇದು ಶ್ರೀ ಶಿವಸುಂದರ್‌ರವರು ಲಂಕೇಶ್ ಪತ್ರಿಕೆಯಲ್ಲಿ ಪ್ರಕಟಿಸಿರುವ ಬಿಡಿ ಲೇಖನಗಳ ಸಂಗ್ರಹ ಪುಸ್ತಕ. ಪ್ರತಿಯೊಂದು ಲೇಖನದಲ್ಲೂ ಯಾವುದೇ ಒಂದು ಕಾರ್ಯ ಅಥವಾ ಯೋಜನೆ ಹಿಂದೆ ಬಂಡವಾಳಗಾರರ ವಂಚನೆ, ಕುಯುಕ್ತಿ, ಕೈವಾಡ ಹೇಗೆ ತನ್ನ ಪ್ರಭಾವವನ್ನು ಬೀರುತ್ತದೆ ಎಂಬುದನ್ನು ಮನಗಾಣಲು ಸಹಾಯವಾಯಿತು. ವಿಷಯದ ದೃಷ್ಟಿಕೋನವನ್ನು ಹೇಗೆ ಅಥವಾ ಯಾವ ನಿಟ್ಟಿನಲ್ಲಿ ನೋಡಬೇಕಾಗುತ್ತದೆ ಎಂಬುದನ್ನು ಈ ಲೇಖನಗಳು ತಿಳಿಸಿಕೊಡುತ್ತವೆ. ಈ ಹಿನ್ನೆಲೆಯಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ರಚನೆ ಹಿನ್ನೆಲೆಯ ಲಾಭ-ಲಾಭಿ ಅರಿಯಲು ಸಹಾಯಕವಾಯಿತು.

ಒಟ್ಟಾರೆ ಸಾಹಿತ್ಯ ಪರಾಮರ್ಶೆಯಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ರಚನೆಯ ಸಂದರ್ಭದ ನಡಾವಳಿಗಳು, ಸರ್ಕಾರಿ ಆದೇಶಗಳು, ವಿದ್ವಾಂಸರ ಲೇಖನಗಳು, ವಿಚಾರ ಲೇಖನಗಳು, ಕಾದಂಬರಿಗಳು, ಕಾಯಿದೆಯ ಅನುಷ್ಠಾನದಲ್ಲಿ ಪಾಲ್ಗೊಂಡ ನಿರ್ದೇಶಕರುಗಳ ಟಿಪ್ಪಣಿಗಳು ಹೀಗೆ ಹಲವು ಆಯಾಮಗಳಲ್ಲಿ ಸಂಶೋದನೆಗೆ ಸಂಬಂಧಿಸಿದಂತೆ ಅಧ್ಯಯನ ಕೈಗೊಳ್ಳಲಾಗಿದೆ. ಇವುಗಳ ಹಿನ್ನೆಲೆಯಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ರಚನೆಯ ಹಿನ್ನೆಲೆ ಏನು? ಕಾಯಿದೆಯ ಉದ್ದೇಶವೇನು? ಅನುಷ್ಠಾನಕ್ಕಿರುವ ಸವಾಲುಗಳೇನು? ಅನುಷ್ಠಾನ ಮಾಡಬಹುದಾದ ಸಾಧ್ಯತೆಗಳಾವುವು? ಕಾಯಿದೆ ಅನುಷ್ಠಾನದಿಂದ ಆದಿವಾಸಿಗಳ ಬದುಕು ಹಸನಾಗುತ್ತದೆಯೇ? ಅನುಷ್ಠಾನ ಎಂಬುದು ಭೌತಿಕವಾದದ್ದೆ? ಅಭೌತಿಕವಾದ್ದೇ? ಅರಣ್ಯ ಹಕ್ಕು ಕ್ಲೇಮಿಗೆ ಸಲ್ಲಿಸಿದ ಅರ್ಜಿಗಳ ತಿರಾಸ್ಕಾರಕ್ಕೆ ಕಾರಣಗಳೇನು? ಆದಿವಾಸಿಗಳಲ್ಲಿರುವ ಭಯವೇನು? ಪರಿಸರವಾದಿಗಳ ಆತಂಕಗಳೇನು? ಬಂಡವಾಳಶಾಹಿಗಳ ಉದ್ದೇಶವೇನು? ಅಧಿಕಾರಿಗಳ ಸವಾಲುಗಳೇನು? ಭೂಮಿಯ ಬಗೆಗೆ ಆಧಿವಾಸಿಗಳ ಕಲ್ಪನೆ ಏನು? ಅರಣ್ಯ ಸಂಬಂಧೀ ವಿವಿಧ ಕಾಯಿದೆಗಳ ವೈರುಧ್ಯಗಳೇನು? ಆದಿವಾಸಿಗಳು ಅರಣ್ಯದಲ್ಲೇ ಇರಬೇಕೆ? ಅಥವಾ ಹೊರಬರಬೇಕೆ? ಪುನರ್ವಸತಿ ನೀತಿ ಅನುಸರಿಸಲಾಗಿದೆಯೇ? ಇಂತಹ ಪ್ರಶ್ನೆಗಳನ್ನು ಸಾಹಿತ್ಯ ಪರಾಮರ್ಶನದಿಂದ ಎತ್ತಿಕೊಳ್ಳಲಾಗಿದೆ.

## ಉಪಸಂಹಾರ

ಉತ್ತರ ಭಾರತದಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ಸಾಕಷ್ಟು ತೀವ್ರಗತಿಯಲ್ಲಿ ಅನುಷ್ಠಾನಗೊಂಡಿದೆ. ಆದರೆ ಕರ್ನಾಟಕದಲ್ಲಿ ಮಾತ್ರ ಮಂದಗತಿಯಲ್ಲಿ ಸಾಗಿದೆ. ಇದಕ್ಕಾಗಿ ಅಧಿಕಾರಿಶಾಹಿ ಸಾಕಷ್ಟು ಶ್ರಮಿಸದೆ ಅನುಷ್ಠಾನ ಕಡತಗಳಲ್ಲಿಯೆ ಉಳಿದಿದೆಯೇ? ಅಥವಾ ಇನ್ನಿತರ ಕಾರಣಗಳೇನು? ಇರುವ ಸವಾಲುಗಳೇನು? ಸಾಧ್ಯತೆಗಳೇನು? ಎಂಬುದರ ಸವಿಸ್ತಾರವಾದ ಅಧ್ಯಯನ ಕೈಗೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ರಾಷ್ಟ್ರೀಯ ಆದಿವಾಸಿ ನೀತಿಯ ಮುಖ್ಯ ಉದ್ದೇಶಗಳನ್ನು ಪರಿಶೀಲಿಸಲಾಗುವುದು. ಇದರ ಮುಖ್ಯ ಅಂಶಗಳಾದ ಬುಡಕಟ್ಟು ಪರಂಪರೆಗೆ ಧಕ್ಕೆ ಬಾರದಂತೆ ಮುಖ್ಯವಾಹಿನಿಗೆ ಅವರನ್ನು ತರುವಲ್ಲಿ ಯಾವ ಕ್ರಮ ಕೈಗೊಳ್ಳಲಾಗಿದೆ? ಔಪಚಾರಿಕ ಶಿಕ್ಷಣದಲ್ಲಿ ಯಾವ ಆಧಾರದ ಮೇಲೆ ಪಠ್ಯಕ್ರಮ ರೂಪಿಸಲಾಗಿದೆ? ಸ್ಥಳಾಂತರ ಅನಿವಾರ್ಯವಾದವರಿಗೆ ಮಾತ್ರವೋ? ಕಡ್ಡಾಯವೋ? ಆದಿವಾಸಿಗಳ ವೈದ್ಯಕೀಯ ಜ್ಞಾನವನ್ನು ಸಂರಕ್ಷಿಸುವಲ್ಲಿ ಕೈಗೊಂಡಿರುವ ಕ್ರಮಗಳೇನು? ಅರಣ್ಯ ಗ್ರಾಮಗಳಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿಯೂ ಆ ಗ್ರಾಮದ ಮೂಲ ಸೌಂದರ್ಯವನ್ನು ಮತ್ತು ಅವರ ಭಾವನಾತ್ಮಕ ಸಂಬಂಧಗಳನ್ನು ಹೇಗೆ ಕಾಪಾಡಲಾಗಿದೆ? ಕುಮ್ರಿ ಬೇಸಾಯ ಪದ್ಧತಿ ನಿಲ್ಲಿಸಲು ಕೈಗೊಂಡಿರುವ ಕ್ರಮಗಳೇನು? ಮೌಖಿಕ ಆಧಾರಗಳ ಮೇಲೆ ಹೇಗೆ ಅವರ ಭೂಪರಾಧೀನತೆಯನ್ನು ತಪ್ಪಿಸಿ ಆಸ್ತಿ ಹಕ್ಕು ರಕ್ಷಿಸಲಾಗುತ್ತಿದೆ. ಮೂಲತಃ ಬುಡಕಟ್ಟುಗಳಿಗೆ ಆಸ್ತಿಯ ಕಲ್ಪನೆ ಇಲ್ಲ. ಇಂತಹ ಸಂದರ್ಭದಲ್ಲಿ ಆದಿವಾಸಿಗಳ ಭಾವನಾತ್ಮಕ ಆಸ್ತಿಗಳು ಯಾವುವು? ಇವರ ಭಾಷೆ ಉಳಿಸಲು ಮತ್ತು ಮಾತೃ ಭಾಷೆಯಲ್ಲಿ ಶಿಕ್ಷಣ ನೀಡಲು ಏನು ಕ್ರಮ ಕೈಗೊಳ್ಳಲಾಗಿದೆ? ಸ್ಥಳೀಯ ಆಡಳಿತ ವ್ಯವಸ್ಥೆಗೆ ಯಾವ ರೀತಿಯ ಪ್ರಾಮುಖ್ಯತೆ ನೀಡಲಾಗಿದೆ. ಇವುಗಳ ಅನುಷ್ಠಾನದಲ್ಲಿ ಯಾವ ತೊದರೆಗಳು ಎದುರಾಗುತ್ತಿವೆ? ಈ ಅಂಶಗಳನ್ನು ಕುರಿತು ಮುಂದಿನ ಅಧ್ಯಾಯಗಳಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

## ಕೊನೆಟಿಪ್ಪಣಿ

೧. ಬೋರಲಿಂಗಯ್ಯ. ಹಿ. ಚಿ., *ಅರಣ್ಯದ ನಡುವೆ ಆಧ್ಯಾತ್ಮ ಮತ್ತು ಅಟ್ಟಹಾಸ*, ಬುಡಕಟ್ಟು ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ–೫, ಸಂಚಿಕೆ–೨, ೨೦೦೮ ಪುಟ–೦೧..

**ಪೀಠಿಕೆ**

ಮಾನವ ಸಮಾಜ ಜೀವಿ ಎಂದು ಅರಿಸ್ಟಾಟಲ್ ಹೇಳಿರುವುದು ಎಷ್ಟು ಸತ್ಯವೋ 'ಮಾನವ ಪರಿಸರದ ಕೂಸು' ಎಂಬುದು ಅಷ್ಟೇ ಸತ್ಯ. ಭೂಮಿಯ ಮೇಲೆ ಜನ್ಮತಾಳಿದ ಮಾನವನು ಪರಿಸರದೊಂದಿಗೆ ಪರಿಸರವನ್ನವಲಂಬಿಸಿ ಅದರ ನೆರಳಿನಲ್ಲಿಯೇ ಬದುಕು ಕಟ್ಟಿಕೊಳ್ಳಬೇಕಾದ ಅನಿವಾರ್ಯತೆಯನ್ನು ಹೊಂದಿದ್ದಾನೆ. ಧರ್ಮವನ್ನು ನಾವು ರಕ್ಷಿಸಿದರೆ ಧರ್ಮವು ನಮ್ಮನ್ನು ರಕ್ಷಿಸುತ್ತದೆ. ಎನ್ನುವ ಹಾಗೆಯೇ ನಾವು ಪರಿಸರವನ್ನು ರಕ್ಷಿಸಿದರೆ ಪರಿಸರವು ನಮ್ಮನ್ನು ರಕ್ಷಿಸುತ್ತದೆ. ಹಾಗಾಗಿ ಪರಿಸರವನ್ನು ಅರ್ಥವತ್ತಾಗಿ ತಿಳಿದು ಕೊಳ್ಳಲು ಪರಿಸರ ಅಧ್ಯಯನ ಅವಶ್ಯವಾಗಿರುತ್ತದೆ. ಹಾಗೆಯೇ ಪರಿಸರ ಸಂರಕ್ಷಣೆಯಲ್ಲಿ ಆದಿವಾಸಿಗಳ ಪಾತ್ರ ಮತ್ತು ಅವರ ನಡುವಿನ ಸಂಬಂಧ ಅರಿಯಬೇಕಿದೆ. ಹಾಗಾಗಿ ಇವೆರಡನ್ನೂ ಜೊತೆಯಾಗಿ ಅರ್ಥೈಸಿಕೊಳ್ಳಬೇಕಿದೆ.

ಆದಿವಾಸಿಗಳು ಎಂದ ತಕ್ಷಣ ನಮ್ಮೆಲ್ಲರ ಮನಸ್ಸಿನಲ್ಲಿ ಮೂಡುವುದು ಅವರು ಕಾಡಿನಲ್ಲಿ ವಾಸಿಸುವವರು. ಹಾಗೆಯೇ ಅನಾಗರಿಕ, ಹಿಂದುಳಿದ, ನಾಗರೀಕ ಜಗತ್ತಿನೊಂದಿಗೆ ಯಾವುದೇ ಸಂಪರ್ಕವಿಲ್ಲದೆ ಗಡ್ಡೆ-ಗೆಣಸು, ನಾರು-ಬೇರು, ಸೊಪ್ಪು-ಸದೆ, ಹಸಿ ಮಾಂಸ ತಿಂದು ಬದುಕುತ್ತಿರುವ ಸಮುದಾಯ ಎಂದು. ಇದು ಸರಿಯೋ ತಪ್ಪೋ ಬೇರೆ ಮಾತು. ಆದರೆ ಆದಿವಾಸಿಗಳಿಗೂ ಅರಣ್ಯಕ್ಕೂ ಎಂದೂ ಬಿಡದ ನಂಟು ಇದ್ದೇ ಇದೆ. ಹಾಗಾಗಿ ಆದಿವಾಸಿಗಳ ಹಕ್ಕುಗಳ ಕುರಿತು ಅಧ್ಯಯನ ಕೈಗೊಳ್ಳುತ್ತಿರುವಾಗ ಆದಿವಾಸಿಗಳ ಅರಣ್ಯ ಸಂಪರ್ಕ ಮತ್ತು ಅವರ ಪರಿಸರ ಕಾಳಜಿ ಜೊತೆಗೆ ಪರಿಸರ ಸಂರಕ್ಷಣೆಯಲ್ಲಿ ಆದಿವಾಸಿಗಳ ದೇಶೀಯ ಜ್ಞಾನ ಮತ್ತು ತಂತ್ರಜ್ಞಾನದ ಬಗ್ಗೆ ಅರಿಯಬೇಕಾಗಿದೆ. ಇಂತಹ ಒಂದು ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಇಲ್ಲಿ ಮುಂದುವರಿದು ಅರಣ್ಯ ಎಂಬುದನ್ನು ಸ್ವಲ್ಪ ವಿಸ್ತಾರ ಅರ್ಥದಲ್ಲಿ ನಾವು ನೋಡುವುದಾದರೆ ಅದನ್ನು ಪರಿಸರ ಎಂದು ಕರೆಯಬಹುದು. ಹಾಗಾಗಿ ಪರಿಸರ ಮತ್ತು ಆದಿವಾಸಿಗಳ ಸಂಬಂಧ ಅರಿಯಬೇಕಾದರೆ ಪರಿಸರ ಎಂದರೆ ಏನು? ಎಂಬುದನ್ನು ಕೆಲವು ವ್ಯಾಖ್ಯಾನಗಳಿಂದ ತಿಳಿಯುವುದು ಅವಶ್ಯಕ. 'ಪರಿಸರ ಎನ್ನುವ ಪದವನ್ನು ವಿವಿಧ ಕ್ಷೇತ್ರದ ಪರಿಣತರು ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಿರುವರು. ಸಾಮಾನ್ಯ ಅರ್ಥದಲ್ಲಿ "ಒಂದು ಜೀವಿ, ವ್ಯಕ್ತಿ ಅಥವಾ ಒಂದು ಸಮುದಾಯವು ಜೀವಿಸುತ್ತಿರುವ ಸ್ಥಳದ ಎಲ್ಲಾ ಅಂಶಗಳನ್ನು ಒಳಗೊಂಡಿರುವುದು."[1] ಪರಿಸರ ಎಂದು ಅರ್ಥ ಕೊಡುವ ಎನ್‌ವಿರಾನ್ ಎಂಬುದು ಮೂಲತಃ ಫ್ರೆಂಚ್ ಪದವಾಗಿದ್ದು, "ಪ್ರತಿಯೊಂದು ಜೀವಿಯೂ ಹಲವಾರು ಜೈವಿಕ ಹಾಗೂ ಅಜೈವಿಕ ವಸ್ತುಗಳ ಜೊತೆಗೆ ಜೀವಿಸುತ್ತಿದ್ದು, ಅವುಗಳ ಮೇಲೆ ಪ್ರಭಾವ ಬೀರುವುದಲ್ಲದೇ ಅವುಗಳಿಂದ ತಾನೂ ಸಹ ಅತಿ ಹೆಚ್ಚು ಪ್ರಭಾವಿತಗೊಳ್ಳುವುದು. ಈ ಎಲ್ಲಾ ಅಂಶಗಳ ಒಕ್ಕೂಟವನ್ನು ಪರಿಸರವೆಂದು ಕರೆಯಲಾಗಿದೆ."[2] ಅಂದರೆ ಸಾಮಾನ್ಯ

ಅರ್ಥದಲ್ಲಿ ಒಂದು ಜೀವಿ ಅಥವಾ ವ್ಯಕ್ತಿಯು ವಾಸಿಸುವ ಸುತ್ತಲಿನ ಎಲ್ಲಾ ಲಕ್ಷಣಗಳನ್ನು ವಿವರಿಸಲು ಪರಿಸರ ಎಂಬ ಪದವನ್ನು ಬಳಸಲಾಗಿದೆ. ಭೂಮಿಯ ಮೇಲಿನ ಎಲ್ಲಾ ಜೀವಿಗಳೂ, ಮಾನವನನ್ನು ಸಹ ಒಳಗೊಂಡಂತೆ, ತಮ್ಮ ಅಸ್ತಿತ್ವಕ್ಕಾಗಿ ಈ ಪರಿಸರವನ್ನು ಅವಲಂಬಿಸಿವೆ. ಹಾಗಾಗಿ ಪ್ರತಿಯೊಂದು ಜೀವಿಯೂ ತನ್ನ ಸುತ್ತಲಿನ ಜೈವಿಕ ಹಾಗೂ ಅಜೈವಿಕ ಪರಿಸರದ ಭಾಗಗಳೊಂದಿಗೆ ಅನುವರ್ತನೆಯನ್ನು ಹೊಂದಿರುತ್ತದೆ. ಜೀವಿಗಳ ಜೀವನ ನಿರ್ವಹಣೆ ಹಾಗೂ ಅಸ್ತಿತ್ವಕ್ಕೆ ಈ ಅನುವರ್ತನೆ ಅತೀ ಅಗತ್ಯವಾಗಿದೆ.

ಯೂನಿವರ್ಸಲ್ ವಿಶ್ವಕೋಶದಲ್ಲಿ ವಿವರಿಸಿರುವಂತೆ "ಒಂದು ಜೀವಿ, ಪ್ರಭೇದ ಅಥವಾ ಜನಾಂಗದ ಅಭಿವೃದ್ಧಿ, ಬೆಳವಣಿಗೆ, ಜೀವನ ಮತ್ತು ಮೃತ್ಯುವಿನ ಮೇಲೆ ಪ್ರಭಾವ ಬೀರುವ ಪರಿಸ್ಥಿತಿ ಹಾಗೂ ಜೀವಿಗಳ ಒಟ್ಟು ಪರಿಸ್ಥಿತಿಯನ್ನು ಪರಿಸರವೆಂದು ಕರೆಯಲಾಗಿದೆ."[೩] ಬ್ರಿಟಾನಿಕ ವಿಶ್ವಕೋಶದಲ್ಲಿ ವಿವರಿಸಿರುವಂತೆ, "ಒಂದು ಜೀವಿಯ ಭೌತಿಕ ಹಾಗೂ ಜೈವಿಕ –ಈ ಎಲ್ಲ ಅಂಶಗಳನ್ನೂ ಪರಿಸರವೆಂದು ಪರಿಗಣಿಸಲಾಗಿದೆ."[೪] ಅಮೇರಿಕಾದ ಪರಿಸರ ಆರೋಗ್ಯ ಸಮಿತಿ ವಿವರಿಸಿರುವಂತೆ "ಮನುಷ್ಯನು ಜೀವಿಸುವ, ಕೆಲಸ ಮಾಡುವ ಕ್ರಿಯಾ ನಿರತವಾಗಿರುವ ಸುತ್ತಲಿನ ಎಲ್ಲಾ ಅಂಶಗಳೇ ಪರಿಸರ. ಇದು ಆತನು ಉಸಿರಾಡುವ ಗಾಳಿ, ಕುಡಿಯುವ ನೀರು, ತಿನ್ನುವ ಆಹಾರ, ರಕ್ಷಣೆ ಮಾಡಿಕೊಳ್ಳಲು ನಿರ್ಮಿಸುವ ವಸತಿಗಳೆಲ್ಲವನ್ನೂ ಸಹ ಒಳಗೊಂಡಿದೆ."[೫] ವೆಬ್‌ಸ್ಟರ್ ಅರ್ಥಕೋಶದಲ್ಲಿ ವ್ಯಾಖ್ಯಾನಿಸಿರುವಂತೆ, "ವ್ಯಕ್ತಿಯ ಅಥವಾ ಸಮುದಾಯದ ಒಟ್ಟಾರೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿಗಳ ಮೇಲೆ ಬೀರುವ ಸುತ್ತಮುತ್ತಲಿನ ಪರಿಸ್ಥಿತಿಯನ್ನು ಪರಿಸರ"[೬] ಎಂದು ಕರೆಯಲಾಗಿದೆ.

ಹಲವು ಅಂಶಗಳನ್ನು ಒಳಗೊಂಡಿರುವ ಪರಿಸರವು ಬಹಳ ಜಟಿಲಮಯವಾದುದು. ಜೀವರಾಶಿಯನ್ನು ಆವರಿಸಿ ವ್ಯಾಪಿಸಿ ಅದರ ಮೇಲೆ ಬೀರುವ ಪ್ರಭಾವವು ಗಣನೀಯವಾದುದು. ಪರಿಸರ ಮತ್ತು ಜೀವಿಗಳ ನಡುವೆ ಒಂದಲ್ಲ ಒಂದು ರೀತಿಯ ವಿನಿಮಯ ನಿರಂತರ ನೆಡೆದೇ ಇರುತ್ತದೆ. ಜೀವ ಪ್ರಪಂಚದ ಯಾವ ಜೀವಿಯೂ ಸ್ವತಂತ್ರವಲ್ಲ. ಸಮಸ್ತ ಜೀವಿಗಳೂ ತಮ್ಮ ಉಳುವಿಗಾಗಿ ಒಂದರ ಮೇಲೊಂದು ಅವಲಂಬಿಸಿರುತ್ತವೆ. ಪರಸ್ಪರ ವರ್ತಿಸುತ್ತವೆ. ಮತ್ತು ಪ್ರಭಾವ ಬೀರುತ್ತವೆ. ಜೀವಿಗಳ ನಡುವೆ ಪರಸ್ಪರ ಅವಲಂಬನೆಯಿರುವಂತೆಯೇ ಜೀವಿ ನಿರ್ಜೀವಿ ವಸ್ತುಗಳ ನಡುವೆ ನಿಕಟ ಸಂಬಂಧವಿದೆ. ಹಾಗಾಗಿ "ಜೀವಿಗಳ ಮತ್ತು ಅವುಗಳ ಪರಿಸರದ ನಡುವಿನ ಆಂತರಿಕ ಸಂಬಂಧಗಳ ಅಧ್ಯಯನಕ್ಕೆ ಜೀವಿ ಪರಿಸರ ವಿಜ್ಞಾನ ಎನ್ನುವರು."[೭] ಹೀಗೆ ಪರಿಸರವೆನ್ನುವ ಪದವು ಒಂದು ಜೀವಿ ಅಥವಾ ಮಾನವನು ವಾಸಿಸುತ್ತಿರುವ ಸ್ಥಳದ ಎಲ್ಲಾ ಜೈವಿಕ ಹಾಗೂ ಅಜೈವಿಕ ಅಂಶಗಳನ್ನು ಒಳಗೊಂಡಿದೆ. ಜೀವಿಯ ಮೇಲೆ ಪ್ರಭಾವವನ್ನು ಬೀರುವ ಎಲ್ಲಾ ಬಗೆಯ ಅಂಶಗಳು ಅದರ ಪರಿಸರ ವ್ಯಾಪ್ತಿಗೆ ಒಳಪಟ್ಟಿದೆ. ಇಂತಹ ಅಂಶಗಳನ್ನೇ ಪರಿಸರದ ಅಂಶಗಳು, ಜೀವಿ ಪರಿಸರ ಅಂಶಗಳು ಎಂದು

ಕರೆಯಲಾಗುವುದು. ಅಥವಾ ಸರಳವಾಗಿ ಜೈವಿಕ ಹಾಗೂ ಅಜೈವಿಕ ಅಂಶಗಳೆಂದು ಹೇಳಲಾಗುವುದು. "ಇದರಲ್ಲಿಯೇ ಆ ಜೀವಿಯು ಜೀವಿಸುತ್ತಿದ್ದು, ಆ ಸ್ಥಳವನ್ನು 'ಜೀವಿಯ ವಾಸಸ್ಥಳ' ಅಂದರೆ 'ಜೀವಿಸ್ಥಳ' ಅಥವಾ 'ಜೀವಿನೆಲೆ' ಯೆಂದು ಕರೆಯಲಾಗಿದೆ. ಅಂದರೆ ಜೀವಿಸ್ಥಳ ಅದರ ಪರಿಸರ ವ್ಯಾಪ್ತಿಯಲ್ಲಿಯೇ ಸೇರಿದೆ."[೮] ಈ ಮೇಲಿನ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದ್ದೇ ಆದರೆ ನಮಗೆ ಅರ್ಥವಾಗುತ್ತದೆ. ಆದಿವಾಸಿಗಳು ಮತ್ತು ಪರಿಸರ ಬೇರೆ ಬೇರೆ ಅಲ್ಲ ಆದಿವಾಸಿಗಳು ಪರಿಸರದ ಭಾಗವೇ ಆಗಿದ್ದಾರೆ. ಆದ್ದರಿಂದ ಆದಿವಾಸಿಗಳನ್ನು ಅರಣ್ಯದಿಂದ ಒಕ್ಕಲೆಬ್ಬಿಸಿದರೆ ತಾಯಿಯಿಂದ ಮಗುವನ್ನು ಬೇರೆ ಮಾಡಿದಂತೆ. ಇಲ್ಲಿ ಯಾವ ಮನುಷ್ಯನೇ ಆಗಲಿ ತಾನು ನೈಸರ್ಗಿಕವಾಗಿ ಹುಟ್ಟಿ ಬೆಳೆಯಲು ಇರುವ ಅನುಕೂಲಕರ ವ್ಯವಸ್ಥೆಯನ್ನು ಹಾಳುಗೆಡವಲಾರ. ಇದನ್ನು ಅರ್ಥೈಸಿಕೊಂಡು ಆದಿವಾಸಿಗಳಿಗೆ ಅವರ ನೆಲೆ ಬಿಟ್ಟು ಕೊಡಬೇಕಾಗಿದೆ. ಶತಾಯಗತಾಯ ಆದಿವಾಸಿಗಳು ಅದನ್ನು ಜತನದಿಂದ ಸಂರಕ್ಷಿಸುತ್ತಾರೆ. ಕಣ್ಣು ರೆಪ್ಪೆಗಳು ಕಣ್ಣನ್ನು ಕಾಪಾಡುವಂತೆ ಅರಣ್ಯವನ್ನು ಸಂರಕ್ಷಿಸಿಕೊಂಡು ತಾವು ಬದುಕುತ್ತಾ ಮುಂದಿನ ಪೀಳಿಗೆಗೆ ಅರಣ್ಯ ಮತ್ತು ಪರಿಸರವನ್ನು ಬಳುವಳಿಯಾಗಿ ನೀಡುವುದರಲ್ಲಿ ಯಾವುದೇ ಸಂದೇಹವಿಲ್ಲ.

ಮಾರ್ಚ್ ೨೧ ನ್ನು ನಾವು ಪ್ರತೀ ವರ್ಷ ಅಂತರರಾಷ್ಟ್ರೀಯ ಅರಣ್ಯದಿನ ಎಂದು ಆಚರಿಸುತ್ತೇವೆ. ಮತ್ತು ಆ ಒಂದು ವಾರ ವನಮಹೂತ್ಸವದಂತಹ ಆಚರಣೆಗಳನ್ನೂ ಆಚರಿಸುತ್ತೇವೆ. ೨೦೧೧ ನೇ ವರ್ಷವನ್ನು ಅರಣ್ಯ ವರ್ಷ ಎಂದು ಘೋಷಣೆ ಮಾಡಲಾಯಿತು. ಆದರೆ ಆದಿವಾಸಿಗಳಿಗೆ ಈ ಆಚರಣೆಗಳ ಬಗ್ಗೆ ಅರಿವು ಇಲ್ಲ. ಅವರಿಗೆ ಇಂತಹ ಆಚರಣೆಗಳಲ್ಲಿ ನಂಬಿಕೆಯೂ ಇಲ್ಲ. ಆದರೆ ಪರಿಸರ ಸಂರಕ್ಷಣೆ ಮತ್ತು ಪ್ರಾಣಿ ಸಂರಕ್ಷಣೆಯಲ್ಲಿ ಇವರ ಕಾಳಜಿ, ಮತ್ತು ಜ್ಞಾನ ಅಪಾರ. ಆದಿವಾಸಿಗಳ ಬಳಿ ಅರಣ್ಯ ಅಭಿವೃದ್ಧಿಯ ತಂತ್ರಗಳು ಉತ್ಕೃಷ್ಟವಾಗಿವೆ. ಇಂದಿನ ದಿನಗಳಲ್ಲಿ ಇವುಗಳನ್ನು ಅಳವಡಿಸಿಕೊಳ್ಳುವುದು ಅತೀ ಅವಶ್ಯಕವಾದುದಾಗಿದೆ. ಆದಿವಾಸಿಗಳು ಪರಿಸರ ಸಮತೋಲನ ಕಾಪಾಡುವಲ್ಲಿ ಮಹತ್ವದ ಪಾತ್ರ ವಹಿಸುತ್ತಿದ್ದರು. ಪ್ರಕೃತಿಯಲ್ಲಿ ದೊರೆಯುವ ಯಾವುದೇ ಹಣ್ಣು-ಹಂಪಲು, ಗಡ್ಡೆ-ಗೆಣಸು, ನಾರು-ಬೇರು, ಸೊಪ್ಪು-ಸದೆ, ಜೇನು-ಮೀನು, ಮಾಂಸ ಎಲ್ಲವೂ ಕೇವಲ ಮನುಷ್ಯರ ಪಾಲಲ್ಲ; ಅದು ಪ್ರಕೃತಿ ಮಾತೆಯ ಮಕ್ಕಳಾದ ಪ್ರಾಣಿ, ಪಕ್ಷಿ, ಕೀಟ, ಹುಳ, ಹುಪ್ಪಡಿ ಇವುಗಳೆಲ್ಲವಕ್ಕೂ ಸಮನಾದ ಪಾಲು ಇರಬೇಕು. ಹೀಗೆ ನಂಬಿದವರು ಮತ್ತು ಆಚರಿಸಿಕೊಂಡು ಬಂದವರು ಆದಿವಾಸಿಗಳು. ಪರಿಸರ ಸಂರಕ್ಷಣೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಆದಿವಾಸಿಗಳು ಸಾಕಷ್ಟು ಜ್ಞಾನ ಹೊಂದಿದ್ದಾರೆ. ಇದನ್ನು ಹಲವು ಉದಾಹರಣೆಗಳಿಂದ ಕಂಡುಕೊಳ್ಳಲಾಗಿದೆ. ಅಂತಹವುಗಳಲ್ಲಿ ತರಗು ಬೆಂಕಿ ತಂತ್ರಜ್ಞಾನ ಕೂಡ ಒಂದು. ಇದರಿಂದ ಅರಣ್ಯ ಮತ್ತು ವನ್ಯಜೀವಿಗಳಿಗೆ ಅಲ್ಲದೆ ಅರಣ್ಯ ವಾಸಿಗಳಾದ ಆದಿವಾಸಿಗಳಿಗೆ ಹಾಗೂ ನಾಗರೀಕ ಜಗತ್ತಿಗೆ ಹೇಗೆ ಸದುಪಯೋಗವಾಗುತ್ತದೆ ಎಂಬುದನ್ನು ನಾವು

ನೋಡಬಹುದಾಗಿದೆ. ಪರಿಸರದ ಮಹತ್ವಕ್ಕೆ ಒತ್ತನ್ನು ನೀಡುತ್ತಾ ಒಂದೆಡೆ ನಿಸರ್ಗವಾದಿ ಹಾಗೂ ಪರಿಸರ ಪ್ರೇಮಿಯಾಗಿದ್ದ ರೂಸೋರವರ ಪ್ರಕಾರ ಮಾನವ ಪರಿಸರ ಮಧ್ಯದಲ್ಲಿ ಬದುಕಿ ಬಾಳಬೇಕು. ಆದಿವಾಸಿಗಳು ಅನುಸರಿಸಿಕೊಂಡು ಬಂದಿರುವುದು ಇದನ್ನೇ.

ಇವುಗಳ ಹಿನ್ನೆಲೆಯಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ಕುರಿತು ಅಧ್ಯಯನ ಕೈಗೊಳ್ಳುತ್ತಿರುವ ಈ ಸಂದರ್ಭದಲ್ಲಿ ಅಧ್ಯಯನ ವ್ಯಾಪ್ತಿಯ ಭೌಗೋಳಿಕ ಹಿನ್ನೆಲೆ, ಮತ್ತು ಆದಿವಾಸಿಗಳ ಪ್ರಸ್ತುತ ಬದುಕಿನ ಚಿತ್ರಣವನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೨. ೧. ಭೌಗೋಳಿಕ ಹಿನ್ನೆಲೆ

ಅಧ್ಯಾಯ ಒಂದರಲ್ಲಿ ಪ್ರಸ್ತುತ ಅಧ್ಯಯನ ಕ್ಷೇತ್ರ ವ್ಯಾಪ್ತಿಯನ್ನು ತಿಳಿಸಲಾಗಿದೆ. ಇಲ್ಲಿ ಅಧ್ಯಯನ ವ್ಯಾಪ್ತಿ ಪ್ರದೇಶವಾದ ಭೌಗೋಳಿಕ ಹಿನ್ನೆಲೆ ಅರಿಯುವ ಪ್ರಯತ್ನ ಮಾಡಲಾಗಿದೆ. ಇದು ಅಧ್ಯಯನದ ವ್ಯಾಪ್ತಿಗೆ ಒಳಪಡುವ ಆದಿವಾಸಿ ಸಮುದಾಯಗಳ ಸವಾಲುಗಳನ್ನು ಅರಿಯಲು ಮತ್ತು ಪರಿಹಾರಗಳನ್ನು ಕಂಡುಕೊಳ್ಳಲು ಸಹಕಾರಿಯಾಗುವುದು. ಏಕೆಂದರೆ ವ್ಯಕ್ತಿಗೆ ತಾನು ವಾಸಿಸುವ ನೆಲೆಯ ಹಿನ್ನೆಲೆ ಪ್ರಮುಖವಾದುದು.

### ೨. ೧. ೧. ಭಾರತ

ಪ್ರಪಂಚದ ಏಳು ಖಂಡಗಳಲ್ಲಿ ಏಷ್ಯಾ ಖಂಡವು ಅತಿ ದೊಡ್ಡದಾದ ಖಂಡವಾಗಿದೆ. ಭಾರತವು ಏಷ್ಯಾ ಖಂಡಕ್ಕೆ ಸೇರಿದೆ. ವಿಸ್ತೀರ್ಣ ಮತ್ತು ಅದರ ವಿಶಿಷ್ಟತೆ ಹಿನ್ನೆಲೆಯಲ್ಲಿ ಭಾರತವನ್ನು ಒಂದು ಉಪಖಂಡ ಎಂದು ಕರೆಯಲಾಗುತ್ತದೆ. ಭಾರತವು ೩೨,೮೭,೨೬೩ ಚದುರ ಕಿಲೋಮೀಟರ್ ಭೂ ಪ್ರದೇಶವನ್ನು ಹೊಂದಿದೆ. ಇದರಲ್ಲಿ ಅರಣ್ಯ ಪ್ರದೇಶವು ೬೮ ಮಿಲಿಯನ್ ಹೆಕ್ಟೇರ್ ಪ್ರದೇಶ ಅಥವಾ ಶೇಕಡಾ ೨೨ ರಷ್ಟು ಇದೆ. ಭಾರತದ ೨೯ ರಾಜ್ಯಗಳಲ್ಲಿ ಕರ್ನಾಟಕ ಒಂದು ವಿಶಿಷ್ಟ ರಾಜ್ಯವಾಗಿದೆ.







### ೨. ೧. ೨. ಕರ್ನಾಟಕ

ಕರ್ನಾಟಕವು ಭಾರತದ ನೈರುತ್ಯ ಭಾಗದ ರಾಜ್ಯವಾಗಿದೆ. ಇದು ಎತ್ತರವಾದ, ಸಮತಟ್ಟಾದ ಮತ್ತು ವಿಸ್ತಾರವಾದ ಪ್ರದೇಶವಾಗಿದ್ದು ದಖನ್ ಪ್ರಸ್ಥಭೂಮಿಯಲ್ಲಿ ವಿಸ್ತರಿಸಿದ್ದು ವಜ್ರಾಕೃತಿ ಹೊಂದಿದೆ. ೧,೯೧,೭೯೧ ಚದುರ ಕಿಲೋಮೀಟರ್ ವಿಸ್ತೀರ್ಣವನ್ನು ಹೊಂದಿದೆ. ಇದರಲ್ಲಿ **೩೮೭೨೪** ಚದುರ ಕಿಲೋಮೀಟರ್ ಅರಣ್ಯ ಪ್ರದೇಶವಿದೆ. ಅರಣ್ಯದಲ್ಲಿ ೫೦೦ ಬಗೆಯ ಪಕ್ಷಿ ಸಂಕುಲಗಳಿವೆ. ದೇಶದ ಒಟ್ಟು ಆನೆ ಮತ್ತು ಹುಲಿಗಳಲ್ಲಿ ೨೫ ಪ್ರತಿಶತ ಆನೆಗಳು ಮತ್ತು ೧೦ ಪ್ರತಿಶತ ಹುಲಿಗಳು ಕರ್ನಾಟಕದ ಕಾಡುಗಳಲ್ಲಿ ನೆಲೆಸಿವೆ. ಕರ್ನಾಟಕದ ಪಶ್ಚಿಮ ಘಟ್ಟಗಳ ಪರ್ವತ ಶ್ರೇಣಿಗಳು ಜೈವಿಕ ಸಂಪತ್ತಿನ ಆಗರವಾಗಿವೆ.


Bidar
Gulbarga
Bijapur
Yadgir
Bagalk
Belgaum
Raichur
Gadag
Dharwad
Koppal
Bellary
Uttar
Kannad
Haveri
Davangere
Shimoga
Chitradurga
Udupi
Chikmagalur
Tumkur
Chikballapur
Bangalore Rural
Kolar
Hassan
Bangalore
Dakshin
Kannad
Mandya
Ramanagara
Kodagu
Mysore
Chamarajanagar

## ೨. ೧. ೩. ಮೈಸೂರು ಜಿಲ್ಲೆ




ಕೃಪೆ: ಮೈಸೂರು ಜಿಲ್ಲಾ ವೆಬ್‌ಸೈಟ್

ಮೈಸೂರು ಜಿಲ್ಲೆಯು ಉಬ್ಬು ತಗ್ಗುಗಳಿಂದ ಕೂಡಿದ ಪ್ರಸ್ಥಭೂಮಿಯಾಗಿದೆ. ಬಿಟ್ಟು ಬಿಟ್ಟು ಗ್ರಾನೈಟ್ ಬಂಡೆಗಳಿಂದ ಕೂಡಿದೆ. ಸಮುದ್ರ ಮಟ್ಟದಿಂದ ಸಾಮಾನ್ಯ ಮೇಲ್ಮೈ ಪ್ರದೇಶವು ೭೦೦ ರಿಂದ ೯೦೦ ಮೀಟರ್ ಎತ್ತರದ ವ್ಯತ್ಯಾಸದಿಂದ ಕೂಡಿದೆ. ಜಿಲ್ಲೆಯ ಬೆಟ್ಟ ಪ್ರದೇಶಗಳು ನೀಲಗಿರಿ ಪರ್ವತ ಪ್ರದೇಶಗಳಲ್ಲಿ ಹುಟ್ಟಿ ದಕ್ಷಿಣದ ಅಂಚಿನಿಂದ ವಾಯುವ್ಯ ಮತ್ತು ಈಶಾನ್ಯ ದಿಕ್ಕಿನೆಡೆಗೆ ಚಾಚುತ್ತಾ ಸಾಗಿವೆ. ಇಲ್ಲಿ ಘಟ್ಟ ಪ್ರದೇಶಗಳಿವೆ ಮತ್ತು ಅವುಗಳಿಗೆ ಹೊಂದಿಕೊಂಡಂತೆ ಮೈಸೂರು ಪ್ರಸ್ಥಭೂಮಿ ಇದೆ. ಜಿಲ್ಲೆಯ ಉತ್ತರ ಭಾಗವನ್ನು ಹೊರತು ಪಡಿಸಿ ಇಡೀ ಜಿಲ್ಲೆಯು ಪಶ್ಚಿಮ ಘಟ್ಟಗಳಿಂದ ಸುತ್ತುವರಿಯಲ್ಪಟ್ಟಿದೆ. ಪಶ್ಚಿಮ ಘಟ್ಟ ಪ್ರದೇಶವು ಸಮುದ್ರ ಮಟ್ಟದಿಂದ ೧೨೦೦ ಮೀಟರ್‌ನಷ್ಟು ಎತ್ತರ ಇದೆ. ಬೆಟ್ಟ ಪ್ರದೇಶವು ನೈರುತ್ಯ ಭಾಗದಲ್ಲಿ ಮಾತ್ರ ವಿಭಜಿಸಲ್ಪಟ್ಟಿದೆ. ಈ ಘಟ್ಟ ಪ್ರದೇಶದಲ್ಲಿ ಕಾವೇರಿ ನದಿಯು ತನ್ನ ಪಾತ್ರದಲ್ಲಿ ಪ್ರಸಿದ್ಧ ಗಗನಚುಕ್ಕಿ ಮತ್ತು ಭರಚುಕ್ಕಿ ಜಲಪಾತಗಳನ್ನು ಶಿವನಸಮುದ್ರದ ಬಳಿ ಸೃಷ್ಟಿಸಿದೆ.

ಮೈಸೂರು ಜಿಲ್ಲೆಯು ೪,೧೨೬.೪೫ ಚದುರ.ಕಿ.ಮೀ ಅರಣ್ಯ ಪ್ರದೇಶವನ್ನು ಹೊಂದಿದೆ. ಇದು ಒಟ್ಟು ಪ್ರದೇಶದ ಶೇಕಡಾ ೩೨.೫೨. ೩೮೭೫.೬ ಚದುರ.ಕಿ.ಮೀ ರಕ್ಷಿತ ಅರಣ್ಯ. ೨೫೦.೯ ಚದುರ.ಕಿ.ಮೀ ಸಾಮಾನ್ಯ ಅರಣ್ಯ ವಾಗಿದೆ. ಮೈಸೂರು ಎರಡು ರೀತಿಯ ಅರಣ್ಯ ಪ್ರದೇಶವನ್ನು ಹೊಂದಿದೆ. ೯೦೦-೧೧೦೦ ಮಿ.ಮೀ ಮಳೆ ಬೀಳುವ ಪ್ರದೇಶದ ಪಸೆ ಎಲೆ ಬೀಳಿಸುವ ಕಾಡುಗಳು ಮತ್ತು ೭೦೦-೯೦೦ ಮಿ.ಮೀ. ಒಣ ಎಲೆ ಬೀಳಿಸುವ ಕಾಡುಗಳು. ಮೈಸೂರು ಜಿಲ್ಲೆಯು ರಾಜ್ಯದಲ್ಲಿಯೇ ೩ನೇ ಅರಣ್ಯ

ಸಂಪದ್ಭರಿತ ಜಿಲ್ಲೆಯಾಗಿದೆ. ಹುಣಸೂರು ತಾಲ್ಲೂಕಿನ ಪಶ್ಚಿಮ ಭಾಗದಿಂದ ಅರಣ್ಯವು ಪ್ರಾರಂಭವಾಗುತ್ತದೆ. ದಕ್ಷಿಣದಲ್ಲಿ ಕೇರಳ ಮತ್ತು ಪಶ್ಚಿಮದಲ್ಲಿ ತಮಿಳುನಾಡು ಅರಣ್ಯ ಗಡಿಯನ್ನು ಹೊಂದಿದೆ. ಹೆಚ್ಚು ಒತ್ತಾದ ಮತ್ತು ಶ್ರೀಮಂತ ಅರಣ್ಯ ಭಾಗವು ಹೆಚ್.ಡಿ.ಕೋಟೆ ತಾಲ್ಲೂಕಿನಲ್ಲಿ ತೇಗ, ಹೊನ್ನೆ, ಬೀಟೆ, ದಿಂಡಿಗ, ಗಂಧದ ಮರಗಳು ಕಂಡುಬರುತ್ತವೆ. ನಿತ್ಯಹರಿದ್ವರ್ಣ ಕಾಡುಗಳು ಇಲ್ಲಿವೆ. ಇಂತಹ ಕಾಡುಗಳು ಮತ್ತು ಕಾಡಂಚಿನಲ್ಲಿ ಜೇನುಕುರುಬರು ಮತ್ತು ಬೆಟ್ಟಕುರುಬರು ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಸೋಲಿಗರು ಮತ್ತು ಯರವರ ಸಂಖ್ಯೆ ಚಾಮರಾಜನಗರಕ್ಕೆ ಹೋಲಿಸಿದರೆ ಕಡಿಮೆ ಇರುವುದು ಕಂಡು ಬಂದಿದೆ.

### ೨. ೧. ೪. ಚಾಮರಾಜನಗರ ಜಿಲ್ಲೆ




ಕೃಪೆ: ಚಾಮರಾಜನಗರ ಜಿಲ್ಲಾ ವೆಬ್‌ಸೈಟ್

ಚಾಮರಾಜನಗರಕ್ಕೆ ಮೊದಲು 'ಅರಿಕೊಟ್ಟಾರ' ಎಂದು ಕರೆಯಲಾಗುತ್ತಿತ್ತು. ಮೈಸೂರು ಒಡೆಯರ ವಂಶದ ಚಾಮರಾಜ ಒಡೆಯರ್ ಇಲ್ಲಿ ಜನಿಸಿದ್ದರಿಂದ ಅವರ ಸವಿನೆನಪಿಗಾಗಿ ಇದಕ್ಕೆ ಚಾಮರಾಜನಗರ ಎಂದು ಮರು ನಾಮಕರಣ ಮಾಡಲಾಯಿತು. ಈ ಜಿಲ್ಲೆಯು ಒಟ್ಟು ೫೬೮೫ ಚ.ಕಿ.ಮೀ. ವ್ಯಾಪ್ತಿಯನ್ನು ಹೊಂದಿದೆ. ಇದು ಕರ್ನಾಟಕದ ದಕ್ಷಿಣ ತುದಿಗೆ ಇದೆ. ಉತ್ತರ ಅಕ್ಷಾಂಶ ೧೧° ೪೦' ೫೮ " ಮತ್ತು ೧೨°೦೬'೩೨" ಹಾಗೂ ಪೂರ್ವ ರೇಖಾಂಶ ೭೬°೨೪' ೧೪" ಮತ್ತು ೭೭° ೪೬'೫೫" ಇವುಗಳ ಮಧ್ಯೆ ಇದೆ. ಇದು ದಕ್ಷಿಣದ ಒಣ ವಲಯದಲ್ಲಿ ಕಂಡು ಬರುತ್ತದೆ. ಚದುರಿದ ಬೆಟ್ಟಗುಡ್ಡಗಳಿಂದ ಕೂಡಿದ ಪ್ರದೇಶವಾಗಿದ್ದು ಪಶ್ಚಿಮಘಟ್ಟವು ದಕ್ಷಿಣ ಭಾಗದ ಉತ್ತರದಲ್ಲಿ

ಸುತ್ತುವರಿಯಲ್ಪಟ್ಟಿದೆ. ಚಾಮರಾಜನಗರವು ತಮಿಳುನಾಡು ಮತ್ತು ಕೇರಳ ರಾಜ್ಯಗಳ ಗಡಿಯನ್ನು ಹೊಂದಿದೆ. ಹಾಗೆಯೇ ಪಶ್ಚಿಮ ಮತ್ತು ಉತ್ತರಕ್ಕೆ ಮೈಸೂರು ಜಿಲ್ಲೆ, ವಾಯುವ್ಯಕ್ಕೆ ಮಂಡ್ಯ ಮತ್ತು ಬೆಂಗಳೂರು ಜಿಲ್ಲೆ, ಪಶ್ಚಿಮಕ್ಕೆ ತಮಿಳುನಾಡಿನ ಧರ್ಮಪುರಿ ಜಿಲ್ಲೆ, ದಕ್ಷಿಣಕ್ಕೆ ತಮಿಳುನಾಡಿನ ನೀಲಗಿರಿ ಜಿಲ್ಲೆ, ಆಗ್ನೇಯಕ್ಕೆ ಕೇರಳದ ವೈನಾಡು ಜಿಲ್ಲೆಗಳಿವೆ. ಈ ಎಲ್ಲಾ ಜಿಲ್ಲೆಗಳ ಪಕ್ಕಕ್ಕೆ ನೀಲಗಿರಿ ಬೆಟ್ಟಗಳಿವೆ. ಸಮತಟ್ಟಾದ ಭೂಮಿಯಿದ್ದು ಅರಣ್ಯಗಳಿಂದ ಕೂಡಿದ ಬೆಟ್ಟಗುಡ್ಡಗಳಿವೆ. ಇಲ್ಲಿ ಸ್ಥಿರಸ್ಥಾಯಿಯಾಗಿ ಹರಿಯುವ ಯಾವುದೇ ನದಿಗಳಿಲ್ಲ. ಋತುಮಾನಿಕ ನದಿಗಳಾದ ಗುಂಡ್ಲುಹೊಳೆ ಮತ್ತು ಸುವರ್ಣಾವತಿ ಇವು ಗುಂಡ್ಲುಪೇಟೆ ಮತ್ತು ಕೊಳ್ಳೆಗಾಲ ಮುಖಾಂತರ ಹರಿಯುತ್ತವೆ. ಈ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಮಲೆಮಹದೇಶ್ವರ ಬೆಟ್ಟದ ತಪ್ಪಲು ಮತ್ತು ಯಳಂದೂರು ತಾಲ್ಲೂಕಿನ ಬಿಳಿಗಿರಿರಂಗನ ಬೆಟ್ಟದ ಸುತ್ತಮುತ್ತ ಸೋಲಿಗರು ತಮ್ಮ ನೆಲೆ ಕಂಡುಕೊಂಡಿದ್ದಾರೆ.

### ೨.೨. ಆದಿವಾಸಿಗಳು

ಆದಿವಾಸಿಗಳು ಎಂದರೆ ಒಂದು ದೇಶದ ಮೂಲ ನಿವಾಸಿಗಳು. ಭಾರತದಲ್ಲಿ ೬೪೦ ಕ್ಕಿಂತಲೂ ಹೆಚ್ಚಿನ ಆದಿವಾಸಿ ಪಂಗಡಗಳನ್ನು ಗುರುತಿಸಿದ್ದಾರೆ. ಕರ್ನಾಟಕದಲ್ಲಿ ಒಟ್ಟು ೫೦ ಆದಿವಾಸಿ ಪಂಗಡಗಳನ್ನು ಪರಿಶಿಷ್ಟಗೊಳಿಸಲಾಗಿದೆ. ಇವುಗಳಲ್ಲಿ ಸೋಲಿಗರನ್ನು ಕರ್ನಾಟಕದ ಮೂಲನಿವಾಸಿಗಳು ಎಂದು ಗುರುತಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಸೋಲಿಗರು, ಜೇನುಕುರುಬರು, ಬೆಟ್ಟಕುರುಬರು ಮತ್ತು ಯರವರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

### ೨. ೨. ೧. ಸೋಲಿಗರು

ಕರ್ನಾಟಕದ ಮೂಲನಿವಾಸಿಗಳಲ್ಲಿ ಸೋಲಿಗರು ತಮ್ಮದೇ ವಿಶಿಷ್ಟ ಆಚರಣೆ ಮತ್ತು ಸಂಸ್ಕೃತಿಗಳಿಂದ ವಿಭಿನ್ನತೆ ಹೊಂದಿದ್ದಾರೆ.

### ೨. ೨. ೧. ೧. ಸೋಲಿಗರು ಕುಲದ ಹುಟ್ಟು ಮತ್ತು ಬೆಳವಣಿಗೆ

ಪುರಾಣಿ ಪೋಡಿನ ಜಡೇಗೌಡರು ಹೇಳುವ ಹಾಗೆ "ಸೋಲಿಗ ಜನಾಂಗಕ್ಕೆ ಗತಕಾಲದ ಇತಿಹಾಸವಿದೆ. ಎಂದು ಮಾನವ ಜನ್ಮ ಭೂಮಿಯ ಮೇಲೆ ಉದಯಿಸಿತ್ತೋ ಅಂದೇ ಸೋಲಿಗರು ಸಹ ಇದ್ದರು."[*] ಈ ಜನಾಂಗದ ಸಂಪ್ರದಾಯ, ಆಚಾರ, ವಿಚಾರಗಳು ನಾಲ್ಕನೆಯ ಶತಮಾನದಲ್ಲಿ ಉದಯವಾಯಿತೆಂದು ಶ್ರೀ ವಜ್ರಮುನಿಸ್ವಾಮಿಯವರು ತಮ್ಮ ಬರವಣಿಗೆಯಲ್ಲಿ ದಾಖಲಿಸಿದ್ದಾರೆ. ಈ ಆದಿವಾಸಿ ಸಮುದಾಯ ಸುಮಾರು ವರ್ಷ ಬೆಳಕಿಗೆ ಬಂದಿರಲಿಲ್ಲ. ಕಾರಣ ಇವರು ಭಯದಿಂದ

ಕಾಡಿನಲ್ಲಿ ಮರದ ಪೊಟರೆ, ಬಂಡೆ ಹಾಗೂ ಗುಹೆಗಳಲ್ಲಿ ಇತರೆ ಜನರುಗಳಿಗೆ ಕಾಣಿಸದಂತೆ ವಾಸಿಸುತ್ತಿದ್ದರು. ಆರಂಭದ ದಿನಗಳಲ್ಲಿ ಇವರು ಯಾವುದೇ ರೀತಿಯ ಉಡುಗೆ ತೊಡುಗೆಗಳನ್ನು ತೊಡುತ್ತಿರಲಿಲ್ಲ. ನಂತರದ ದಿನಗಳಲ್ಲಿ ಕಾಲ ಬದಲಾದಂತೆ ಈ ಜನಾಂಗವು ಸಹ ಅಲ್ಪ ಸ್ವಲ್ಪ ಬದಲಾಗುತ್ತಾ ಬಂದರು. ಹಿಂದೆ ಎಲ್ಲಾ ಸೋಲಿಗರು ಒಟ್ಟಿಗೆ ಸೇರಿ ಬೆಳೆದವರು. ಇವರು ತಮ್ಮ ತಮ್ಮಲ್ಲಿಯೇ ಮದುವೆ ಮಾಡಿಕೊಳ್ಳುವಂತಹ ಪದ್ಧತಿ ರೂಡಿಯಲ್ಲಿತ್ತು. ಅದನ್ನು ತೊಡೆದು ಹಾಕುವ ನಿಟ್ಟಿನಲ್ಲಿ ಅಂದರೆ ರಕ್ತ ಸಂಬಂಧದಲ್ಲಿ ಮದುವೆ ಮಾಡಿಕೊಳ್ಳಬಾರದೆಂಬ ಉದ್ದೇಶದಿಂದ ಕುಲಗಳನ್ನು ಹುಟ್ಟು ಹಾಕಿಕೊಂಡರು.

ಸೋಲಿಗರು ಕಾಡನ್ನು ಬಿಟ್ಟು ನಾಡಿಗೆ ಬರುತ್ತಿರಲಿಲ್ಲ. ಅವರು ಕಾಡಿನಲ್ಲೇ ಹುಟ್ಟಿ ಕಾಡಿನಲ್ಲೇ ಬೆಳೆದು ಕಾಡಿನಲ್ಲೇ ಸಾಯುವ ಸಂದರ್ಭ ಇತ್ತು. ಅಲ್ಲದೆ ಪೋಡಿನಲ್ಲಿ ಉಂಟಾಗುವಂತಹ ಕಲಹಗಳನ್ನು ಅವರ ನ್ಯಾಯ ಸಮಿತಿಯಲ್ಲಿಯೇ ತೀರ್ಮಾನ ಮಾಡಿಕೊಳ್ಳುತ್ತಿದ್ದರು. ಇವರಿಗೆ ಸರ್ಕಾರ ಎಂದರೇನು? ಕೋರ್ಟ್ ಎಂದರೇನು? ಕಛೇರಿ, ಪೋಲೀಸ್ ಇಂತಹವುಗಳ ಬಗ್ಗೆ ಅರಿವಿರಲಿಲ್ಲ. ಅಲ್ಲದೆ ಬರವಣಿಗೆಯನ್ನು ಸಹ ಕಂಡಿರಲಿಲ್ಲ. ಇಂತಹ ಸಂದರ್ಭದಲ್ಲಿ ತಮ್ಮ ತಮ್ಮಲ್ಲಿ ಉಂಟಾಗುವ ಕಲಹಗಳನ್ನು ಪೋಡಿನಲ್ಲಿಯೇ ಸರಿಪಡಿಸಿಕೊಳ್ಳುವ ಸಲುವಾಗಿ ಅವರಲ್ಲಿ ಕುಲವನ್ನು ರಚಿಸಿಕೊಂಡು ಒಂದೊಂದು ಜವಾಬ್ದಾರಿಯನ್ನು ವಹಿಸುತ್ತಾ ಬಂದರು.

ಸೋಲಿಗರಿಗೆ ದೇವರಲ್ಲಿ ಅಪಾರವಾದಂತಹ ನಂಬಿಕೆ ಮತ್ತು ಭಕ್ತಿಯಿತ್ತು. ಇಂತಹ ಸಂದರ್ಭದಲ್ಲಿ ಜನಾಂಗದವರೆಲ್ಲರೂ ಒಟ್ಟಿಗೆ ಸೇರಿ ಮದುವೆ-ಮುಂಜಿ ಹಬ್ಬ-ಹರಿದಿನಗಳ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಒಬ್ಬೊಬ್ಬರಿಗೆ ಒಂದೊಂದು ಜವಾಬ್ದಾರಿಯನ್ನು ಹಂಚಿಕೊಂಡಂತಹ ಸಂದರ್ಭದಲ್ಲಿ ಕುಲ ಹುಟ್ಟಿಕೊಂಡಿತು. ಕಾಡು ಸೋಲಿಗರಾದ ನಿಲೇಗೌಡ ಹಾಗೂ ಹೆಂಡತಿ ಸಂಕಮ್ಮನಿಗೂ ಮಕ್ಕಳೆರಡಾದವು. ಅವರೆ ಸೋಲಿಗರ ಕಾರಯ್ಯ ಹಾಗೂ ಕಂಪಣದ ಬಿಲ್ಲಯ್ಯ. ಇವರು ಹುಟ್ಟಿದ ನಂತರ ಕುಲವೂ ಸಹ ಹುಟ್ಟಿ ಕೊಂಡಿತು. ಕುಲದ ಸೃಷ್ಟಿಗೆ ಎತ್ತಪ್ಪದೇವ ಗುಡ್ಡನಾಯಕರ ಗುರು ಕಾರಣಕರ್ತರು ಎಂದು ಸೋಲಿಗರು ಹೇಳುತ್ತಾರೆ.

### ೨. ೨. ೧. ೨. ಸೋಲಿಗರಲ್ಲಿ ಬದಲಾಗಿರುವ ಪದ್ಧತಿ ಮತ್ತು ಕಾರಣ

ಎರೆಡು ಅಥವಾ ಮೂರು ಮನೆಗಳ ಗುಂಪಿನಲ್ಲಿ ವಾಸಿಸುತ್ತಿದ್ದರು. ಬದಲಾಗಿ ಈಗ ಎಲ್ಲರೂ ಒಟ್ಟಿಗೆ ಸೇರಿ ೨೦ ರಿಂದ ೩೦ ಮನೆಗಳಲ್ಲಿ ವಾಸಿಸಲು ಪ್ರಾರಂಭಿಸಿದ್ದಾರೆ. ಕಾರಣ ಅರಣ್ಯ ಇಲಾಖೆ ಸೋಲಿಗರಿಗೆ ಜಮೀನು ನೀಡುತ್ತೇವೆಂದು ಹೇಳಿ ಅವರನ್ನು ಒಟ್ಟಿಗೆ ಸೇರಿಸಿದ್ದಾರೆ. ಇದರಿಂದ ಅವರುಗಳಲ್ಲಿಯೇ ಜಗಳ, ವೈಮನಸ್ಸು, ಹೆಚ್ಚಾಗಿವೆ. ಜೊತೆಗೆ ಒಂದು ಕಾಡಿನಿಂದ ಮತ್ತೊಂದು ಕಾಡಿಗೆ ಹೋಗಿ ಬೇಸಾಯ ಮಾಡುವ

ಪದ್ಧತಿ ಹಾಳಾಗಿದೆ. ಒಂದೇ ಕಡೆ ಬೇಸಾಯ ಮಾಡುವ ಪದ್ಧತಿಯನ್ನು ಅನುಸರಿಸುತ್ತಿರುವುದರಿಂದ ಹೆಚ್ಚು ಇಳುವರಿಯು ಸಹ ಬರುತ್ತಿಲ್ಲ. ಇದರಿಂದ ಸೋಲಿಗ ಜನಾಂಗದ ಹಲವರು ವ್ಯವಸಾಯವನ್ನು ಮಾಡಲು ಹಿಂಜರಿಯುತ್ತಿದ್ದಾರೆ. ದಿನೇ ದಿನೇ ಕಾಡಿನ ಅವಲಂಬನೆ ಕಡಿಮೆಯಾಗುತ್ತಿದ್ದಂತೆ ನಾಡಿಗೆ ಹೋಗುವುದು ಜಾಸ್ತಿಯಾಗಿದೆ. ನಾಡಿನ ಸಂಪ್ರದಾಯ, ಕುಡಿತ, ಜೂಜು ಸೋಲಿಗ ಜನರಲ್ಲಿ ಅಂಟಿಕೊಂಡು ಜನರು ಹಾಳಾಗುತ್ತಿದ್ದಾರೆ. ಸೋಲಿಗರಲ್ಲಿ ಒಳ ಜಗಳಗಳು ಜಾಸ್ತಿಯಾಗುತ್ತಿವೆ. ಸೋಲಿಗರ ಹಿರಿಯ ಮುಖಂಡರು ಶ್ರೀ ಅಚ್ಚುಗಗೌಡ ಇವರು ಹೇಳುವ ಪ್ರಕಾರ "ಕಾಡಿಗೆ ಬೆಂಕಿ ಬೀಳುವುದು ಕಡಿಮೆಯಾದ ಮೇಲೆ ಕಾಡಿನಲ್ಲಿ ಲಂಟಾನ ಬೆಳೆಯುವುದು ಹೆಚ್ಚಾಯಿತು. ಇದರಿಂದ ಪ್ರಾಣಿಗಳು ಬದುಕುವುದಕ್ಕೂ ಸಹ ತೊಂದರೆಯಾಗಿದೆ. ಅಲ್ಲದೆ ಲಂಟಾನದಿಂದಾಗಿ ಬೇರೆ ಮರಗಳು, ಹುಲ್ಲು, ಇತರೆ ಔಷಧಿ ಸಸ್ಯಗಳು ಸಹ ಬೆಳೆಯಲು ಸಾಧ್ಯವಾಗುತ್ತಿಲ್ಲ ಜೊತೆಗೆ ಕಾಡಿನಲ್ಲಿದ್ದ ವಿವಿಧ ಜಾತಿಯ ಹಣ್ಣಿನ ಮರಗಳು ಮತ್ತೆ ಬೆಳೆಯದೆ ಹಾಳಾಗುತ್ತಿವೆ."[೧೦]

ಜಡೇಸ್ವಾಮಿಯವರು ಹೇಳುವ ಪ್ರಕಾರ "ಸೋಲಿಗ ಜನಾಂಗಕ್ಕೆ ಒತ್ತಡ ಜಾಸ್ತಿಯಾಗಿದೆ, ದಿನ ನಿತ್ಯದ ಅವಶ್ಯಕತೆ ಬಗ್ಗೆ ಗಮನ ಹೆಚ್ಚಾಗಿದೆ. ಇದರಿಂದ ಹಳೆಯ ಸಂಪ್ರದಾಯದ ಕಡೆ ಗಮನ ಕಡಿಮೆಯಾಗಿದೆ. ಸೋಲಿಗರ ೫ ಕುಲಗಳು ಯಾವ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿತ್ತೋ ಆಯಾಯ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸುತ್ತಿಲ್ಲ."[೧೧]

### ೨. ೨.೧.೩. ಕಾಡಿನ ಸಂರಕ್ಷಣೆಯಲ್ಲಿ ಸೋಲಿಗರು ಕುಲಗಳ ಪಾತ್ರ

ಸೋಲಿಗರು ಕಾಡನ್ನು ದೇವರೆಂದು ತಿಳಿದುಕೊಂಡಿದ್ದರು. ಹಾಗಾಗಿ ನಂಬಿದ ದೇವರಿಗೆ ಎರಡು ಬಗೆಯುವ ಕೆಲಸವನ್ನು ಮಾಡುತ್ತಿರಲಿಲ್ಲ. ಜೊತೆಗೆ ಕೆಲವೊಂದು ಪ್ರದೇಶವನ್ನು ನಿಷೇಧಿತ ಪ್ರದೇಶವೆಂದು ಗುರುತಿಸಿದ್ದರು. ಅಲ್ಲಿಗೆ ಯಾರೂ ಪ್ರವೇಶಿಸುತ್ತಿರಲಿಲ್ಲ. ಮರ ಕಡಿಯುತ್ತಿರಲಿಲ್ಲ. ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹ ಮಾಡುತ್ತಿರಲಿಲ್ಲ. ಇದರಿಂದ ಕಾಡು ಸಮೃದ್ಧಿಯಾಗಿ ಬೆಳೆಯುವುದಕ್ಕೆ ಸಹಾಯ ವಾಗುತ್ತಿತ್ತು. ಇಂತಹ ನಿಷೇದಿತ ಪ್ರದೇಶದಲ್ಲಿ ಬಿಟ್ಟಂತಹ ಹಣ್ಣು ಹಂಪಲುಗಳನ್ನು ಪ್ರಾಣಿ ಪಕ್ಷಿಗಳು ತಿನ್ನಲು ಅನುಕೂಲವಾಗುತ್ತಿತ್ತು. ಅಲ್ಲದೆ ಪ್ರಾಣಿ ಪಕ್ಷಿಗಳು ತಿಂದಂತಹ ಹಣ್ಣಿನ ಬೀಜಗಳನ್ನು ಬೇರೆ ಕಡೆ ಹಾಕುವುದರಿಂದ ಅಲ್ಲಿ ಮರಗಿಡ ಬೆಳೆಯಲು ಸಹಾಯಕವಾಗುತ್ತಿತ್ತು.

ಕಾಡಿನಲ್ಲಿ ವಾಸಿಸುವಂತಹ ಜನಾಂಗ ಕಾಡಿನ ಸಂರಕ್ಷಣೆಯಲ್ಲಿ ಮಹತ್ವದ ಪಾತ್ರ ವಹಿಸಿದ್ದಾರೆ. ಜನವರಿ ತಿಂಗಳಿನಲ್ಲಿ ಕಾಡಿನಲ್ಲಿ ಸ್ವಲ್ಪ ಒಣಗಿದ ಹುಲ್ಲಿಗೆ ಮಾತ್ರ ಬೆಂಕಿ ಹಾಕಿ ಇತರೆ ಮರಗಳು ಹಾಳಗದಂತೆ ನೋಡಿಕೊಳ್ಳುತ್ತಿದ್ದರು. ಇದರಿಂದ

ಲಂಟಾನದಂತಹ ಹೊಸರೂಪದ ಕಳೆಗಿಡಗಳು ಕಾಡಿನಲ್ಲಿ ಬೆಳೆಯಲು ಸಾಧ್ಯವಾಗುತ್ತಿರಲಿಲ್ಲ. ಹಿಂದೆ ಹಲವು ಜಾತಿಯ ಹೂವಿನ ಗಿಡಗಳು, ಹಲವು ಬಗೆಯ ಹಣ್ಣಿನ ಮರಗಳಿದ್ದವು. ಇದರಿಂದ ಜೇನುಗಳಿಗೆ, ಪ್ರಾಣಿ, ಪಕ್ಷಿಗಳಿಗೆ ಅತಿ ಹೇರಳವಾಗಿ ಆಹಾರ ದೊರಕುತ್ತಿತ್ತು. ಗಿಡಮರಗಳ ಪುನರುತ್ಪತ್ತಿಗೆ ಅನುಕೂಲವಾಗುತ್ತಿತ್ತು.

ಇತ್ತೀಚಿನ ದಿನಗಳಲ್ಲಿ ಕಾಡಿಗೆ ಬೆಂಕಿ ಬೀಳದೆ ಇರುವುದರಿಂದ ಲಂಟಾನ ಹೆಚ್ಚಾಗಿ ಬೆಳೆದಿದೆ. ಇದು ಬೇರೆ ಜಾತಿಯ ಮರಗಿಡ, ಔಷಧಿ ಸಸ್ಯ, ಹುಲ್ಲು ಸಹ ಬೆಳೆಯಲು ಬಿಡುತ್ತಿಲ್ಲ. ಇದರಿಂದ ಭವಿಷ್ಯದಲ್ಲಿ ಕಾಡಿನ ಹಲವು ಬಗೆಯ ಮರಗಳು ನಾಶವಾಗುವುದಲ್ಲದೆ ಪ್ರಾಣಿ, ಪಕ್ಷಿಗಳ ಆಹಾರಕ್ಕೆ ತೊಂದರೆಯಾಗುವುದರಲ್ಲಿ ಯಾವುದೇ ಸಂಶಯವಿಲ್ಲ. "೧೯೭೨ ರ ನಂತರ ಕಾಡಿಗೆ ಬೆಂಕಿ ಬೀಳುವುದು ನಿಂತ ಮೇಲೆ ಕೋಟ್ಯಾನುಕೋಟಿ ಇತರೆ ಜಾತಿಯ ಮರಗಳು, ಸಸ್ಯಗಳು ಬೆಳೆಯಲು ಸಾಧ್ಯವಾಗುತ್ತಿಲ್ಲ. ಕಾಡಿಗೆ ಬೆಂಕಿ ಬೀಳುವುದು ನಿಂತ ಮೇಲೆ ಮರಗಳಲ್ಲಿ ಅದರಲ್ಲೂ ನೆಲ್ಲಿ ಮರಗಳಲ್ಲಿ ಬಂಜೆ ಬೆಳೆಯಲು ಹೆಚ್ಚಾಗಿದೆ. ಇದರಿಂದ ಮರವೇ ಸಾಯುವ ಕಾಲ ಹತ್ತಿರಕ್ಕೆ ಬರುತ್ತಿದೆ. ಹಿಂದೆ ಕಾಡಿನಲ್ಲಿ ಹುಲ್ಲಿಗೆ ಬೆಂಕಿ ಹಾಕುವಾಗ ಹುಲ್ಲಿನ ಹುರಿ ಬಂಜಣಿಕೆಗೆ ತಗುಲಿ ಅದು ಮಾತ್ರ ಹಾಳಾಗುತ್ತಿತ್ತು. ಮರಕ್ಕೆ ಯಾವುದೇ ಹಾನಿಯಾಗುತ್ತಿರಲಿಲ್ಲ. ಆಗ ಫಲವೂ ಜಾಸ್ತಿ ಇತ್ತು. ಆದರೆ ಈಗ ಇಳುವರಿ ಗಣನೀಯ ಪ್ರಮಾಣದಲ್ಲಿ ಇಳಿದಿದೆ. ಸಾವಿರಾರು ಗಿಡಮೂಲಿಕೆಗಳು ಲಂಟಾನದ ನೆರಳಿಗೆ ಸಿಕ್ಕಿ ಬೆಳೆಯಲು ಸಾಧ್ಯವಾಗುತ್ತಿಲ್ಲ. ಹಿಂದೆ ಕಾಡಿನಲ್ಲಿ ನಾನಾ ಜಾತಿಯ ಗೆಣಸು ಸಿಗುತ್ತಿತ್ತು. ಇತ್ತೀಚೆಗೆ ಅವುಗಳೆಲ್ಲಾ ಹಾಳಾಗಿ ಕಾಡಿನಲ್ಲಿ ಜನರು ಮತ್ತು ಪ್ರಾಣಿ ಪಕ್ಷಿಗಳು ವಾಸಮಾಡಲು ಕಷ್ಟವಾಗಿದೆ."[೨] ಎಂದು ಸೋಲಿಗರ ಬಸವರಾಜು ಹೇಳುತ್ತಾರೆ.

### ೨. ೨. ೧.೪. ಸೋಲಿಗರಲ್ಲಿ ನಂಬಿಕೆಗಳು

ದೇವರು ಮತ್ತು ದೆವ್ವದ ಬಗ್ಗೆ ಸೋಲಿಗರಲ್ಲಿ ಅಪಾರವಾದ ನಂಬಿಕೆ ಇದೆ. ಸತ್ತವರನ್ನು ಕೆಲವರು ಭಯದಿಂದ ಸರಿಯಾಗಿ ನೋಡಲು ಸಹ ಬರವುದಿಲ್ಲ. ಊಳಿರುವಂತಹ ಸಮಾಧಿಯ ಹತ್ತಿರ ಓಡಾಡುವಾಗ ಕಾಲಿಗೆ ಪಾದರಕ್ಷೆಯನ್ನು ಧರಿಸುವುದಿಲ್ಲ. ಅಲ್ಲದೆ ಸತ್ತಿರುವ ವ್ಯಕ್ತಿ ಬದುಕಿದ್ದಂತಹ ಸಂದರ್ಭದಲ್ಲಿ ಏನೆಲ್ಲಾ ಊಟ, ಉಪಚಾರಗಳನ್ನು ಮಾಡುತ್ತಿದ್ದರು ಅವುಗಳನ್ನೆಲ್ಲಾ ತಯಾರಿಸಿ. ಸಮಾಧಿಗೆ ಇಟ್ಟು ಪೂಜೆ ಸಲ್ಲಿಸುತ್ತಾರೆ. ಜೊತೆಗೆ ತಮ್ಮನ್ನು ಮತ್ತು ಕಾಡನ್ನು ರಕ್ಷಿಸುವಂತೆ ಕೇಳಿಕೊಳ್ಳುತ್ತಾರೆ.

### ೨.೨.೨. ಜೇನುಕುರುಬರು

ಜೇನುಕುರುಬರು ದ್ರಾವಿಡ ಮೂಲದವರಾಗಿದ್ದು, ಕರ್ನಾಟಕ ರಾಜ್ಯದ ಪಶ್ಚಿಮ ಘಟ್ಟಗಳಲ್ಲಿ ವಾಸಿಸುತ್ತಿರುವ ಪ್ರಾಚೀನ ಆದಿವಾಸಿ ಸಮುದಾಯ ಎಂಬುದನ್ನು ಲಭ್ಯವಿರುವ ಆಕರಗಳು ತಿಳಿಸುತ್ತವೆ. ಪರಾಕ್ರಮ ಶಾಲಿಗಳಾದ ಇವರು ಪಲ್ಲವ ವಂಶಕ್ಕೆ ಸೇರಿದವರೆಂಬುದು ಇತಿಹಾಸದಿಂದ ತಿಳಿದು ಬರುತ್ತದೆ. ೮ ನೇ ಶತಮಾನದ ವೇಳೆಗೆ ತಮ್ಮ ಪ್ರಭಾವವನ್ನು ಕಳೆದುಕೊಂಡರು. ತಮ್ಮ ಜೀವ ರಕ್ಷಣೆ ಮತ್ತು ಜೀವನೋಪಾಯಕ್ಕಾಗಿ ಸಮೀಪದ ಗುಡ್ಡಬೆಟ್ಟಗಳಿಂದ ಆವೃತವಾದ ಪ್ರದೇಶಗಳಲ್ಲಿ ವಾಸಿಸಲು ಪ್ರಾರಂಭಿಸಿದರು. ಮುಖ್ಯವಾಗಿ ಮಲಬಾರ್, ನೀಲಗಿರಿ, ಕೊಡಗು, ವೈನಾಡು ಮತ್ತು ಮೈಸೂರು ಪ್ರದೇಶಗಳ ದಟ್ಟ ಕಾನನದ ಮಧ್ಯೆ ಸೇರಿಕೊಂಡು ಬಹುಕಾಲದವರೆಗೂ ತಲೆಮರೆಸಿಕೊಂಡಿದ್ದರು. ಇದರಿಂದ ಜನಸಂಪರ್ಕ ಇಲ್ಲದಂತಾಗಿ ಅವರನ್ನು ಕಾಡು ಜನರನ್ನಾಗಿಸಿರಬಹುದು ಎಂಬುದು ತಜ್ಞರ ಅಭಿಮತವಾಗಿದೆ. ರಿಕ್ಟರ್ ರವರು "ಜೇನುಕುರುಬರು ಕಕೇಷಿಯನ್ನರಿಗಿಂತ ಮಂಗೋಲಿಯನ್ ಜನಾಂಗದವರನ್ನು ಹೋಲುತ್ತಾರೆ, ಇವರ ಕೆನ್ನೆ ಮೂಳೆಯು ಉಬ್ಬಿಕೊಂಡು ಎದ್ದು ಕಾಣುವ ಹಾಗಿದೆ."[೧೩] ಎಂದು ತಿಳಿಸಿರುವುದನ್ನು ಇಲ್ಲಿ ಗಮನಿಸಬಹುದು.

"ಗೊಂಡ, ರಾಜಗೊಂಡ, ಕುರುಬ, ಕಾಡುಕುರುಬ, ಜೇನುಕುರುಬ, ಬೆಟ್ಟಕುರುಬ, ಮುಳ್ಳುಕುರುಬ, ಕಂಬಳಿ ಕುರುಬ, ಒಕ್ಕೈಕುರುಬ, ಹಾಲುಕುರುಬ, ಜಾಡಿಕುರುಬ, ಹಂಡೆಕುರುಬ, ಧನಗರ, ಹಟಗಾರ, ಕರಗಾರ, ಘುಲೇಕರ, ಮ್ಯಾಸ ನಾಯಕ, ಗೊಲ್ಲ, ಇವರೆಲ್ಲರೂ ಮೂಲತಃ ಒಂದೇ ಆಗಿದ್ದು ಹಾಲುಮತದ ಮೂಲದವರಾಗಿದ್ದಾರೆ."[೧೪] ಜೇನುಕುರುಬರು ಮುಖ್ಯವಾಗಿ ಕೇರಳ, ತಮಿಳುನಾಡು ಮತ್ತು ಕರ್ನಾಟಕದ ಗಡಿ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಕರ್ನಾಟಕದಲ್ಲಿ ಮುಖ್ಯವಾಗಿ ಹುಣಸೂರು, ಪಿರಿಯಾಪಟ್ಟಣ, ಹೆಗ್ಗಡದೇವಕೋಟೆ, ಗುಂಡ್ಲುಪೇಟೆ, ಮಡಿಕೇರಿ, ವಿರಾಜಪೇಟೆ ಮತ್ತು ಸೋಮವಾರಪೇಟೆ ತಾಲ್ಲೂಕುಗಳಲ್ಲಿ ಹರಡಿಕೊಂಡಿದ್ದಾರೆ. ತಮಿಳಿನ ಕೊ ಅಥವಾ ಕು ಎಂಬ ಪದದ ವಿಸ್ತೃತ ರೂಪವೇ 'ಕುರು' ಇದರ ಅರ್ಥ ಬೆಟ್ಟ. ಇವರಲ್ಲಿ ಹಲವರು ತಮ್ಮ ಜೀವನೋಪಾಯಕ್ಕಾಗಿ ಜೇನು ಸಂಗ್ರಹ ಮಾಡುತ್ತಿದ್ದುದರಿಂದ ಇವರಿಗೆ ಜೇನು ಕುರುಬರು ಎಂದು ಕರೆಯಲಾಗಿದೆ. ಜೇನುಕುರುಬರಿಗೆ ಕೇರಳದಲ್ಲಿ ಕಾಟ್ಟುನಾಯಕನ್, ಕಟ್ಟುನೈಚನ್, ಕಾಟ್ಟುನೈಕನ್, ಕುಲುವನ್, ತೀನ್ ಕುರುಮನ್, ಜೇನ ಕೋಯಶೋಲ ಎಂಬ ಹೆಸರಿನಿಂದ ಗುರುತಿಸಲಾಗಿದೆ.

೧೯೩೧ ರ ಜನಗಣತಿಯಲ್ಲಿಯೇ ಗುರುತಿಸಲ್ಪಟ್ಟ ಜೇನುಕುರುಬರು, ೧೯೫೦ ರಿಂದಲೇ ಮೈಸೂರು ರಾಜ್ಯದಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿರುತ್ತಾರೆ. ೧೯೭೭ ರಲ್ಲಿ ಪ್ರಾದೇಶಿಕ ಮಿತಿಯನ್ನು ಸಡಿಲಸಲಾಗಿದೆ. ಇಡೀ ಪ್ರಪಂಚದಲ್ಲಿ (ಭಾರತದಲ್ಲಿ ಮಾತ್ರ

ವಾಸವಿದ್ದಾರೆ) ಜೇನುಕುರುಬರ ಸಂಖ್ಯೆ ೫೫೦೦೦. ಕನಾಟಕ ರಾಜ್ಯದಲ್ಲಿ ೨೦೦೧ ರ ಪ್ರಕಾರ ಜೇನುಕುರುಬರು ೨೯೩೭೧ ರಷ್ಟಿದ್ದಾರೆ. ಇವರಲ್ಲಿ ಪುರುಷರು ೧೫೧೩೩, ಮಹಿಳೆಯರು ೧೪೮೯೫ ರಷ್ಟಿದ್ದಾರೆ.

ಬಹುಸಂಖ್ಯಾತ ಜೇನುಕುರುಬರು ಮುಖ್ಯವಾಗಿ ದಿನಗೂಲಿ ಕಾರ್ಮಿಕರಾಗಿದ್ದಾರೆ. ಇವರ ಸಾಂಪ್ರದಾಯಿಕ ಕಸುಬು ಜೇನು ಸಂಗ್ರಹ, ಗಿಡಮೂಲಿಕೆ, ನಾರುಬೇರು ಮತ್ತು ಗೆಡ್ಡೆ-ಗೆಣಸು ಸಂಗ್ರಹಣೆಯಾಗಿದೆ. ಕೆಲವರು ಸರ್ಕಾರದಿಂದ ಭೂಮಿಯನ್ನು ಪಡೆದಿದ್ದು ಕೃಷಿಯನ್ನು ಅವಲಂಬಿಸಿದ್ದಾರೆ. ಇವರ ಅಭಿವೃದ್ಧಿಗಾಗಿ ಹಲವಾರು ಸಂಘ ಸಂಸ್ಥೆಗಳು ಶ್ರಮಿಸುತ್ತಿವೆ.

ಜೇನುಕುರುಬರು ಮೊದಲಿಗೆ ಕಾಡಿನಲ್ಲಿ ಕುಮರಿ ಬೇಸಾಯ ಪದ್ಧತಿಯಲ್ಲಿ ರಾಗಿ ಮತ್ತು ಗೆಣಸು ಬೆಳೆಯುತ್ತಿದ್ದರು. ಅಲೆಮಾರಿಗಳಂತೆ ಬಿಡಾರಗಳನ್ನು ಬದಲಾಯಿಸುತ್ತಿದ್ದರು. ತಾವು ಇದ್ದ ಗುಡಿಸಲಿನಲ್ಲಿ ಸಾವು ಸಂಭವಿಸಿದರೆ ಅದನ್ನು ಸುಟ್ಟು ಹಾಕಿ ಬೇರೆ ಗುಡಿಸಲು ಕಟ್ಟಿಕೊಳ್ಳುತ್ತಿದ್ದರು. ಇದರ ಪ್ರಭಾವ ಇನ್ನೂ ಇವರಲ್ಲಿ ಮಾಸಿಲ್ಲ. ಹೀಗಾಗಿ ಆಶ್ರಯ ಮನೆಗಳು ಖಾಲಿಯೇ ಬಿದ್ದಿರುತ್ತವೆ. ಅಥವಾ ನಾಯಿ, ಮೇಕೆ, ಧನಗಳ ದೊಡ್ಡಿಯಾಗಿವೆ.

ಇವರು ಶಾಂತ ಸ್ವಭಾವದವರು. ಪ್ರಾಣಿಗಳನ್ನು ಸಾಕುತ್ತಾರೆ. ಇವರ ಆರಾಧ್ಯ ದೇವತೆ 'ಭದ್ರಕಾಳಿ'. ಗಿಡಮೂಲಿಕೆಗಳನ್ನು ಖಾಯಿಲೆಗೆ ಬಳಸುತ್ತಾರೆ. ಬಹಳಷ್ಟು ಖಾಯಿಲೆ ಕಂಡು ಬಂದರೆ ದೇವರ ಬಳಿ ಹೋಗಿ ದೇವರನ್ನು ಕರೆಸುತ್ತಾರೆ. ಈಗ ಸಮಾಜದ ಸಂಪರ್ಕದಿಂದಾಗಿ ಆಸ್ಪತ್ರೆಗಳಿಗೂ ತೆರಳುತ್ತಾರೆ. ಮೊದಲು ಇವರು ಜೇನು ನುಡಿ ಆಡುತ್ತಿದ್ದರು. ಆದರೆ ಸಮಾಜ ಮುಖಿಯಿಂದಾಗಿ ಆಧುನಿಕತೆಗೆ ಒಳಗಾಗಿ ಇವರ ಭಾಷೆಯಲ್ಲಿ ಬದಲಾವಣೆ ಕಾಣಬಹುದಾಗಿದೆ. ಮಹಿಳೆಗೆ ಹೆಚ್ಚಿನ ಗೌರವ ಸ್ಥಾನ ಇರುವ ಜೇನುಕುರುಬರಲ್ಲಿ ಹಾಡಿಯ ಯಜಮಾನನ್ನು 'ಮೇಟಿ' ಎಂದು ಕರೆಯುವರು. ಇವರಲ್ಲಿ ತಪ್ಪು ಮಾಡಿದವರಿಗೆ ಕಟ್ಟಿಹಾಕುವ ಶಿಕ್ಷೆ ವಿಧಿಸುತ್ತಿದ್ದರು. ಇವರು ವಾಸಿಸುವ ಮನೆಗಳ ಗುಂಪುಗಳಿಗೆ ಹಾಡಿ ಎಂದು ಕರೆಯವರು. ಇವರಲ್ಲಿ ಪ್ರೇಮ ವಿವಾಹ ಮತ್ತು ವಿಧವಾ ವಿವಾಹಕ್ಕೆ ಮುಕ್ತ ಅವಕಾಶವಿದೆ. ಇವರ ಆರ್ಥಿಕ ಪರಿಸ್ಥಿತಿ ಈಗಲೂ ಅತ್ಯಂತ ಶೋಚನೀಯವಾಗಿದೆ. ಇವರ ಮಕ್ಕಳ ಶಿಕ್ಷಣಕ್ಕಾಗಿ ಹಾಡಿಯ ಸಮೀಪವೇ ಆಶ್ರಮ ಶಾಲೆಗಳನ್ನು ಕಟ್ಟಲಾಗಿದೆ. ಉತ್ತಮ ಶಿಕ್ಷಕರ ನೇಮಕವಾಗಬೇಕಿದೆ.

**೨.೨. ೩. ಬೆಟ್ಟಕುರುಬರು**

ಬೆಟ್ಟಕುರುಬರು ಕರ್ನಾಟಕದ ೫೦ ಆದಿವಾಸಿ ಪಂಗಡಗಳಲ್ಲಿ ಒಂದು. ಇದು ಕರ್ನಾಟಕದ ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲೂಕಿನಲ್ಲಿ ಕಂಡುಬರುತ್ತಾರೆ.

ಹಾಗೆಯೇ ಮೈಸೂರು ಜಿಲ್ಲೆಯ ಹುಣಸೂರು ಮತ್ತು ಹೆಚ್.ಡಿ.ಕೋಟೆ ತಾಲೂಕುಗಳಲ್ಲಿಯೂ ಮತ್ತು ಮಡಿಕೇರಿ ಜಿಲ್ಲೆಯ ವಿರಾಜಪೇಟೆ ಇಲ್ಲಿ ಹರಡಿಕೊಂಡಿದ್ದಾರೆ. ಇವರ ಒಟ್ಟು ಜನಸಂಖ್ಯೆ ಬಗೆಗೆ ನಿಖರವಾದ ದಾಖಲೆಗಳು ಲಭ್ಯವಿಲ್ಲ.

**೨.೨.೩.೧. ಭಾಷೆ, ವಾಸ ಮತ್ತು ಕಸುಬು**

ಬೆಟ್ಟಕುರುಬರು ಕನ್ನಡವನ್ನೇ ಮಾತನಾಡುತ್ತಾರಾದರೂ ಇದು ಕನ್ನಡಕ್ಕಿಂತ ಭಿನ್ನವಾಗಿದೆ. ಇದು ಅವರಿಗೆ ಮಾತ್ರ ಅರ್ಥವಾಗುತ್ತದೆ. ಬೇರೆಯವರೊಂದಿಗೆ ಮಾತನಾಡುವಾಗ ಕನ್ನಡದಲ್ಲಿಯೇ ಮಾತನಾಡುತ್ತಾರೆ. ಇವರು ಹಾಡಿಗಳಲ್ಲಿ ಗುಂಪಾಗಿ ವಾಸಿಸುತ್ತಾರೆ. ಕುಮರಿ ಬೇಸಾಯದ ಜೊತೆಗೆ ಅರಣ್ಯ ಉಪ ಉತ್ಪನ್ನಗಳನ್ನು ಸಂಗ್ರಹಿಸುತ್ತಾರೆ. ಮನೆಗೆ ಅವಶ್ಯಕವಾದ ಜೇನನ್ನೂ ಸಂಗ್ರಹಿಸುತ್ತಾರೆ. ಬೆಟ್ಟಕುರುಬರು ಮಾಲದಾಡಿ ಕಾಲೋನಿ, ಶೆಟ್ಟಿಹಳ್ಳಿ ಕಾಲೋನಿ, ಕಾರಾಪುರ, ಗದ್ದೆಹಾಡಿ, ಗೋಣಿಗದ್ದೆ, ಹಾಗೂ ನಾಗಾಪುರ ಪುನರ್ವಸತಿಗಳಲ್ಲಿ ವಾಸಿಸುತ್ತಿರುವುದನ್ನು ಗಮನಿಸಬಹುದಾಗಿದೆ. ಇವರ ಮನೆಗಳು ಬಹಳ ಸರಳವಾಗಿದ್ದು ಬಿದಿರು ಮತ್ತು ಹುಲ್ಲುಗಳಿಂದ ತಯಾರಿಸಿದ ಗುಡಿಸಲುಗಳಿಗೆ ಬಿದಿರಿನ ನೆರೆಕೆಗಳನ್ನು ಬಳಸಿರುವುದನ್ನು ಗಮನಿಸಬಹುದಾಗಿದೆ. ಇತ್ತೀಚಿನ ದಿನಗಳಲ್ಲಿ ಆಶ್ರಯ ಮನೆಗಳಲ್ಲಿ ವಾಸ ಮಾಡುತ್ತಿರುವುದನ್ನು ಅಧ್ಯಯನದ ಸಂದರ್ಭದಲ್ಲಿ ಗಮನಿಸಲಾಗಿದೆ. ಹಾಡಿಯಲ್ಲಿ ಸುತ್ತಲೂ ಗುಡಿಸಲುಗಳಿಂದ ಆವೃತವಾಗಿದ್ದರೆ ಮಧ್ಯದಲ್ಲಿ ಸಭೆ ಸೇರಲು ಮತ್ತು ಶುಭ ಸಮಾರಂಭಗಳನ್ನು ಏರ್ಪಡಿಸಲು ಅಂಬಾಲ ಎಂಬ ದೊಡ್ಡ ಮಂಟಪದ ರೀತಿ ರಚಿಸಿಕೊಂಡಿರುತ್ತಾರೆ.

**೨.೨.೩.೨. ವೇಷ ಭೂಷಣ**

ಬೆಟ್ಟಕುರುಬರು ನೋಡಲು ಪುಷ್ಟಿಯಾಗಿ ಕಾಣುತ್ತಾರೆ. ಕಪ್ಪುಬಣ್ಣ, ಗುಂಗುರ ಕೂದಲು, ದಪ್ಪ ತುಟಿ, ಒಣಗಿದ ಚರ್ಮ ಹೊಂದಿರುತ್ತಾರೆ. ಗಂಡಸರು ಪಂಚೆ ಮತ್ತು ಅಂಗಿಯನ್ನು ಧರಿಸಿದರೆ, ಹೆಂಗಸರು ಸೀರೆ ಮತ್ತು ರವಿಕೆಯನ್ನು ಧರಿಸುತ್ತಾರೆ. ಆಧುನಿಕದ ಪ್ರಭಾವದಿಂದಾಗಿ ಪ್ಯಾಂಟು, ಶರ್ಟ, ಚೂಡಿಧಾರ, ನೈಟಿ ದಿರಿಸುಗಳು ಇವರ ಹಾಡಿಯನ್ನು ತಲುಪಿವೆ. ಬೀಡಿ, ಸಿಗರೇಟು ಮತ್ತು ಮಧ್ಯಪಾನಕ್ಕೆ ಹೆಚ್ಚಿನವರು ದಾಸರಾಗಿರುವುದನ್ನು ಕಾಣಬಹುದಾಗಿದೆ.

**೨.೨. ೩. ೩. ಆಹಾರ ಮತ್ತು ಔಷಧಿ**

ಇವರಲ್ಲಿ ದಿನಕ್ಕೆ ಎರಡೇ ಬಾರಿ ಆಹಾರ ಸೇವಿಸುವ ಪದ್ಧತಿ ಇದೆ. ಮೂಲತಃ ಮಾಂಸಹಾರಿಗಳಾಗಿದ್ದಾರೆ. ಇವರು ಕೋಳಿ, ಕುರಿ, ಮೇಕೆ ಮಾಂಸವನ್ನೂ ಸೇವಿಸುತ್ತಾರೆ.

ಈ ಮೊದಲು ಅರಣ್ಯದಲ್ಲಿ ಸ್ವಚ್ಚಂದವಾಗಿ ಸಂಚರಿಸಲು ಸಾಧ್ಯವಿದ್ದಾಗ ಅರಣ್ಯದಲ್ಲಿ ಹುಲಿ, ಚಿರತೆ, ತೋಳಗಳು ಬೇಟೆಯಾಡಿ ತಿಂದು ಅಳಿದುಳಿದ ಮಾಂಸವನ್ನು ಸಂಗ್ರಹಿಸಿ ಅದನ್ನು ಸೇವಿಸುತ್ತಿದ್ದರು ಮತ್ತು ಹೆಚ್ಚಿನ ಮಾಂಸ ದೊರೆತರೆ ಅದನ್ನು ಚೆನ್ನಾಗಿ ಬಿಸಿಲಿನಲ್ಲಿ ಒಣಗಿಸಿ ಸಂಗ್ರಹಿಸಿ ಮಳೆಗಾಲ ಮತ್ತು ಆಹಾರ ದೊರಕದೇ ಇದ್ದಾಗ ಇದನ್ನು ಬಳುಸುತ್ತಿದ್ದೆವು ಎಂದು ಜಾಗನಕೋಟೆ ಹಾಡಿಯ ಸಣ್ಣಮಾದೇ ಗೌಡರು ಹೇಳುತ್ತಾರೆ. ಅರಣ್ಯದಲ್ಲಿ ಸಂಚರಿಸುವಾಗ ಬಿಲ್ಲು ಮತ್ತು ಬಾಣದೊಂದಿಗೆ ತೆರಳುತ್ತಿದ್ದು ಸಣ್ಣ ಪುಟ್ಟ ಪ್ರಾಣಿ ಪಕ್ಷಿಗಳಾದ, ಮೊಲ, ಕಾಡುಕೋಳಿ, ಮೈನಾ, ಪುರಲಕ್ಕಿ, ಪುನಗಿನ ಬೆಕ್ಕು, ಗುಬ್ಬಚ್ಚಿ ಇಂತಹವುಗಳನ್ನು ಬೇಟೆಯಾಡಿ ಮನೆಯಂಗಳದ ಮಸಾಲೆಗಳೊಟ್ಟಿಗೆ ಆಹಾರಕ್ಕಾಗಿ ಬಳಸುವ ಪದ್ಧತಿ ರೂಡಿಯಲ್ಲಿತ್ತು. ಆದರೆ ಇದು ಈಗ ಅರಣ್ಯಾ ಇಲಾಖೆಯ ಕಠಿಣ ಕ್ರಮದಿಂದ ಸಾಧ್ಯವಾಗುತ್ತಿಲ್ಲ. ಎಂದು ಹಾಡಿಯ ಜನ ಹೇಳುತ್ತಾರೆ. ವಿಶಿಷ್ಟ ಸಂದರ್ಭದಲ್ಲಿ ಮಧ್ಯಸೇವನೆ ಇರುತ್ತದೆ. ಪ್ರಸ್ತುತ ಇವರು ರಾಗಿ ಮುದ್ದೆ ಮತ್ತು ಕಾಳು ಸಾರು ಮತ್ತು ಪಡಿತರ ಅಕ್ಕಿಯನ್ನು ಆಹಾರಕ್ಕಾಗಿ ಬಳಸುತ್ತಾರೆ.

ಇವರು ಜೇನು ತುಪ್ಪವನ್ನು ಆಹಾರದಲ್ಲಿಯೂ ಬಳಸುತ್ತಾರೆ. ಕಾಡಿನಲ್ಲಿ ದೊರೆಯುವ ಸಿಹಿಗೆಣಸು, ಸೋರೆಗೆಣಸು, ಮರಗೆಣಸು ಕಿತ್ತು ಬೆಂಕಿಯಲ್ಲಿ ಸುಟ್ಟು ಜೇನುತುಪ್ಪದೊಂದಿಗೆ ಆಹಾರವಾಗಿ ಬಳಸುತ್ತಾರೆ. ಹೆಚ್ಚಾಗಿ ಸಂಗ್ರಹಿಸಿದ ಜೇನನ್ನು ಮಳೆಗಾಲದಲ್ಲಿ ಬಳಸಲು ಮತ್ತು ಔಷಧಿಯಾಗಿ ಬಳಸಲು ಉಪಯೋಗಿಸುತ್ತಾರೆ. ಕಾಡಿನಲ್ಲಿ ದೊರೆಯುವ ತರಹೆವಾರಿ ಸೊಪ್ಪುಗಳನ್ನು ಇವರು ಬಳಸುತ್ತಾರೆ. ಅಣ್ಣೆಸೊಪ್ಪು, ದಂಟಿನ ಸೊಪ್ಪು, ಕಿರೆಕಿರೆ ಸೊಪ್ಪು ಇವರ ಮುಖ್ಯ ತರಕಾರಿಯಾಗಿದೆ. ಇವರು ಹೊಲಗಳಲ್ಲಿ ಬೆಳೆಯುವ ರಾಗಿ, ಅವರೆ, ತೊಗರಿ ಇವುಗಳ ಜೊತೆಗೆ ಬೇರು ಅಣಬೆ, ಕಲ್ಲು ಅಣಬೆ, ಮರದ ದಿಮ್ಮಿಗಳ ಮೇಲೆ ಬೆಳೆಯುವ ಅಣಬೆಗಳನ್ನು ಬಳಸುತ್ತಾರೆ. ಕಾಡಿನಲ್ಲಿ ಯಥೇಚ್ಚವಾಗಿ ದೊರೆಯುವ ಮಾವು, ಹಲಸು, ಗೇರು, ಕಾಡುಬಾಳೆ, ನೆಲ್ಲಿಕಾಯಿ, ಇವುಗಳನ್ನು ಆಯಾ ಋತುಮಾನದಲ್ಲಿ ಹೆಚ್ಚಾಗಿ ಬಳಸುತ್ತಾರೆ. ಪ್ರಸ್ತುತ ಅರಣ್ಯಾ ಇಲಾಖೆಯವರ ಬಿಗಿ ಭದ್ರತೆ ಹಿನ್ನಲೆಯಲ್ಲಿ ಸಂತೆಗಳಲ್ಲಿ ದೊರೆಯುವ ಈರುಳ್ಳಿ, ಟೊಮೆಟೋ, ಆಲೂಗಡ್ಡೆ, ಕೋಸುಗಡ್ಡೆ, ಕ್ಯಾರೇಟ್ ಬಳಸುತ್ತಾರೆ. ಇವರು ಬಿದಿರಿನ ಕಳಲೆಯನ್ನು ಆಹಾರ, ಉಪ್ಪಿನಕಾಯಿ ಮತ್ತು ಔಷಧಿಗಾಗಿ ಬಳಸುತ್ತಾರೆ. ಕಾಡು ಅರಿಶಿಣ, ಅಂಟುವಾಳ, ಸೀಗೆಕಾಯಿ, ನೆಲನೆಲ್ಲಿ, ಅಳಲೆಕಾಯಿ, ಗಜ್ಜಗ, ತೇಗದ ಬೀಜ, ಬೇವಿನಬೀಜ, ಹೊಂಗೆಬೀಜ ನಾರು–ಬೇರು ಇವುಗಳನ್ನು ಔಷಧಿಗಾಗಿ ಬಳಸುತ್ತಾರೆ.

### ೨.೨.೪. ಯರವರು

ಯರವ ಆದಿವಾಸಿಗಳು ಕರ್ನಾಟಕದ ೫೦ ಬುಡಕಟ್ಟುಗಳಲ್ಲಿ ವಿಶೇಷವಾದ ಒಂದು ಸಮುದಾಯವೆಂದು ಪರಿಗಣಿಸಬಹುದು. ಜೇನುಕುರುಬರು ಮತ್ತು ಬೆಟ್ಟಕುರುಬರ ಅಕ್ಕ

ಪಕ್ಕದ ಹಾಡಿಗಳಲ್ಲಿ ವಾಸಿಸುತ್ತಾ ಆ ಸಮುದಾಯಗಳೊಂದಿಗೆ ಉತ್ತಮ ಸಾಮಾಜಿಕ ಬಾಂಧವ್ಯವನ್ನು ಹೊಂದಿ ವಿಶೇಷವಾದ ಸಾಮಾಜಿಕ ವಿಭಿನ್ನತೆಯನ್ನು ಹೊಂದಿರುವ ಸಮುದಾಯವಾಗಿದೆ. ಈ ಬುಡಕಟ್ಟು ಹೊಂದಿರುವ ಸಾಮಾಜಿಕ ಇತಿಹಾಸದ ಜೊತೆಗೆ ಇವರು ಹೊಂದಿರುವ ಭೌಗೋಳಿಕ ವಾಸಸ್ಥಳವೂ ಯಾವ ರೀತಿ ಪೂರಕವಾಗಿದೆ ಎಂಬುದನ್ನು ತಿಳಿಯುವುದು ಅವಶ್ಯಕವಾಗಿದೆ. ಆದಿವಾಸಿಗಳಲ್ಲಿ ಯರವರು ಸ್ವಲ್ಪ ಮಟ್ಟಿನ ಆರ್ಥಿಕ ಸಬಲತೆಯನ್ನು ಹೊಂದಿದವರಾಗಿದ್ದಾರೆ. ಪ್ರಸ್ತುತ ಇವರು ಆಧುನಿಕ ರೀತಿಯ ಜೀವನಕ್ಕೆ ಹತ್ತಿರವಾಗುತ್ತಿದ್ದಾರೆ ಎಂದರೆ ತಪ್ಪಾಗಲಾರದು. ಇವರು ಮಾಂಸಹಾರಿಗಳೂ ಹೌದು ಸಸ್ಯಹಾರಿಗಳೂ ಹೌದು.

### ೨.೨.೫. ಆದಿವಾಸಿಗಳ ಪಾರಂಪರಿಕ ಜ್ಞಾನ

ತಲೆ ತಲಾಂತರದಿಂದಲೂ ಕಾಡಿನಲ್ಲಿ ವಾಸಿಸುತ್ತಿರುವ ಸೋಲಿಗರು, ಜೇನುಕುರುಬರು, ಬೆಟ್ಟಕುರುಬರು ಮತ್ತು ಯರವರು ಇವರಿಗೆ ಅರಣ್ಯವಾಸದ ಸವಾಲುಗಳು ಹಾಗೂ ಅರಣ್ಯದೊಂದಿಗಿನ ಪಾರಂಪರಿಕ ಜ್ಞಾನ ಅಗಾಧವಾದದ್ದು. ಮುಖ್ಯವಾಗಿ ತರಗು ಬೆಂಕಿ ತಂತ್ರಜ್ಞಾನದ ಅನ್ವೇಷಣೆ ಅಗಾಧವಾದದ್ದು.

### ೨.೨.೫.೧. ತರಗು ಬೆಂಕಿ ಮತ್ತು ಅದರ ಹಿಂದಿರುವ ವೈಜ್ಞಾನಿಕತೆ

ತರಗು ಎಂದರೆ ಮರಗಿಡಬಳ್ಳಿಗಳಿಂದ ಬಿದ್ದಂತಹ ವಾರ್ಷಿಕ ಎಲೆಗಳ ರಾಶಿ. ಈ ಎಲೆಗಳಿಗೆ ಬೆಂಕಿ ಹಾಕುವುದನ್ನು ತರಗು ಬೆಂಕಿ ಎಂದು ಕರೆಯುತ್ತಾರೆ. ಆದಿವಾಸಿಗಳ ಪ್ರಕಾರ ತರಗು ಬೆಂಕಿಯನ್ನು ಜನವರಿ ೧೫ ರ ನಂತರ ಮತ್ತು ಫೆಬ್ರವರಿ ತಿಂಗಳೊಳಗಾಗಿ ಹಾಕಬೇಕು. ಆಗ ಇನ್ನೂ ಸ್ವಲ್ಪ ಹಸಿ ಹಸಿ ಇರುತ್ತದೆ. ಹಾಗಾಗಿ ಬೆಂಕಿ ಹತೋಟಿಯಲ್ಲಿರುತ್ತದೆ. ಆಗ ಮರದಿಂದ ಎಲ್ಲಾ ಬೀಜಗಳು ಬೀಳಲು ಪ್ರಾರಂಭವಾಗಿರುತ್ತವೆ. ಇಂತಹ ಸುಸಮಯದ ತರಗು ಬೆಂಕಿ ಬೀಜಗಳಿಗೆ ಯಾವುದೇ ಹಾನಿ ಮಾಡುವುದಿಲ್ಲ. ಮತ್ತು ಭೂಮಿಯು ಹದಗೊಂಡು ಮೇಲ್ಪದರ ಅಂದರೆ ಬೀಜ ಮೊಳಕೆ ಕಟ್ಟುವ ಭೂಮಿಯ ಕವಚ ಭಾಗ ಮೃದುವಾಗುತ್ತದೆ. ಅಲ್ಲದೆ ಬಿದ್ದ ಮಳೆಯ ನೀರನ್ನು ಹೆಚ್ಚು ಹಿಡಿದಿಟ್ಟುಕೊಳ್ಳುವ ಗುಣ ಪಡೆಯುತ್ತದೆ. ಹೀಗಾಗಿ ಹೆಚ್ಚು ನೀರು ಹಿಂಗುತ್ತದೆ. ಈ ಸಮಯದಲ್ಲಿನ ತರಗು ಬೆಂಕಿ ಸುಮಾರು ಒಂದು ಅಡಿಯಿಂದ ಎರೆಡು ಅಡಿ ಮಾತ್ರ ಎತ್ತರವಿರುತ್ತದೆ. ಇದು ತರಗೆಲೆಗಳನ್ನು ಮಾತ್ರ ಸುಡುತ್ತಾ ಭೂಮಿಯನ್ನು ಕಾವಾಗಿಸುತ್ತಾ ಮುಂದುವರೆಯುತ್ತದೆ. ಈ ಬೆಂಕಿ ಇಡೀ ಕಾಡಿಗೆ ಹರಡದಂತೆ ಮೊದಲೇ ಬೆಂಕಿ ಜಾಡು ಮಾಡಲಾಗಿರುತ್ತದೆ. ಬೆಂಕಿ ಇವರ ನಿರ್ದೇಶನದಂತೆಯೇ ತನ್ನ ಕಾಯಕ ಮಾಡುತ್ತಾ ಸಾಗುತ್ತದೆ. ಈ ಬೆಂಕಿಯ ಹೊಗೆ ಕೂಡ ಗಿಡಮರಬಳ್ಳಿಗಳಿಗೆ ಔಷಧಿ ರೂಪದಲ್ಲಿ ಕೆಲಸ ಮಾಡುತ್ತದೆ. ಇದು ಸೋಲಿಗರ ಅನುಭವ. ಇದನ್ನು ಸೋಲಿಗರ ಅಚ್ಚುಗಗೌಡ ಇವರು ಪರೀಕ್ಷಿಸಿದ್ದಾರೆ. ತರಗು ಬೆಂಕಿಯಿಂದ ಭೂಮಿಯ ಮೇಲಿನ ಕಳೆ

ಕೂಡ ನಾಶವಾಗುತ್ತದೆ. ಮತ್ತು ಗಿಡಮೂಲಿಕೆಗಳ ಮೇಲಿನ ಭಾಗ ಸುಟ್ಟು ಅದರ ಬೇರು ಹಾಗೆಯೇ ಇರುತ್ತದೆ. ಇವುಗಳೆಲ್ಲ ಮೊದಲ ಮಳೆಗೆ ಚಿಗುರುತ್ತವೆ. ಕೆಲವು ಮರದ ಬೀಜಗಳು ಮೊದಲೇ ಬಿದ್ದಿರುತ್ತವೆ. ಬೆಂಕಿ ಹಾಕದಿದ್ದರೆ ಈ ಬೀಜಗಳು ಮೊಳೆಯದೇ ಇರಬಹುದು. ಮತ್ತು ಕೆಲವು ಬೀಜಗಳು ಮೊಳೆಯಲು ಪ್ರಾಣಿಗಳು ತಮ್ಮ ಗೊರಿಸಿನಿಂದ ತುಳಿಯಬೇಕಾಗುತ್ತದೆ. ಹಾಗೆಯೇ ಕೆಲವು ಬೀಜಗಳು ಮೊಳೆಯಲು ಬೆಂಕಿಯ ಶಾಖ ಕೂಡ ಅವಶ್ಯಕ ಎಂದು ಸೋಲಿಗರು ಹೇಳುತ್ತಾರೆ. ಒಂದು ವೇಳೆ ತರಗು ಬೆಂಕಿ ಹಾಕದಿದ್ದರೆ ಅಲ್ಲಿ ಯಾವುದೇ ಸಸ್ಯ ಬೆಳೆಯದು. ಕಳೆಗಿಡಗಳು ಮತ್ತು ಲಂಟಾನ ಬೆಳೆದು ಇತರೆ ಯಾವುದೇ ಗಿಡಮರಬಳ್ಳಿ ಬೆಳೆಯಲು ಬಿಡುವುದಿಲ್ಲ. ಲಂಟಾನದಿಂದ ಹೆಚ್ಚು ತರಗು ಬೀಳುತ್ತದೆ. ಮತ್ತು ಲಂಟಾನ ಒತ್ತೊತ್ತಾಗಿ ಬೆಳೆಯುತ್ತದೆ. ಹೀಗಾಗಿ ಮೇಲಿಂದ ಬೀಳುವ ಬೀಜಗಳು ಲಂಟಾನ ಗಿಡದ ಮೇಲೆ ಬೀಳುತ್ತವೆ. ಇಲ್ಲದಿದ್ದಲ್ಲಿ ತರಗೆಲೆಮೇಲೆ ಬಿಳುತ್ತವೆ. ಈ ಎರೆಡೂ ಸಂದರ್ಭದಲ್ಲಿ ಬೀಜ ಮೊಳಕೆಗೆ ಅವಕಾಶವೇ ಇಲ್ಲ. ಸೋಲಿಗರ ಪ್ರಕಾರ ಸಮೃದ್ಧ ಕಾಡು ಎನಿಸಿಕೊಳ್ಳಬೇಕಾದರೆ, ಒಂದು ಅಡಿ ಚಚ್ಚೌಕದಲ್ಲಿ ೧೮ ರಿಂದ ೨೦ ಗಿಡಮೂಲಿಕೆಗಳಿರಬೇಕು.

### ೨.೨.೫.೨. ತರಗು ಬೆಂಕಿಯಿಂದಾಗುವ ಉಪಯೋಗಗಳು

ತರಗು ಬೆಂಕಿಯಿಂದ ಅರಣ್ಯಕ್ಕೆ ಹಲವು ಉಪಯೋಗಗಳಿರುವುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಅವುಗಳಲ್ಲಿ ಪ್ರಮುಖವಾದಂತಹುಗಳು.

### ೨.೨.೫.೨.೧. ಭೂಮಿಯನ್ನು ಹದಗೊಳಿಸುತ್ತದೆ

ವರ್ಷದ ತರಗಿಗೆ ಬೆಂಕಿ ಹಾಕುವುದರಿಂದ ಭೂಮಿ ಬೇಯುತ್ತದೆ. ಭೂಮಿ ಸೂರ್ಯನ ಕಿರಣಗಳಿಗೆ ತನ್ನ ಮೈ ಒಡ್ಡುವಂತೆ ಮಾಡುತ್ತದೆ. ಇದರಿಂದಾಗಿ ಭೂಮಿ ಸೂರ್ಯನ ಕಿರಣಗಳಿಂದ ಹದಗೊಳ್ಳುತ್ತದೆ.

### ೨.೨.೫.೨.೨. ಕಳೆ ಗಿಡ ಬಳ್ಳಿಗಳನ್ನು ತಡೆಗಟ್ಟುತ್ತದೆ

ಪ್ರತೀ ವರ್ಷ ತರಗು ಬೆಂಕಿ ಹಾಕುವುದರಿಂದ ಕಳೆಗಿಡಗಳಾದ ಲಂಟಾನ, ಕಾಂಗ್ರೆಸ್‌ನಂತಹ ಗಿಡಗಳು ನಾಶವಾಗುತ್ತವೆ. ಇದು ಅತೀ ಮುಖ್ಯ. ಏಕೆಂದರೆ ವಿದೇಶಗಳಿಂದ ನುಸುಳಿಕೊಂಡು ಬಂದ ಕಾಂಗ್ರೆಸ್ ಹುಲ್ಲು, ಇಂದಿರಾ ಹುಲ್ಲುಗಳು ಕಿರುಸಸ್ಯಗಳ ಕಡುವೈರಿಗಳು. ಅವು ತಾವು ಬೆಳೆಯುವ ಮಣ್ಣಿನಲ್ಲಿ ರಾಸಾಯನಿಕಗಳನ್ನು ಹೊರಹೊಮ್ಮಿಸಿ ಪುಟಾಣಿ ಸಸ್ಯಗಳು ಬೆಳೆಯದಂತೆ ಮುನ್ನೆಚ್ಚರಿಕೆ ವಹಿಸುತ್ತವೆ. ಇದನ್ನು ಸಸ್ಯ ವಿಜ್ಞಾನಿಗಳು ಸಾಬೀತುಪಡಿಸಿದ್ದಾರೆ. ಕಳೆಗಿಡಗಳು ಬೆಳೆಯುವ ಕಡೆ ದನಕರು, ವನ್ಯಪ್ರಾಣಿಗಳ ಮೇವಾದ ಹುಲ್ಲು ಬೆಳೆಯದು. ಸಸ್ಯ ಪಂಡಿತರಿಗೆ ಇದೊಂದು ಸವಾಲಾಗಿ

ಪರಿಣಮಿಸಿದೆ. ಇದರಂತೆ ದಟ್ಟ ಕಾಡು ಬೆಳೆಯುವಲ್ಲಿ ನೀಲಗಿರಿ ಮತ್ತು ಅಕೇಶಿಯಾ ನೆಡು ತೋಪುಗಳನ್ನು ಬೆಳೆಸಿದ್ದರಿಂದ ಲಭ್ಯವಿದ್ದ ನೀರನ್ನೆಲ್ಲ ಅವುಗಳೇ ಹೀರಿಕೊಂಡು ಬಿಡುವವು ಹೀಗಾಗಿ ಕಿರಿ ಸಸ್ಯಗಳಿಗೆ ನೀರು ದೊರೆಯದು.

### ೨.೨.೫.೨.೩. ಹುಲ್ಲುಗಾವಲಿನ ಅಭಿವೃದ್ಧಿ

ಕೆಲವೊಂದು ಜಾತಿ ಹುಲ್ಲು ನೆಲದಲ್ಲಿ ಹರಡಿಕೊಂಡಿರುತ್ತದೆ. ಕೆಲವೊಂದು ಜಾತಿ ಹುಲ್ಲು ೫ ರಿಂದ ೬ ಅಡಿ ಎತ್ತರ ಬೆಳೆಯುತ್ತದೆ. ಈ ಹುಲ್ಲು ಪ್ರತೀ ವರ್ಷ ಹೊಸದಾಗಿ ಚಿಗುರ ಬೇಕಾದರೆ ನಾವು ಅದನ್ನು ಕಟಾವು ಮಾಡಿರಬೇಕು ಇಲ್ಲ ಪ್ರಾಣಿಗಳು ಅದನ್ನು ಬುಡದವರೆಗೆ ತಿಂದಿರಬೇಕು. ಆದರೆ ಬೃಹತ್ ಕಾಡಿನಲ್ಲಿ ಎರಡೂ ಸಾಧ್ಯವಿಲ್ಲದ ಮಾತು. ಹೀಗಾಗಿ ನಮಗೆ ಉಳಿದ ಮಾರ್ಗ ತರಗು ಬೆಂಕಿ ಮಾತ್ರ, ಈ ತರಗು ಬೆಂಕಿ ಹಾಕುವುದರಿಂದ ಕಳೆ ಗಿಡ ಬೆಳವಣಿಗೆಯನ್ನು ತಡೆಗಟ್ಟಬಹುದು. ಮತ್ತು ಹಳೇ ಹುಲ್ಲನ್ನು ನಾಶಪಡಿಸಬಹುದು. ಈ ಮೂಲಕ ಹುಲ್ಲುಗಾವಲಿನ ಅಭಿವೃದ್ಧಿ ಸಾಧ್ಯ.

### ೨.೨.೫.೨.೪. ಸಸ್ಯಹಾರಿ ಪ್ರಾಣಿಗಳ ಅಭಿವೃದ್ಧಿ



ಹುಲ್ಲುಗಾವಲಿನ ಅಭಿವೃದ್ಧಿಯಾದರೆ ಸಸ್ಯಹಾರಿ ಪ್ರಾಣಿಗಳಾದ ಮೊಲ, ಜಿಂಕೆ, ಕಾಡೆಮ್ಮೆ, ಕಡವೆ, ಮುಂತಾದ ಪ್ರಾಣಿಗಳ ಸಂತಾನ ಅಭಿವೃದ್ಧಿಯಾಗುತ್ತದೆ. ಮತ್ತು ಆನೆ ಬಾಣೆಹುಲ್ಲನ್ನು ಹೆಚ್ಚಾಗಿ ಬಳಸುವುದರಿಂದ ಬೆಂಡೆ ಮರಗಳು ಆನೆಯಿಂದ ಹಾಳಾಗುವುದನ್ನು ತಡೆಗಟ್ಟಬಹುದು.

### ೨.೨.೫.೨.೫. ಮಾಂಸಹಾರಿ ಪ್ರಾಣಿಗಳ ಅಭಿವೃದ್ಧಿ

ಸೃಷ್ಟಿ ಸಂಕುಲದಲ್ಲಿ ನಾವು ಆಹಾರದ ಪದ್ಧತಿಯನ್ನು ಗಮನಿಸಿದಾಗ ಇದೊಂದು ಪರಸ್ಪರ ಅವಲಂಬಿ ವ್ಯವಸ್ಥೆ. ಸಸ್ಯಹಾರಿ ಪ್ರಾಣಿಗಳ ಅಭಿವೃದ್ಧಿಯಿಂದಾಗಿ ಇವುಗಳ ಮಾಂಸವನ್ನೇ ಅವಲಂಬಿಸಿರುವ ಮಾಂಸಹಾರಿಗಳಾದ ಹುಲಿ, ಚಿರತೆ, ಕೆನ್ನಾಯಿ, ತೋಳ, ಸೀಳುನಾಯಿ ಮುಂತಾದವುಗಳ ಬೆಳವಣಿಗೆಗೆ ಹೆಚ್ಚಿನ ಪ್ರಯತ್ನ ಪಡಬೇಕಾಗಿರುವುದಿಲ್ಲ. ಮತ್ತು ಗಿರಿಜನರನ್ನು ಒಕ್ಕಲೆಬ್ಬಿಸುವಂತಹ ರಾಷ್ಟ್ರೀಯ ಉದ್ಯಾನವನ ಯೋಜನೆಗಳು ಹಾಗೂ ಹುಲಿಯೋಜನೆಗಳ ಅವಶ್ಯಕತೆ ಕಂಡು ಬರದು.

### ೨.೨.೫.೨.೬. ರೋಗ ನಿರೋಧಕವಾಗಿ ಬೆಂಕಿ

ಸಾಮಾನ್ಯವಾಗಿ ಎಲೆಗಳು ಬಿಸಿಲು ಮತ್ತು ಮಳೆಗೆ ಕೊಳೆತರೆ ಒಳ್ಳೆಯ ಪೋಷಕಾಂಶಗಳುಳ್ಳ ಗೊಬ್ಬರವಾಗುತ್ತದೆ. ಇದರಲ್ಲಿ ಎರಡು ಮಾತಿಲ್ಲ. ಆದರೆ ಆದಿವಾಸಿಗಳು ಹೇಳುವ ಪ್ರಕಾರ ಇದೇ ಎಲೆಗಳು ಕೊಳೆತು ಬೂಸ್ಟ್‌ನಂತಹ ರೋಗ

ಬರುವ ಸಾಧ್ಯತೆ ಇದೆ. ಸುಡುವುದೇ ಒಳ್ಳೆಯದು. ತರಗು ಬೆಂಕಿಯಿಂದ ಏಳುವ ಹೊಗೆಯು ಮರಗಿಡಬಳ್ಳಿಗಳ ಮೇಲೆ ಹೋಗುವುದರಿಂದ ಅದರ ಮೇಲಿರುವಂತಹ ಸೂಕ್ಷ್ಮ ಜೀವಿ ರೋಗಾಣುಗಳು ಸಾಯುತ್ತವೆ ಹಾಗಾಗಿ ಮುಂದೆ ತಗುಲ ಬಹುದಾದಂತಹ ರೋಗವನ್ನು ತಡೆದಂತಾಗುತ್ತದೆ.

**೨.೨.೫.೨.೭. ರೋಗ ನಿರೋಧಕ ಶಕ್ತಿ ಹೊಂದಿದ ನೀರಿನ ಪೂರೈಕೆ**

ಬಸವನಗಿರಿ ಎ ಹಾಡಿಯ ಕೆಂಚಜ್ಜ ತರಗು ಬೆಂಕಿಯಿಂದ ಗಿಡಮೂಲಿಕೆಗಳ ಬೇರು, ಸೊಪ್ಪು, ನಾರು ಬೆಂದು ಮಳೆ ಬಂದಾಗ ಅದು ನೀರಿನಲ್ಲಿ ಸೇರುತ್ತಿತ್ತು. ಅದನ್ನು ನಾವು ಕುಡಿಯುತ್ತಿದ್ದೆವು. ಪ್ರಾಣಿಗಳೂ ಕುಡಿಯುತ್ತಿದ್ದವು. ಇದರಿಂದ ಜನರು ಮತ್ತು ಪ್ರಾಣಿಗಳೂ ಆರೋಗ್ಯದಿಂದ ಇರುತ್ತಿದ್ದವು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**೨.೨.೫.೩. ತರಗು ಬೆಂಕಿ ಹಾಕದಿದ್ದರೆ ಆಗುವ ತೊಂದರೆಗಳು**

ಕಾಡಿಗೆ ಬೆಂಕಿ ಹಾಕದಿದ್ದರೆ ಆಗಬಹುದಾದ ಹಲವು ಸಮಸ್ಯೆಗಳನ್ನು ಆದಿವಾಸಿಗಳು ತಮ್ಮ ಅನುಭವದಿಂದ ಕಂಡುಕೊಂಡಿರುವುದನ್ನು ಇಲ್ಲಿ ಚರ್ಚಿಸಲಾಗಿದೆ.

**೨.೨.೫.೩.೧. ಕಾಡಿನ ನಾಶ**

ತರಗು ಬೆಂಕಿ ಹಾಕದಿದ್ದರೆ ಕಾಡು ಹಂತ ಹಂತವಾಗಿ ನಾಶವಾಗುತ್ತದೆ. ಇದು ಸೋಲಿಗರ ಹಿರಿಯರ ಅನುಭವದ ಮೂಸೆಯಿಂದ ಬಿಚ್ಚಿದ ಮಾತು. ಸೋಲಿಗರ ಅಚ್ಚುಗಗೌಡ ಮತ್ತು ಕಾರನಕ್ಯಾತೆಗೌಡ ಅಭಿಪ್ರಾಯ ಪಡುವಂತೆ ಕಳೆದ ೩೫–೪೦ ವರ್ಷಗಳಲ್ಲಿ ಸಾಕಷ್ಟು ಅರಣ್ಯ ಕಡಿಮೆ ಆಗಿದೆ. ಅಂದರೆ ಅರಣ್ಯ ಇಲಾಖೆ ಕಟ್ಟುನಿಟ್ಟಾಗಿ ತರಗು ಬೆಂಕಿ ಹಾಕುವುದನ್ನು ನಿರ್ಭಂಧಿಸಿದ ಮೇಲೆ ಹೊಸದಾಗಿ ಗಿಡಮರಬಳ್ಳಿಗಳು ಅಭಿವೃದ್ಧಿಯಾಗುತ್ತಿಲ್ಲ. ಈಗ ತರಗು ಬೆಂಕಿ ಹಾಕದಿರುವುದರಿಂದ ಕಾಡಿನ ತುಂಬಾ ಲಂಟಾನ ಬೆಳೆದಿದೆ. ಇದು ಬಳ್ಳಿ ರೂಪದಲ್ಲಿ ದೊಡ್ಡ ದೊಡ್ಡ ಮರಗಳಿಗೂ ಹಬ್ಬಿದೆ. ಇದರ ಪರಿಣಾಮ ಬೀಜಗಳು ನೆಲದ ಮೇಲೆ ಬೀಳುವುದಿಲ್ಲ. ಒಂದು ವೇಳೆ ಬಿದ್ದರೂ ಅದರ ಮೇಲೆ ತರಗು ಅದರಲ್ಲೂ ಲಂಟಾನದ ತರಗು ಬೀಳುವುದರಿಂದ ಅದು ಮೊಳೆಯಲು ಅವಕಾಶವಾಗದು ಮತ್ತು ಲಂಟಾನ ಒತ್ತತ್ತಾಗಿ ಬೆಳೆಯುವುದರಿಂದ ಇದು ಇಡೀ ಕಾಡನ್ನೆ ನುಂಗಿ ಹಾಕಿದೆ. ಲಂಟಾನದಲ್ಲಿ ಎಣ್ಣೆ ಅಂಶ ಇರುವುದರಿಂದ ಬೆಂಕಿ ಬಿದ್ದರೆ ಇಡೀ ಕಾಡೇ ಸುಟ್ಟು ಭಸ್ಮವಾಗಲು ತಯಾರಾಗಿದೆ. ಲಂಟಾನದಿಂದ ಹುಲ್ಲುಗಾವಲು ಇಲ್ಲದಂತಾಗಿದೆ. ಗಿಡಮೂಲಿಕೆಗಳ ಬೇರುಗಳೂ, ಬೀಜಗಳೂ ನಾಶವಾಗಿವೆ.

### ೨.೨.೫.೩.೨. ಗಿರಿಜನರ ಆಹಾರ ಪದ್ಧತಿ ನಾಶ

ಈ ಲಂಟಾನದಿಂದಾಗಿ ಅಡವಿ ಕುಮಾರರಾದ ಗಿರಿಜನರು ತಮ್ಮ ಆಹಾರ ಪದ್ಧತಿಯಲ್ಲಿ ಬದಲಾವಣೆ ಮಾಡಿಕೊಳ್ಳಬೇಕಾಗಿದೆ. ಕಾಡಿನಲ್ಲಿ ದೊರಕುತ್ತಿದ್ದ ಗೆಡ್ಡೆ-ಗೆಣಸು, ನಾರು-ಬೇರು, ನೂರಾರು ತರಹದ ಸೊಪ್ಪು, ತರತರಹದ ಜೇನು ಸಂಗ್ರಹಿಸಿ ಮೂಲರೂಪದಲ್ಲಿ ನೈಸರ್ಗಿಕವಾದ ಮತ್ತು ಪೌಷ್ಟಿಕಾಂಶವುಳ್ಳ ಆಹಾರವನ್ನು ಸೇವಿಸುತ್ತಿದ್ದರು. ಆದರೆ ಬ್ರಿಟಿಷರ ಶೋಕಿಗಾಗಿ ಉದ್ಯಾನವನಗಳಲ್ಲಿ ನೆಡಲು ವಿದೇಶದಿಂದ ತಂದಂತಹ ಲಂಟಾನ ಎಂಬ ಮಹಾಮಾರಿ ಗಿರಿಜನರ ಆಹಾರ ಪದ್ಧತಿಗೆ ಪೆಟ್ಟು ನೀಡಿದೆ. ಗಿರಿಜನರು ಸರ್ಕಾರ ಕೊಡುವ ಸಂಗ್ರಹಿಸಿಟ್ಟಂತಹ ತಿಂಗಳ ಅಪೌಷ್ಟಿಕ ರೇಷನ್‌ಗಾಗಿ ಕಾಯಬೇಕಾಗಿದೆ. ಇದರಲ್ಲಿ ನಾವು ಬಳಸುತ್ತಿದ್ದ ಆಹಾರದ ೧/೪ ರಷ್ಟು ಪೌಷ್ಟಿಕಾಂಶವಿಲ್ಲ ಎಂದು ಹೇಳುತ್ತಾರೆ ಗಿರಿಜನರು. ಸೋಲಿಗರು ಹೇಳುವಂತೆ ಒಮ್ಮೆ ಊಟ ಮಾಡಿದರೆ ೨೪ ಗಂಟೆ ಹಸಿವಾಗುತ್ತಿರಲಿಲ್ಲ. ಆದರೆ ಈಗ ನಗರ ಪ್ರದೇಶದವರಂತೆ ದಿನಕ್ಕೆ ಮೂರು ಹೊತ್ತು ಊಟ ಮಾಡಬೇಕಾಗಿದೆ. ಹಾಗಾಗಿ ಇಂದು ಗಿರಿಜನರಲ್ಲಿ ಕೂಡ ಅಪೌಷ್ಟಿಕತೆ ಮತ್ತು ರಕ್ತಹೀನತೆ ಎದ್ದು ಕಾಣುತ್ತದೆ.

### ೨.೨.೫.೩.೩. ಆನೆಯ ಜೀವನ ಕ್ರಮದಲ್ಲಿ ಬದಲಾವಣೆ

ಆನೆಗೆ ಬಹು ಪ್ರಿಯವಾದ ಆಹಾರ ಬಾಣೆಹುಲ್ಲು. ಮತ್ತಿತರೆ ಹುಲ್ಲು ಹಾಗೂ ಬಿದಿರು ಮೆಳೆ. ಬಿದಿರು ಎಲ್ಲಾ ಕಾಡಿನಲ್ಲೂ ದೊರಕುವುದಿಲ್ಲ. ಆದರೆ ಬೇರೆ ಬೇರೆ ತರಹದ ಹುಲ್ಲುಗಾವಲು ಪ್ರತೀ ಕಾಡಿನಲ್ಲೂ ಕಾಣಸಿಗುತ್ತಿತ್ತು. ಆನೆಗಳು ಹಿಂಡು ಹಿಂಡಾಗಿ ಹುಲ್ಲುಗಾವಲಿನಲ್ಲಿ ಮೇಯುತ್ತಿದ್ದವು. ಮತ್ತು ಕಾಡಿನಲ್ಲಿ ಯಾವುದೇ ಮರಗಳ ತಂಟೆಗೆ ಹೋಗುತ್ತಿರಲಿಲ್ಲ. ಲಂಟಾನದ ದೆಶೆಯಿಂದಾಗಿ ಹುಲ್ಲುಗಾವಲುಗಳು ನಾಶವಾಗಿ ಲಂಟಾನಗಾವುಗಳಾದ ಮೇಲೆ ಆನೆಗಳು ಕೆಲವು ಮರದ ತೊಗಟೆ ಮತ್ತು ಸೊಪ್ಪುಗಳಿಗೆ ಮೊರೆ ಹೋಗಿವೆ. ಬೆಂಡೆ ಮರದ ತೊಗಟೆ ಆನೆಗೆ ಬಲುಪ್ರಿಯ. ಹೀಗಾಗಿ ಆನೆ ಬೆಂಡೆ ಮರಕ್ಕೆ ಲಗ್ಗೆ ಇಟ್ಟರೆ ಆ ಮರದ ಸರ್ವನಾಶವೆಂದೆ ಪರಿಗಣಿಸಬೇಕಾಗಿದೆ. ಮೇಲಿನ ತೊಗಟೆ ತೆಗೆದ ಮೇಲೆ ಬೆಂಡೆ ಮರ ಬದುಕದು. ಇಂತಹ ಒಣಗಿದ ನೂರಾರು ಬೆಂಡೆ ಮರಗಳನ್ನು ನಾವು ಬಿಳಿಗಿರಿರಂಗನ ಬೆಟ್ಟದಲ್ಲಿ ಕಾಣಬಹುದಾಗಿದೆ. ಕಾಡಿಗೆ ಬೆಂಕಿ ಬಿದ್ದಾಗ ಇಂತಹ ಒಣಗಿದ ಮರಗಳಿಂದ ಬೆಂಕಿಗೆ ಮತ್ತಷ್ಟು ಪ್ರಾಯ ಬರುತ್ತದೆ. ಇಂತಹ ಸಂದರ್ಭದಲ್ಲಿ ಕಾಡಿನ ನಾಶ ತಪ್ಪಿಸಲು ಸಾಧ್ಯವೇ? ಎಲ್ಲೆಲ್ಲೂ ಬಲೆಯಂತೆ ಬೆಳೆದಿರುವ ಲಂಟಾನದಿಂದ ಆನೆಗಳು ತಮ್ಮ ಪಥವನ್ನು ಬದಲಿಸಿವೆ. ಅನ್ಯ ಮಾರ್ಗವಿಲ್ಲದೆ ಅರಣ್ಯ ಇಲಾಖೆಯವರು ಪಹರೆಗೆ ಮಾಡಿಕೊಂಡಿರುವ ಮಾರ್ಗ ಬಳಸುತ್ತಿವೆ. ಇದು ಜನರ ಮೇಲೆ ಆನೆ ದಾಳಿ ಹೆಚ್ಚಲು ಕಾರಣವಾಗಿದೆ.

### ೨.೨.೫.೩.೪. ನೀರಿನ ಸೆಲೆ ಬತ್ತುವಿಕೆ

ತರಗು ಬೆಂಕಿ ಹಾಕದೇ ಇರುವುದರಿಂದ ಬಿದ್ದ ಮಳೆ ಭೂಮಿಯಲ್ಲಿ ಸರಿಯಾಗಿ ಹಿಂಗುವುದಿಲ್ಲ. ಅಲ್ಲದೆ ಮಳೆ ಕೂಡ ಕಡಿಮೆಯಾಗಿದೆ. ಆದಿವಾಸಿಗಳು ಹೇಳುವ ಪ್ರಕಾರ ಮೊದಲೆಲ್ಲಾ ವರ್ಷದಲ್ಲಿ ೯ ತಿಂಗಳು ಮಳೆ ಬೀಳುತ್ತಿತ್ತು. ಹಾಗಾಗಿ ಪ್ರಾಣಿಗಳು ನೀರಿಗಾಗಿ ಪರಿತಪಿಸುವಂತಿರಲಿಲ್ಲ. ಆದರೆ ಈಗಿನ ಪರಿಸ್ಥಿತಿಯೇ ಬೇರೆ. ಮಳೆ ಇಲ್ಲದೆ ನೀರು ಕಾಡಿನಲ್ಲಿ ದೊರಕುತ್ತಿಲ್ಲ. ಆನೆ, ಕರಡಿ, ಚಿರತೆ, ಹುಲಿಗಳು ನಗರ ಮತ್ತು ಜನವಸತಿ ಪ್ರದೇಶಗಳ ಕಡೆ ಸುಳಿದಾಡುತ್ತಿವೆ.

### ೨.೨.೫.೩.೫. ಆದಿವಾಸಿಗಳ ಪಾರಂಪರಿಕ ಜ್ಞಾನ ನಾಶ

ಅರಣ್ಯ ನಾಶದಿಂದಾಗಿ ಆದಿವಾಸಿಗಳ ಪಾರಂಪರಿಕ ಜ್ಞಾನ ನಾಶವಾಗಿದೆ. ಅಂದರೆ ಆನೆ ಹುಲಿಗಳಂತಹ ಪ್ರಾಣಿಗಳಿಂದ ರಕ್ಷಣೆ ಪಡೆಯುವುದು. ದೊಡ್ಡ ದೊಡ್ಡ ಮರಗಳಲ್ಲಿನ ಜೇನು ಸಂಗ್ರಹಣೆ. ನಾರುಬೇರು ಸಂಗ್ರಹ ಮತ್ತು ಚಿಕಿತ್ಸೆಗಾಗಿ ಬಳಕೆ ಇಂತಹ ಜ್ಞಾನಗಳು ಇಂದು ನಾಶವಾಗಿವೆ. ಈಗಿನ ಆದಿವಾಸಿ ಮಕ್ಕಳಿಗೆ ಕಾಡಿನ ಸಂಪೂರ್ಣ ಅರಿವು ಕೂಡ ಇಲ್ಲದಾಗಿದೆ. ಎಸ್.ಎಸ್.ಎಲ್.ಸಿ ವರೆಗೆ ಮಾತ್ರ ಅದೂ ಕೂಡ ಅರೆಬರೆ ಓದಿದ ಆದಿವಾಸಿ ಮಕ್ಕಳು ನಗರದಲ್ಲಿ ಕೆಲಸ ಮಾಡಲು ಆಗುತ್ತಿಲ್ಲ. ವ್ಯವಸಾಯಕ್ಕೆ ಭೂಮಿ ಇಲ್ಲ. ಕಾಡಿನ ಕಿರು ಉತ್ಪನ್ನ ಸಂಗ್ರಹಿಸಲು ಅವುಗಳ ನಾಶವಾಗಿದೆ. ಅಲ್ಪಸ್ವಲ್ಪ ಇದ್ದುದನ್ನು ಸಂಗ್ರಹಿಸಲು ಮತ್ತು ಅಭಿವೃದ್ಧಿ ಪಡಿಸಲು ಈಗಿನ ತಲೆಮಾರಿಗೆ ಅದರ ಜ್ಞಾನ ಇಲ್ಲದಾಗಿದೆ. ಹೀಗಾಗಿ ಹಲವಾರು ಗಿಡಮೂಲಿಕೆ ಮತ್ತು ಗಡ್ಡೆಗೆಣಸು ನಾಶವಾಗಿ ಅದರ ಪಳೆಯುಳಿಕೆ ಕೂಡ ಇಲ್ಲದಂತಾಗಿದೆ.

### ೨.೨.೫.೩.೬. ಆದಿವಾಸಿಗಳ ಆರ್ಥಿಕ ಪರಿಸ್ಥಿತಿ ದಿಕ್ಕು ಬದಲಾವಣೆ

ಆದಿವಾಸಿಗಳು ತಮ್ಮ ದೈನಂದಿನ ಜೀವನ ನಿರ್ವಹಣೆಗೆ ಆಯಾ ಕಾಲದಲ್ಲಿ ದೊರಕುತ್ತಿದ್ದ ಕಾಡಿನ ಉಪ/ಕಿರು ಉತ್ಪನ್ನಗಳನ್ನು ಸಂಗ್ರಹಿಸುತ್ತಿದ್ದರು. ಅವುಗಳನ್ನು ಮಾರಾಟ ಮಾಡಿ ಬಂದ ಹಣದಲ್ಲಿ ತಮಗೆ ಬೇಕಾದ ಉಪ್ಪು, ಮೆಣಸು, ಬೇಳೆ, ಬೆಲ್ಲ, ಬಟ್ಟೆ ಮತ್ತಿತರ ವಸ್ತುಗಳನ್ನು ಖರೀದಿಸಿ ತಮ್ಮ ಪಾಡಿಗೆ ತಾವು ಕಾಡಿಗೆ ತೆರಳುತ್ತಿದ್ದರು. ಆದರೆ ಕಾಡಿನ ನಾಶವಾಗಿರುವುದರಿಂದ ಅವರು ಎಸ್ಟೇಟುಗಳಲ್ಲಿ ಕೂಲಿಗಳಾಗಿ ಎಸ್ಟೇಟುಗಳ ಮಾಲೀಕರನ್ನು ಅವಲಂಬಿಸಿ ತಮ್ಮ ಜೀವನ ನಿರ್ವಹಿಸಬೇಕಾದ ಅನಿವಾರ್ಯತೆ ಉಂಟಾಗಿದೆ.

### ೨.೨.೫.೩.೭. ಆದಿವಾಸಿಗಳಲ್ಲೂ ಕೂಡಿಡುವ ಸಂಸ್ಕೃತಿಗೆ ಆದಿ

ಆದಿವಾಸಿಗಳ ಆರ್ಥಿಕತೆ ಗಮನಿಸಿದರೆ ಅಲ್ಲಿ ಕೂಡಿಡುವ ಸಂಸ್ಕೃತಿಯೇ ಇರುವುದಿಲ್ಲ. ಪ್ರೊ ಕಿಕ್ಕೇರಿ ನಾರಾಯಣ ಇವರ ೨೦ ವರ್ಷಗಳ ಹಿಂದಿನ ಅನುಭವದಂತೆ "ಒಂದು ಕುಟುಂಬಕ್ಕೆ ಕೊಟ್ಟ ಒಂದು ಮೂಟೆ ಅಕ್ಕಿ ಒಂದೇ ದಿನದಲ್ಲಿ ಖಾಲಿ, ಮರುದಿನ ಕಾರಣ ಕೇಳಿದರೆ ನಾವು ಅದನ್ನು ಎಲ್ಲರೂ ಹಂಚಿಕೊಂಡು ತಿಂದೆವು ಎಂದು ಹೇಳಿದರು" ಇಂತಹ ಒಂದು ಮನೋಭಾವ ಇಂದಿನ ದಿನದಲ್ಲಿ ನಾವು ಕಾಣುವುದು ಸಾಧ್ಯವಿಲ್ಲ. ಆದರೆ ಇಂತಹ ಮನೋಭಾವದ ಬೆಳವಣಿಗೆಗೆ ಕಾರಣ ಅರಣ್ಯದ ನಾಶವೇ ಎಂದು ಹೇಳಬಹುದು. ಇಂದು ಆದಿವಾಸಿಗಳಲ್ಲಿ ಕೌಟುಂಬಿಕ ಮನೋಭಾವ ಹೆಚ್ಚಾಗಿ ಸಾಮುದಾಯಿಕ ಮನೋಭಾವ ಇಲ್ಲದಂತಾಗಿದೆ.

### ೨.೨.೫.೩.೮. ಸಾಮಾಜಿಕ ಪರಿಸ್ಥಿತಿಯಲ್ಲಿ ಬದಲಾವಣೆ

ಕಾಡಿನ ನಾಶವಾದಂತೆ ಆದಿವಾಸಿಗಳು ತಮ್ಮ ಜೀವನ ನಿರ್ವಹಣೆಗೆ ಬೇರೆ ಬೇರೆ ಮೂಲಗಳ ಮೊರೆ ಹೋಗಬೇಕಾಗಿ ಬಂತು. ಕೆಲವರು ಎಸ್ಟೇಟುಗಳ ಕೂಲಿಗಳಾಗಿದ್ದಾರೆ. ಮತ್ತೆ ಕೆಲವರು ಹತ್ತಿರದ ಪೇಟೆಗಳಿಗೆ ಕೆಲಸಕ್ಕೆ ಸೇರಿಕೊಂಡಿದ್ದಾರೆ. ಇದರಿಂದಾಗಿ ಪಟ್ಟಣಗಳ ಬದುಕು ರೀತಿ-ರಿವಾಜು ಒಂದೊಂದೇ ಆದಿವಾಸಿಗಳ ಪೋಡು, ಹಾಡಿಗಳಿಗೆ ಹೊಕ್ಕಿವೆ. ಇದರಲ್ಲಿ ಮದ್ಯಪಾನವೆಂಬ ದುಶ್ಚಟ ಗಿರಿಜನರ ಸಂಸ್ಕೃತಿಯನ್ನೇ ನಾಶಮಾಡಿದೆ. ಮತ್ತು ಅವರ ಸಾಮಾಜಿಕ ಜೀವನ ಅತೀ ಹೀನಾಯವಾಗುತ್ತಾ ಸಾಗಿದೆ. ಇದಕ್ಕೆ ಕಾಡಿನ ನಾಶವಲ್ಲದೆ ಮತ್ತೇನೂ ಕಾರಣವಿಲ್ಲ ಎಂದು ಆದಿವಾಸಿಗಳ ಹಿರಿಯರ ವ್ಯಥೆ.

### ೨.೨.೫.೪. ಅರಣ್ಯ ಇಲಾಖೆ ತರಗು ಬೆಂಕಿ ಹಾಕಲು ಬಿಡುತ್ತಿಲ್ಲ ಏಕೆ?

ಹಾಗಾದರೆ ತರಗು ಬೆಂಕಿಯ ಪ್ರಯೋಜನ ಅರಣ್ಯ ಇಲಾಖೆಯ ಅಧಿಕಾರಿಗಳಿಗೆ ಗೊತ್ತಿಲ್ಲವೇ? ಅಥವಾ ಇದರ ಮಹತ್ವವನ್ನು ಅವರಿಗೆ ತಿಳಿಸುವ ಪ್ರಯತ್ನ ಮಾಡಿಲ್ಲವೆ? ಈ ಪ್ರಶ್ನೆಗಳನ್ನು ಆದಿವಾಸಿ ಮುಖಂಡರಿಗೆ ಕೇಳಿದಾಗ ಇದರ ಬಗ್ಗೆ ವಿಚಾರ ಸಂಕೀರ್ಣಗಳಾಗಿವೆ, ಸಭೆ ಸಮಾರಂಭಗಳಾಗಿವೆ. ಅಧಿಕಾರಿಗಳು, ಪರಿಸರವಾದಿಗಳು, ವಿಜ್ಞಾನಿಗಳು ಇದನ್ನು ಒಪ್ಪಿಕೊಂಡಿದ್ದಾರೆ. ಆದರೆ ಅದನ್ನು ಅನುಷ್ಠಾನಕ್ಕೆ ತರಲು ತಮಗೆ ಕೇಂದ್ರ ಸರ್ಕಾರದ ಅನುಮತಿ ಬೇಕು ಎಂದು ಅಧಿಕಾರಿಗಳು ಕೈಚೆಲ್ಲಿ ಕುಳಿತುಕೊಳ್ಳುತ್ತಾರೆ. ಇದನ್ನು ದೊಡ್ಡಮಟ್ಟದ ಅಧಿಕಾರಿಗಳು ಪ್ರಜಾಪ್ರತಿನಿಧಿಗಳಿಗೆ ತಿಳಿಸಬೇಕು. ಅವರು ಸಂಸತ್ತಿನಲ್ಲಿ ಚರ್ಚಿಸಿ ನಿರ್ಧಾರ ತೆಗೆದುಕೊಳ್ಳಬೇಕು. ಆದರೆ ಐ.ಎಫ್.ಎಸ್. ಅಧಿಕಾರಿಗಳು ಆರು-ಮೂರು ತಿಂಗಳಿಗೊಬ್ಬರು ಬಂದು ಹೋಗುತ್ತಿರುವಾಗ ಇದರ ಜವಾಬ್ದಾರಿ ತೆಗೆದುಕೊಳ್ಳುವವರು ಯಾರು? ಎಂಬುದು ಸೋಲಿಗ ಮುಖಂಡರ ಪ್ರಶ್ನೆ.

ಸೋಲಿಗರ ಅನುಭವದ ಮಾತುಗಳ ಹಿನ್ನೆಲೆಯಲ್ಲಿ ಸಾಹಿತ್ಯ ಮತ್ತು ಅರಣ್ಯ ಸಂರಕ್ಷಣಾ ಕಾಯಿದೆಗಳನ್ನು ಪರಾಮರ್ಶಿಸಿದಾಗ ತಿಳಿದು ಬಂದ ಅಂಶಗಳು. ಅಮೇರಿಕಾ, ಸ್ವಿಡ್ಜರ್‌ಲ್ಯಾಂಡ್, ಆಸ್ಟ್ರೇಲಿಯಾ ಮತ್ತಿತರ ದೇಶಗಳಲ್ಲಿ ಅರಣ್ಯವನ್ನು ಅಭಿವೃದ್ಧಿಪಡಿಸಬೇಕಾದರೆ ಅದರ ಪಾಡಿಗೆ ಅದನ್ನು ಬಿಟ್ಟು ಬಿಡಬೇಕು ಎಂಬ ನಿಯಮ ಪಾಲಿಸುತ್ತಿದ್ದಾರೆ. ಹಾಗಾಗಿ ನಮ್ಮ ದೇಶದ ಅರಣ್ಯ ಸಂರಕ್ಷಣಾ ಕಾಯಿದೆಯಲ್ಲಿ ಇದನ್ನೇ ಮುಖ್ಯವಾಗಿ ಹೇಳಲಾಗುತ್ತಿದೆ. ಇಂತಹ ಕಾಯಿದೆಯಿಂದ ತರಗು ಬೆಂಕಿ ಹಾಕುವ ವೈಜ್ಞಾನಿಕ ವಿಧಾನಕ್ಕೆ ಮಾರಕವಾಗಿದೆ. ಆದರೆ ಭಾರತದ ಪರಿಸರದಲ್ಲಿ "ಅರಣ್ಯಗಳನ್ನು ಬೆಳೆಸಬೇಕೆ ಹೊರತು ತಂತಾನೆ ಬೆಳೆಯಗೊಡಬಾರದು"[೧೫] ಕೆಲವು ದೇಶಗಳಲ್ಲಿ ಅರಣ್ಯವನ್ನು ಖಾಸಗಿಯವರ ವಶಕ್ಕೆ ನೀಡಲಾಗಿದೆ. ಇಲ್ಲಿ ಕಾಡಿನ ಯಾವುದೇ ಜೀವ ವೈವಿಧ್ಯಕ್ಕೆ ಹಾನಿಮಾಡದೆ ಅರಣ್ಯ ಉಪ ಉತ್ಪನ್ನಗಳನ್ನು ಸಂಗ್ರಹಿಸಿ ಆದಾಯ ಗಳಿಸಿಕೊಳ್ಳಬಹುದಾಗಿದೆ. ಇದಕ್ಕೆ ಪ್ರತಿಯಾಗಿ ಅರಣ್ಯ ಸಂರಕ್ಷಣೆ ಅವರ ಜವಾಬ್ದಾರಿಯಾಗಿರುತ್ತದೆ. ಇನ್ನೂ ಕೆಲವು ದೇಶಗಳಲ್ಲಿ ಗಣಿಗಾರಿಕೆ ಮಾಡಬೇಕಾದರೆ ಅಲ್ಲಿ ಮೇಲಿನ ಪದರವನ್ನು ಮೊದಲು ಸಂಗ್ರಹಿಸಿ ನಿರ್ದಿಷ್ಟ ಅವಧಿಯಲ್ಲಿ ಗಣಿಗಾರಿಕೆ ಮುಗಿದ ಮೇಲೆ ನೆಲವನ್ನು ಸಮತಟ್ಟು ಮಾಡಿ ಈ ಮೊದಲು ಸಂಗ್ರಹಿಸಿಟ್ಟಂತಹ ಮೇಲಿನ ಪದರವನ್ನು ಯಥಾಸ್ಥಿತಿ ಹರಡಲಾಗುತ್ತದೆ. ಮತ್ತು ಸಸಿಗಳನ್ನು ನೆಟ್ಟು ಆರೈಕೆ ಮಾಡಲಾಗುತ್ತದೆ. ಇದು ಕಾಡನ್ನು ಅಭಿವೃದ್ಧಿಪಡಿಸುವ ವೈಜ್ಞಾನಿಕ ಪದ್ಧತಿ. ನಮ್ಮ ದೇಶದಲ್ಲಿ ಇಂತಹ ಪದ್ಧತಿ ಬಳಸುವಷ್ಟು ಇಚ್ಚಾಶಕ್ತಿಯುಳ್ಳ ಯಾವುದೇ ಗಣಿ ಗುತ್ತಿಗೆದಾರರು ಸಿಗುವುದಿಲ್ಲ. ಇಂತಹ ಮನಸ್ಥಿತಿ ಇರುವವರಿಗೆ ಗಣಿಗಾರಿಕೆ ಮಾಡಲು ಅವಕಾಶ ದೊರೆಯದು. ಅಥವಾ ವ್ಯವಸ್ಥೆ ಬಿಡದು. ಇಂತಹ ಸಂದರ್ಭದಲ್ಲಿ ತರಗು ಬೆಂಕಿಯಂತಹ ವೈಜ್ಞಾನಿಕ ಪದ್ದತಿಯನ್ನು ಅಳವಡಿಸಿಕೊಂಡು ಅರಣ್ಯ ಅಭಿವೃದ್ಧಿಪಡಿಸುವ ಜರೂರತ್ತು ಇದೆ. 'ಕಾಡು ಮತ್ತು ಕೃಷಿಗೆ ಯುಗಯುಗಗಳಿಂದ ಈ ಸಸ್ಯಕೋಟಿ ನಿಸ್ವಾರ್ಥ ಸೇವೆ ಸಲ್ಲಿಸುತ್ತಾ ಬಂದಿದೆ. ಯಾವುದೇ ನೆಲದಲ್ಲಿ ಜೀವಕಳೆ ಪುಟಿಯಬೇಕಾದರೆ ಮಣ್ಣಿನಲ್ಲಿ ಕಸುವು ಇದ್ದರೆ ಮಾತ್ರ ಸಾಧ್ಯ, ಶತಕಗಳಿಂದ ನೆಲಕ್ಕುರುಳಿದ ಎಲೆ, ತೊಗಟೆ, ಟೊಂಗೆ, ಬೊಡ್ಡೆ, ಜೊತೆಗೆ ಪಶು-ಪಕ್ಷಿಗಳ ಮೃತದೇಹಗಳನ್ನು ಬಳಸಿ ಅತಿ ಸೂಕ್ಷ್ಮ ಜೀವಾಣುಗಳು ನಿರ್ಮಿಸಿದ ಕಸುವು ಸಸ್ಯ ಜೀವನಕ್ಕೆ ಅತ್ಯವಶ್ಯಕ. ಕೇವಲ ಒಂದು ಇಂಚು ಪದರು ಉಳ್ಳ, ಸತ್ವ ಸಿದ್ದವಾಗಲು ಒಂದು ಸಹಸ್ರ ವರ್ಷಗಳಾದರೂ ಬೇಕು ಎಂದರೆ ಅದರ ಉತ್ಪಾದನಾ ವೇಗದ ಕಲ್ಪನೆ ಬರುವಂತಿದೆ."[೧೬]

ಆದಿವಾಸಿಗಳ ತರಗು ಬೆಂಕಿಯ ಜ್ಞಾನದ ಬಗೆಗೆ ಅರಣ್ಯ ಇಲಾಖೆಯ ಕೆಳಹಂತದ ಸಿಬ್ಬಂದಿಗಳ ಮನೋಭಾವ ಬಹಳ ವಿಭಿನ್ನವಾಗಿದೆ. ಅವರು ಬೆಂಕಿ ಹಾಕುವುದು ಸ್ವಾರ್ಥಕ್ಕಾಗಿ. ಇದರಿಂದ ಕಾಡು ಪ್ರಾಣಿಗಳು ದೂರದಿಂದಲೇ ಕಾಣುತ್ತವೆ. ಆಗ ಸುಲಭವಾಗಿ ತಪ್ಪಿಸಿಕೊಳ್ಳಬಹುದು ಎಂಬ ಲೆಕ್ಕಾಚಾರವಿದೆ ಎಂದು ಹೇಳುತ್ತಾರೆ. ಅಲ್ಲದೆ

ಅವರಿಗೆ ಸ್ವಚ್ಚಂದವಾಗಿ ತಿರುಗಾಡಲು ಯಾವುದೇ ಅಡ್ಡಿ ಆತಂಕಗಳು ಇರುವುದಿಲ್ಲ. ಎಂಬ ವಾದ ಮಂಡಿಸುತ್ತಾರೆ. ಜೊತೆಗೆ ಲಂಟಾನ ಗಿಡದ ಚಿಗುರು ಮತ್ತು ಹಣ್ಣನ್ನು ಪ್ರಾಣಿ-ಪಕ್ಷಿಗಳು ತಿನ್ನಲು ಪ್ರಾರಂಬಿಸಿವೆ. ಇದು ಪ್ರಾಣಿಗಳು ಅವಿತು ಕೊಳ್ಳಲು ಸಹಕಾರಿಯಾಗಿದೆ. ಎಂಬ ವಾದ ಮಂಡಿಸುತ್ತಾರೆ. ವನ್ಯ ತಜ್ಞರು ಹೇಳುವುದೇ ಬೇರೆ. ಆಹಾರದಲ್ಲಿ ವ್ಯತ್ಯಾಸವಾದರೆ ಮುಂದಿನ ದಿಗಳಲ್ಲಿ ಜೀವಿ ಪ್ರಬೇಧದಲ್ಲಿ ಲೋಪಗಳು ಕಂಡು ಬರುವ ಸಾಧ್ಯತೆ ಇದೆ. ಇಂತಹ ವಾದ ಪ್ರತಿವಾದಗಳ ಮಧ್ಯೆ ದಿನೇ ದಿನೇ ನಾವು ಕಾಡನ್ನು ಕಳೆದುಕೊಳ್ಳಬೇಕಾಗಿದೆ.

### ೨.೨.೫.೫. ಆದಿವಾಸಿಗಳ ಇತರೆ ಕೆಲವು ಪಾರಂಪರಿಕ ಜ್ಞಾನಗಳು

ಆದಿವಾಸಿಗಳು ಹಲವು ರೀತಿಯ ವಿಶೇಷ ಜ್ಞಾನಕ್ಕೆ ಸಾಕ್ಷಿಯಾಗಿದ್ದಾರೆ. ಅಣಲೆ ಬೀಜ ಸಸಿಯಾಗಲು ದನಕರುಗಳು ಅದರ ಮೇಲೆ ಕಾಲಿಡಬೇಕು. ಇದರಿಂದ ಕಾಲ್ಗೊರಸಿನ ಭಾರಕ್ಕೆ ಬೀಜದ ಕವಚ ಒಡೆಯುತ್ತದೆ. ಆ ಬೀಜಗಳು ಮಳೆ ಬಿದ್ದಾಕ್ಷಣ ಮೊಳಕೆಯಾಗುತ್ತವೆ. ಇದು ಬ್ರಹ್ಮಗಿರಿಯ ಕೆಂಚಜ್ಜ ಕಂಡುಕೊಂಡ ಜ್ಞಾನ. ಹಾಗೆಯೇ, ರಕ್ತ ಹೊನ್ನೆ (ಬೆಟ್ಟದ ಹೊನ್ನೆ) ಮರವನ್ನು ಪುಸ್ತಕ ಓದಿ ಸಸಿ ಮಾಡಿ ನೆಟ್ಟು ಬೆಳೆಸಬಹುದು. ಆದರೆ ನಾವು ನೆಟ್ಟ ಸಸಿ ಮರವಾಗುವ ಖಾತ್ರಿಯಿಲ್ಲ. ಏಕೆಂದರೆ ಹೊನ್ನೆ ಸೊಪ್ಪು ದನಕರು, ಕುರಿ, ಜಿಂಕೆಗಳಿಗೆ ಇಷ್ಟವಾದ ಆಹಾರ. ಬಯಲಿನಲ್ಲಿ ನೆಟ್ಟ ಗಿಡಗಳನ್ನು ಕ್ಷಣಾರ್ಧದಲ್ಲಿ ತಿಂದು ನಾಶಮಾಡುತ್ತವೆ. ಆದರೆ ನಿಸರ್ಗದಲ್ಲಿ ಈ ಹೊನ್ನೆ ಬೆಳೆಯಲು ಗೊಣಗಲು ಮುಳ್ಳುಕಂಟಿ ಸಹಾಯ ನೀಡುತ್ತದೆ. ಮರದಲ್ಲಿ ಒಣಗಿದ ಹೊನ್ನೆ ಬೀಜಗಳು ಗಾಳಿಯಲ್ಲಿ ಹಾರಿ ಅದರಲ್ಲಿ ಬೀಳುತ್ತವೆ. ಮಳೆ ಬಿದ್ದಾಗ ಮೊಳಕೆಯಾಗುತ್ತವೆ. ಕಂಟಿಯ ಬುಡದಲ್ಲಿರುವ ಮಣ್ಣು ಫಲವತ್ತಾಗಿರುತ್ತದೆ. ಹಾಗಾಗಿ ಗಿಡ ಚೆನ್ನಾಗಿ ಬೆಳೆಯುತ್ತದೆ. ಮುಳ್ಳುಕಂಟಿಯ ನಡುವೆ ಗಿಡವಿರುವುದರಿಂದ ದನಕರು, ಕಾಡು ಪ್ರಾಣಿಗಳಿಗೆ ಇದನ್ನು ತಿನ್ನಲಾಗುವುದಿಲ್ಲ. ಮುಳ್ಳಿನ ಗಿಡ ನೈಸರ್ಗಿಕ ರಕ್ಷಕನಾಗಿ ಕಾರ್ಯ ನಿರ್ವಹಿಸುತ್ತದೆ. ಇಂತಹ ಜ್ಞಾನ ಅರಣ್ಯ-ಕೃಷಿ ಅಧ್ಯಯನ ಶಿಸ್ತಿನಲ್ಲಿ ಪದವಿ ಪಡೆದವರಿಗೂ ಇರಲಾರದು. ಇನ್ನು ಮನುಷ್ಯನ ನಾಲಿಗೆ ತೀರದ ಬಯಕೆಗಳಿಂದ ಕೂಡಿದೆ "ಬೆಟ್ಟದ ನೆಲ್ಲಿ ತಿಂದು ನೀರು ಕುಡಿದಂತೆ ಅರಣ್ಯ ದೇಸೀ ಜ್ಞಾನದ ಸ್ವಾದವಿದೆ. ಒಮ್ಮೆ ನೆಲ್ಲಿ ತಿಂದು ನೀರು ಕುಡಿದು ಸವಿ ಸವಿ ಅನುಭವಿಸಿದವರು ಯಾವತ್ತೂ ಮರೆಯುವುದಿಲ್ಲ. ಮಧುನಾಶಿನಿಯ ಎಲೆ ತಿಂದು ಸಕ್ಕರೆ ತಿಂದರೆ ಸಕ್ಕರೆಯ ಸಿಹಿ ರುಚಿ ಮಾಯವಾಗುತ್ತದೆ."[೧೭]

ಆಧುನಿಕ ಮತ್ತು ನಾಗರೀಕ ಜಗತ್ತಿಗೆ ಕಾಲಿಟ್ಟರೆ ಬಾಟಲಿ ನೀರಿನದ್ದೇ ಕಾರುಬಾರು, "ಬಾಟಲಿ ನೀರು ಖಾಲಿಯಾಗಿ ಹನಿ ನೀರಿಲ್ಲದೆ ಬಾಯಾರಿದಾಗ ನಾವು ಕಂಗಾಲಾಗುತ್ತೇವೆ. ತಕ್ಷಣ ಕತ್ತಿಯಿಂದ ಕುಮಸಲು ಬಳ್ಳಿಯನ್ನೋ, ಮತ್ತಿ ಮರದ ಗಂಟನ್ನೋ ಸೀಳಿ ಅದರೊಳಗಿನ ನೀರು ಕುಡಿಯುವ ಪರಿಣಿತಿ ವನವಾಸಿಗರಿಗಿದೆ."[೧೮]

ಹಾಗೆಯೇ "ಹೊಳೆಗೇರು ಮರ ಕಡಿದರೆ ಮೈಯೆಲ್ಲ ಬಾವು ಬರುತ್ತದೆ. ಅದರ ರಸ ತಾಗಿದಲ್ಲಿ ಹುಣ್ಣಾಗುತ್ತದೆ. ಮೃದು ಕಟ್ಟಿಗೆಯ ಈ ಮರದ ಕಟಾವಿಗೆ ನಮ್ಮ ಹಳ್ಳಿಗರು ಉಪಾಯ ಹುಡುಕಿದ್ದರು. ಮರದ ತಿರುಳಿನ ಪುಟ್ಟ ಚಕ್ಕೆಯನ್ನು ಬಾಯಲ್ಲಿಟ್ಟುಕೊಂಡು ಮರ ಕಡಿದರೆ ದೇಹಕ್ಕೆ ಯಾವ ಸಮಸ್ಯೆಯೂ ಆಗುವುದಿಲ್ಲ. ದೇಹಕ್ಕೆ ಯಾವುದು ವಿಷವೋ ಅದನ್ನು ಸ್ವಲ್ಪ ಸ್ವಲ್ಪ ಬಳಸುವುದರಿಂದ ವಿಷ ರೋಗಗಳಿಗೆ ಲಸಿಕೆ ಹಾಕುವ ಕ್ರಮವಿದು. ಇಲ್ಲಿ ಚಕ್ಕೆಯ ರಸ ದೇಹಕ್ಕೆ ಸೇರುವುದರಿಂದ ವಿಷನಿರೋಧಕ ಶಕ್ತಿ ಬೆಳೆಯುತ್ತದೆ. ಅಕ್ಷರದ ಅರಿವಿಲ್ಲದ ಅಜ್ಜಂದಿರಲ್ಲಿ ಮರ ಬಳಕೆಯ ರಹಸ್ಯ ಅಡಗಿದೆ."[೧೯]
'ಕಳೆದ ೪೦ ವರ್ಷಗಳಿಂದ ಅಭಯಾರಣ್ಯಗಳಲ್ಲಿ ಪ್ರಕೃತಿಯಲ್ಲಿ ಸಹಜವಾಗಿ ವಿಲೀನವಾಗಲು ಬಿಟ್ಟಿರುವ ಒಣಗಿದ ಬಿದಿರು ಮೆಳೆಗಳು, ಮರ ಮುಟ್ಟುಗಳನ್ನು ತೆಗೆಸದೆ ಇರುವುದರಿಂದ ಅವುಗಳ ಪ್ರಮಾಣ ದಟ್ಟವಾಗಿದ್ದು ಸ್ವಲ್ಪ ಬೆಂಕಿ ಬಿದ್ದರೂ ಹೊತ್ತಿ ಉರಿಯುವ ಸ್ಥಿತಿಯಲ್ಲಿರುತ್ತವೆ. ದಟ್ಟವಾಗಿ ಬೀಳುವ ತೇಗದ ತರಗಲೆಗಳ ರಾಶಿ ಪೆಟ್ರೋಲಿನಂತಿರುತ್ತದೆ. ಅವುಗಳು ಪ್ರಕೃತಿಯಲ್ಲಿ ಲೀನವಾಗುತ್ತವೆ, ಅವುಗಳನ್ನು ತೆಗೆಸುವ, ಮುನ್ನೆಚ್ಚರಿಕೆ ಕ್ರಮವಾಗಿ ಸುಡುವ ಅವಶ್ಯಕತೆ ಇಲ್ಲ ಎಂದು ವಾದಿಸುತ್ತಾ ಕುಳಿತಿರುವ ಅಭಯಾರಣ್ಯಗಳ ಪರಿಪಾಲಕರ ಧೋರಣೆಯೇ ಇಂದಿನ ಭಯಾನಕ ಬೆಂಕಿಗೆ ಕಾರಣ. ಇದರಿಂದಲೇ ಸಣ್ಣ, ವಯಸ್ಸಾದ ಪ್ರಾಣಿಗಳು, ಪಕ್ಷಿಗಳು, ಅವುಗಳ ಮೊಟ್ಟೆ ಗೂಡು ಮತ್ತು ಸೂಕ್ಷ್ಮಕ್ರಿಮಿಕೀಟಗಳು ಹಾಗೂ ಸಸ್ಯರಾಶಿಯ ಬೀಜಗಳು, ಸಸಿಗಳೆಲ್ಲ ಕಾಳ್ಗಿಚ್ಚಿಗೆ ಸಿಕ್ಕಿ ನಾಶವಾಗಿವೆ. ಬಿದಿರು ಲಡ್ಡಾಗಿ ಮಣ್ಣಿನಲ್ಲಿ ಸೇರಿಹೋಗಲು ೧೫ ವರ್ಷ, ಕಟ್ಟಿಗೆ ಗೆದ್ದಲು ತಿಂದು ಮಣ್ಣಾಗಲು ೨೦ ರಿಂದ ೨೫ ವರ್ಷಗಳು ಬೇಕು. ಅಲ್ಲಿಯವರೆಗೆ ಯಾವ ಅಭಯಾರಣ್ಯವನ್ನೂ ಬೇಸಿಗೆಯಲ್ಲಿ ಬೆಂಕಿ ಬೀಳದಂತೆ ರಕ್ಷಿಸಲು ಸಾಧ್ಯವೇ ಎಂಬುದನ್ನು ಈ ಪರಿಪಾಲಕರು ಯೋಚಿಸಬೇಕು. ಹಾಗೆಯೇ ಒಣಗಿದ ಬಿದಿರು, ಕಟ್ಟಿಗೆ ಬೆಂಕಿಗೆ ಆಹುತಿಯಾಗದೆ ಹೇಗೆ ನಿಸರ್ಗದಲ್ಲಿ ಸೇರಿ ಹೋಗುತ್ತದೆ ಎಂಬುದನ್ನು ಇವರು ಮನಗಾಣಬೇಕಾಗುತ್ತದೆ.'[೨೦]

ಇನ್ನು ವಿಜ್ಞಾನ ಗೊತ್ತಿರುವ ನಾಗರೀಕ ಜಗತ್ತಿನ ಪ್ರಕಾರ ಮೇಲಿನಿಂದ ಬಿದ್ದ ವಸ್ತು ಕೆಳಗೆ ಜಾರುತ್ತಾ ಸಾಗುತ್ತದೆ. ಇಲ್ಲಿಯೂ ಕೂಡ ಹಾಗೆಯೇ ಕೌಲು ಫಲಗಳು ಗುಡ್ಡದ ಮೇಲಿನಿಂದ ಬಿದ್ದು ಕೆಳಕ್ಕೆ ಜಾರುತ್ತವೆ. ಆದರೆ ಅವು ಪುನಃ ಗುಡ್ಡದ ತುದಿಯನ್ನು ತಲುಪುವುದು ಒಂದು ಪ್ರಕೃತಿಯ ಹೊಂದಾಣಿಕೆಗೆ ಹಿಡಿದ ಕೈಗನ್ನಡಿ. ಹಸಿರು ಕೌಲು ಫಲಗಳು ಚೆಂಡಿನ ಗಾತ್ರ ಇರುತ್ತವೆ. ಮೆ-ಜೂನ್‌ದಲ್ಲಿ ಮಲೆನಾಡಿನ ಎಲ್ಲೆಡೆ ಇವನ್ನು ಕಾಣಬಹುದು. ನೆಲಕ್ಕೆ ಬಿದ್ದಾಕ್ಷಣ ಇಳಿಜಾರಿನತ್ತ ಉರುಳುತ್ತಾ ಹೋಗುತ್ತವೆ. ಹಾಗಂತ ಇವು ನದಿ, ಹಳ್ಳ, ಕೋಳ್ಳದ ದಂಡೆಯಲ್ಲಿ ಬೆಳೆಯದು. ಆದರೆ ಗುಡ್ಡದ ಭೂಮಿಯಲ್ಲಿ ಕೌಲು ಗಿಡ ಚೆನ್ನಾಗಿ ಬೆಳೆಯುತ್ತದೆ. ಹಾಗಾದರೆ ಇದು ಮೆಲಕ್ಕೆ ತೆರಳಿದ್ದಾದರೂ ಹೇಗೆ? ಬೆಟ್ಟಕುರುಬರ ವಿಠ್ಠಲ ನಾಣಚ್ಚಿ ಹೇಳುವ ಪ್ರಕಾರ ಕಾಡುಕೋಣಗಳು ಇದನ್ನು ತಿನ್ನುತ್ತವೆ. ಮತ್ತು ಗುಡ್ಡದ ತುದಿಗೆ ಹುಲ್ಲು ಮೇಯಲು ಹೋದಾಗ ಹಾಕಿದ ಸಗಣಿಯಲ್ಲಿ ಬೀಜಗಳು

ಅಲ್ಲಿ ಬೀಳುತ್ತವೆ. ಹುಲ್ಲು ಬೆಳೆಯುವ ಗುಡ್ಡಗಳಿಗೆ ಬೇಸಿಗೆಯಲ್ಲಿ ಪ್ರತೀ ವರ್ಷ ಬೆಂಕಿ ತಗಲುತ್ತದೆ. ಕೌಲು ಗಿಡದ ತೊಗಟೆ ದಪ್ಪವಾಗಿರುತ್ತದೆ, ಇದಕ್ಕೆ ಬೆಂಕಿ ಸಹಿಷ್ಣು ಗುಣವಿದೆ. ಹೀಗಾಗಿ ಕಾಡುಪ್ರಾಣಿಯ ಸಹಾಯದಿಂದ ಗುಡ್ಡದಲ್ಲಿ ಬಿದ್ದ ಬೀಜಗಳು ಮರವಾಗಿ ಬೆಳೆಯುತ್ತವೆ. ಅರಣ್ಯ ಇಲಾಖೆ ನಂಬಿಕೆಯೆಂದರೆ "ಗುಂಡಿ ತೋಡಿ ಗಿಡ ಬೆಳೆಸುವುದು ಮಾತ್ರ ಅರಣ್ಯೀಕರಣ ಎಂದು ಕಣ್ಮುಚ್ಚಿ ಸಾಗಿದವರು. ಹೀಗಾಗಿ ನೈಸರ್ಗಿಕ ಸಸ್ಯ ಬೆಳೆಸಲು ಧಾರ್ಮಿಕ, ಸಮುದಾಯ ನಂಬಿಕೆಗಳಿಂದ ಸಂರಕ್ಷಣೆ ಪಾಠ ಹೇಳಿದ್ದ ದೇಸೀ ಪ್ರಜ್ಞೆ ಈಗ ಹಿಂದೆ ಸರಿದಿದೆ."[೨೬] ಹಾಗಾಗಿ ಅರಣ್ಯ ಅಭಿವೃದ್ಧಿಯೆಂಬುದು ಮರೀಚಿಕೆಯಾಗಿದೆ.

### ೨.೩. ಆದಿವಾಸಿಗಳ ಪ್ರಸ್ತುತ ಜೀವನ ಮತ್ತು ಅವಶ್ಯಕತೆಗಳು

ಅಧ್ಯಯನ ಕ್ಷೇತ್ರದಲ್ಲಿನ ಆದಿವಾಸಿಗಳ ಪ್ರಸ್ತುತ ಜೀವನ ವಿಧಾನ ಅವರ ಬೇಡಿಕೆಗಳನ್ನು ತಿಳಿದುಕೊಳ್ಳುವುದು ಅವಶ್ಯಕವಾಗಿದೆ. ಅಂದಾಗ ಮಾತ್ರ ಸಂಶೋಧನೆಗೆ ಆಯ್ದುಕೊಂಡ ಸಮುದಾಯದವರ ನೈಜ ಸ್ಥಿತಿ ತಿಳಿಯಲು ಸಾಧ್ಯ. ಇದಕ್ಕಾಗಿ ಹಾಡಿ/ಪೋಡು/ಕಾಲೊನಿಗಳು ಮತ್ತು ಪುನರ್ವಸತಿ ಕೇಂದ್ರಗಳ ಮೂಲಸೌಲಭ್ಯಗಳ ಮಾಹಿತಿ ಪಡೆಯಲಾಗಿದೆ. ಅಲ್ಲಿನ ಆದಿವಾಸಿಗಳ ನಿತ್ಯ ಬದುಕಿಗೆ ಬೇಕಾದ ಅವಶ್ಯಕತೆಗಳ ವಾಸ್ತವ ಚಿತ್ರಣ ಸಂಗ್ರಹಿಸಲಾಗಿದೆ. ಇದಕ್ಕಾಗಿ ಪ್ರಾಥಮಿಕ ದತ್ತಾಂಶಗಳನ್ನು ಬಳಸಲಾಗಿದೆ. ಹಾಗೆಯೇ ಅರಣ್ಯ ಇಲಾಖೆ, ಸಮಾಜಕಲ್ಯಾಣ ಇಲಾಖೆ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಗಳಿಗೆ ಮಾಹಿತಿ ಹಕ್ಕು ಕಾಯಿದೆ ಪ್ರಕಾರ ಅರ್ಜಿ ಸಲ್ಲಿಸಿ ಮಾಹಿತಿ ಸಂಗ್ರಹಿಸಲಾಗಿದೆ.

#### ೨.೩.೧. ಅಧ್ಯಯನಕ್ಕೆ ಆಯ್ದುಕೊಂಡ ಹಾಡಿ/ಪೋಡು/ಕಾಲೊನಿಗಳ ಮಾಹಿತಿ

ಪ್ರಸ್ತುತ ಅಧ್ಯಯನಕ್ಕೆ ಮೈಸೂರು ಜಿಲ್ಲೆಯ ೫ ಮತ್ತು ಚಾಮರಾಜನಗರ ಜಿಲ್ಲೆಯ ೪ ತಾಲ್ಲೂಕುಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ.

**ಕೋಷ್ಟಕ: ೨.೦೧: ಅಧ್ಯಯನಕ್ಕೆ ಆಯ್ದುಕೊಂಡ ಹಾಡಿ/ಪೋಡು/ಕಾಲೊನಿಗಳ ವಿವರ**

| 1 | 2 | 3 | 4 | 5 | 6 | 7 |
|---|---|---|---|---|---|---|
| ೧ | ೧ | ೧ | ಗುಂಚನಹಳ್ಳಿ ಕಾಲೋನಿ | ೭೨ | ೨೭೭ | ೧ |
| ೨ | ೧ | ೨ | ಮುತ್ತೂರು ಕಾಲೋನಿ | ೭೨ | ೨೬೮ | ೨ |
| ೩ | ೧ | ೨ | ಮನುಗನಕೆರೆ ಕಾಲೋನಿ | ೧೨ | ೫೨ | ೩ |
| ೪ | ೧ | ೨ | ಅಬ್ಬಳತಿ–ಎ | ೪೩ | ೧೬೧ | ೩ |
| ೫ | ೧ | ೨ | ವರ್ತಿ ಕಾಲೋನಿ/ಹಳೆಕೆರೆ | ೩೪ | ೧೦೬ | ೩ |
| ೬ | ೧ | ೨ | ಚೌಕೂರು | ೧೦ | ೩೮ | ೩ |
| ೭ | ೧ | ೨ | ಹಂದಿಗುಡ್ಡಕಾವಲ್ | ೬೮ | ೨೫೬ | ೩ |
| ೮ | ೧ | ೩ | ಕೊಟ್ಟಿಗೆ ಕಾವಲ್ | ೮೨ | ೨೯೯ | ೩ |

| ೯ | ೧ | ೩ | ಕಾಳೇನಹಳ್ಳಿ ಕಾಲೋನಿ | ೨೧ | ೬೯ | ೩ |
|---|---|---|---|---|---|---|
| ೧೦ | ೧ | ೩ | ಕೊಳವಿಗೆ | ೧೦೦ | ೩೫೧ | ೩ |
| ೧೧ | ೧ | ೩ | ನಾಗಾಪುರ-೫ | ೪೭ | ೧೫೧ | ೨+೩+೪ |
| ೧೨ | ೧ | ೩ | ಮಾದಯ್ಯನ ಕಟ್ಟೆ | ೨೦ | ೮೫ | ೩ |
| ೧೩ | ೧ | ೩ | ನೇರಳಕುಪ್ಪೆ ಬಿ | ೫೨ | ೧೫೮ | ೩ |
| ೧೪ | ೧ | ೩ | ಬೀರನಹೊಸಳ್ಳಿ | ೬೫ | ೨೨೩ | ೩ |
| ೧೫ | ೧ | ೩ | ಭರತವಾಡಿ | ೬೨ | ೧೯೩ | ೩ |
| ೧೬ | ೧ | ೩ | ಪೆಂಜಹಳ್ಳಿ ಕಾಲೋನಿ | ೧೬ | ೭೮ | ೩ |
| ೧೭ | ೧ | ೩ | ಬೋಳನಹಳ್ಳಿ | ೧೮ | ೫೭ | ೩ |
| ೧೮ | ೧ | ೩ | ಮಾದಳ್ಳಿಹಾಡಿ | ೩೪ | ೧೧೭ | ೩ |
| ೧೯ | ೧ | ೪ | ಉದ್ಬೂರು ಎ & ಬಿ | ೮೫ | ೨೯೫ | ೨+೪ |
| ೨೦ | ೧ | ೪ | ಬಳ್ಳೇಹಾಡಿ | ೧೧೮ | ೪೨೦ | ೩ |
| ೨೧ | ೧ | ೪ | ಮೂಲೆಯೂರು ಹಾಡಿ | ೧೫ | ೩೭ | ೩+೪ |
| ೨೨ | ೧ | ೪ | ಮಚ್ಚೂರು ಹಾಡಿ | ೨೪ | ೪೭ | ೪ |
| ೨೩ | ೧ | ೪ | ಸೇಬಿನಕೊಲ್ಲಿ | ೧೬ | ೩೯ | ೩ |
| ೨೪ | ೧ | ೪ | ಮನೆಮೂಲೆಹಾಡಿ | ೧೪ | ೨೯ | ೩ |
| ೨೫ | ೧ | ೪ | ದೊಣ್ಣೇಮಾದನ ಹಾಡಿ | ೨೪ | ೯೬ | ೨ |
| ೨೬ | ೧ | ೪ | ಬ್ರಹ್ಮಗಿರಿ ಬಿ | ೯೩ | ೪೭೫ | ೨+೩ |
| ೨೭ | ೧ | ೪ | ಎಲಚಿಕಟ್ಟೇ ಹಾಡಿ | ೨೦ | ೭೭ | ೨ |
| ೨೮ | ೧ | ೪ | ಜಾಗನಕೋಟೆ | ೫೩ | ೧೮೬ | ೨+೩ |
| ೨೯ | ೧ | ೪ | ದೇವನಹಾಡಿ | ೨೭ | ೧೦೨ | ೩ |
| ೩೦ | ೧ | ೪ | ಪ್ರಭಾನಗರ | ೬೨ | ೨೨೩ | ೩ |
| ೩೧ | ೧ | ೪ | ಬೀಮನಹಳ್ಳಿ | ೬೪ | ೩೦೩ | ೩ |
| ೩೨ | ೧ | ೪ | ಬಿ.ಮಟ್ಟಕೆರೆ | ೪೪ | ೧೬೨ | ೨ |
| ೩೩ | ೧ | ೪ | ಕೂಡಿಗೆ ಎ & ಬಿ | ೫೫ | ೨೦೬ | ೨ |
| ೩೪ | ೧ | ೪ | ನೆಮ್ಮನಹಳ್ಳಿ ೧ & ೨ | ೬೦ | ೨೨೫ | ೨ |
| ೩೫ | ೧ | ೪ | ಚನ್ನಗುಂಡಿ ಕಾಲೋನಿ | ೭೨ | ೨೮೨ | ೨ |
| ೩೬ | ೧ | ೪ | ಮೇಟಿಕುಪ್ಪೆ | ೧೨೦ | ೪೮೭ | ೩ |
| ೩೭ | ೧ | ೪ | ಕೆರೆಹಾಡಿ (ಮೊತ್ತ) | ೧೯ | ೪೪ | ೩ |
| ೩೮ | ೧ | ೪ | ಆನಗತ್ತಿಹಾಡಿ | ೧೫ | ೫೨ | ೩ |
| ೩೯ | ೧ | ೪ | ಬೊಮ್ಮಲಪುರ | ೨೦ | ೧೦೨ | ೩ |
| ೪೦ | ೧ | ೪ | ಮಜ್ಜನಕುಪ್ಪೆ | ೨೬ | ೯೭ | ೩ |
| ೪೧ | ೧ | ೫ | ನಾಗಣಾಪುರ ಕಾಲೋನಿ | ೯೫ | ೩೪೫ | ೧+೨ |
| ೪೨ | ೨ | ೬ | ಕನ್ನೇರಿ ಕಾಲೋನಿ | ೧೦೦ | ೪೮೦ | ೧ |
| ೪೩ | ೨ | ೬ | ಬೆಲ್ಲತ್ತ | ೩೪ | ೨೦೦ | ೧ |
| ೪೪ | ೨ | ೬ | ಅಟ್ಟುಗುಳಿಪುರಕಾಲೋನಿ | ೩೭ | ೨೧೦ | ೧ |
| ೪೫ | ೨ | ೬ | ಬೂದಿಪಡಗ | ೧೦೬ | ೫೦೧ | ೧ |
| ೪೬ | ೨ | ೬ | ಬೇಡಗುಳಿ ಕಾಲೋನಿ | ೮೦ | ೪೦೬ | ೧ |
| ೪೭ | ೨ | ೭ | ಮುತ್ತುಗದಗದ್ದೆ ಪೋಡು | ೭೦ | ೨೭೦ | ೧ |

| ೪೮ | ೨ | ೭ | ಪುರಾಣಿಪೋಡು | ೧೦೨ | ೪೦೪ | ೧ |
|---|---|---|---|---|---|---|
| ೪೯ | ೨ | ೮ | ರಾಚಾಪ್ಪಾಜಿನಗರ | ೧೦೩ | ೪೧೨ | ೧ |
| ೫೦ | ೨ | ೮ | ದಂಟಳ್ಳಿ | ೪೩ | ೨೧೫ | ೧ |
| ೫೧ | ೨ | ೮ | ಕೋಣನಕೆರೆ | ೧೭೯ | ೧೦೨೫ | ೧ |
| ೫೨ | ೨ | ೮ | ದೋಣು ಮಡುವಿನದೊಡ್ಡಿ | ೩೦ | ೨೦೦ | ೧ |
| ೫೩ | ೨ | ೮ | ಕುಮದಿಕ್ಕಿ | ೨೮ | ೧೬೮ | ೧ |
| ೫೪ | ೨ | ೮ | ಗೊರಸಾಣೆ | ೭೫ | ೪೫೦ | ೧ |
| ೫೫ | ೨ | ೮ | ಸೂಳೆಕೋಬೆ | ೫೭ | ೩೪೨ | ೧ |
| ೫೬ | ೨ | ೮ | ಹುತ್ಯಲನತ್ತ | ೪೬ | ೩೦೦ | ೧ |
| ೫೭ | ೨ | ೮ | ಹಂಡೇಕುರುಬನ ದೊಡ್ಡಿ | ೪೦ | ೨೪೦ | ೧ |
| ೫೮ | ೨ | ೮ | ಕಾನಮಳೆದೊಡ್ಡಿ | ೪೫ | ೨೭೦ | ೧ |
| ೫೯ | ೨ | ೮ | ಬಸವನಪುರ | ೧೪ | ೮೪ | ೧ |
| ೬೦ | ೨ | ೮ | ಜೀರಿಗೆಗದ್ದೆ | ೫೩ | ೩೪೦ | ೧ |
| ೬೧ | ೨ | ೮ | ಕೆರೆದಿಂಬ | ೨೫ | ೧೫೫ | ೧ |
| ೬೨ | ೨ | ೮ | ಸೇಬಿನಕೋಬೆ | ೫೨ | ೩೧೨ | ೧ |
| ೬೩ | ೨ | ೮ | ಪುಟ್ಟೀರಮ್ಮನ ದೊಡ್ಡಿ | ೪೩ | ೨೭೫ | ೧ |
| ೬೪ | ೨ | ೮ | ಮುಳ್ಳಕಟ್ಟೆ | ೨೩ | ೨೪೮ | ೧ |
| ೬೫ | ೨ | ೯ | ಕುನಗಹಳ್ಳಿ | ೬೦ | ೩೦೦ | ೧ |
| ೬೬ | ೨ | ೯ | ಕಣಿಯನಪುರ ಕಾಲೋನಿ | ೧೩೫ | ೬೦೦ | ೧ |
| ೬೭ | ೨ | ೯ | ಗುಡ್ಡನಕೇರಿ | ೨೮ | ೧೧೦ | ೩ |
| ೬೮ | ೨ | ೯ | ನವಿಲುಗುಂದಿ | ೩೦ | ೧೨೦ | ೩ |
| ೬೯ | ೨ | ೯ | ಕುಂದಕೆರೆ | ೧೨ | ೭೦ | ೧ |
| ೭೦ | ೨ | ೯ | ಮಗುವಿನಹಾಡಿ | ೩೫ | ೧೧೦ | ೩ |
| | | | **ಒಟ್ಟು** | ೩೬೫೪ | ೧೯೬೦೮೭ | |

(ಮೂಲ: ಕ್ಷೇತ್ರ ಅಧ್ಯಯನ)

**ಸೂಚನೆ:** ೧– ಕ್ರಮ ಸಂಖ್ಯೆ, ೨–ಜಿಲ್ಲೆಗಳು, ೩–ತಾಲ್ಲೂಕುಗಳು, ೪–ಗಿರಿಜನ ಕಾಲೊನಿಯ ಹೆಸರು, ೫– ಕುಟುಂಬಗಳ ಸಂಖ್ಯೆ, ೬–ಒಟ್ಟು ಜನಸಂಖ್ಯೆ, ೭–ಆದಿವಾಸಿ ವಿಧ.

**ಸೂಚನೆ :** ಮೇಲಿನ ಕೋಷ್ಟಕದ ಕಾಲಂ ೨, ೩ ಮತ್ತು ೧೦ ರಲ್ಲಿ ಸಂಕೇತಿಕರಣ ಬಳಸಲಾಗಿದೆ. ಕಾಲಂ ೨ ರಲ್ಲಿ ಜಿಲ್ಲೆಗಳನ್ನು ಹೇಳಲಾಗಿದೆ. ಅಂದರೆ ೧=ಮೈಸೂರು, ೨= ಚಾಮರಾಜನಗರ. ಕಾಲಂ ೩ರಲ್ಲಿ ತಾಲ್ಲೂಕುಗಳನ್ನು ಹೇಳಲಾಗಿದೆ. ಅಂದರೆ ೧=ಮೈಸೂರು, ೨=ಪಿರಿಯಾಪಟ್ಟಣ, ೩=ಹುಣಸೂರು, ೪=ಹೆಗ್ಗಡದೇವನಕೋಟೆ, ೫=ನಂಜನಗೂಡು, ೬=ಚಾಮರಾಜನಗರ, ೭=ಯಳಂದೂರು, ೮=ಕೊಳ್ಳೇಗಾಲ, ೯=ಗುಂಡ್ಲು ಪೇಟೆ. ಕಾಲಂ ೧೦ ರಲ್ಲಿ ಆದಿವಾಸಿ ವಿಧ ಹೇಳಲಾಗಿದೆ. ಅಂದರೆ ೧=ಸೋಲಿಗರು, ೨=ಬೆಟ್ಟಕುರುಬರು, ೩=ಜೇನುಕುರುಬರು, ೪= ಯರವರು.

ಕೋಷ್ಟಕ ೨.೧ ರಲ್ಲಿ ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಹಾಡಿ/ಪೋಡು/ಕಾಲೊನಿಗಳ ವಿವರ ಕಾಣಬಹುದು. ಮೈಸೂರು ಜಿಲ್ಲೆಯ ಐದು ತಾಲ್ಲೂಕುಗಳಲ್ಲಿ ಒಟ್ಟು ೨೦೨ ಹಾಡಿ/ಪೋಡು/ಕಾಲೊನಿಗಳಿದ್ದು ಇದರಲ್ಲಿ ೨೦ ಪ್ರತಿಶತ ಹಾಡಿ/ಪೋಡು/ಕಾಲೊನಿಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಅಂದರೆ ಮೈಸೂರು ತಾಲ್ಲೂಕಿನಲ್ಲಿ ೦೧, ಪಿರಿಯಾಪಟ್ಟಣ ತಾಲ್ಲೂಕಿನಲ್ಲಿ ೦೬, ಹುಣಸೂರು

ತಾಲ್ಲೂಕಿನಲ್ಲಿ ೧೧, ಹೆಗ್ಗಡದೇವನಕೋಟೆಯಲ್ಲಿ ೨೨, ಮತ್ತು ನಂಜನಗೂಡು ತಾಲ್ಲೂಕಿನಲ್ಲಿ ೦೧. ಹಾಗೆಯೇ ಚಾಮರಾಜ ನಗರ ಜಿಲ್ಲೆಯಲ್ಲಿ ಒಟ್ಟು ೧೪೩ ಹಾಡಿ/ಪೋಡು/ಕಾಲೊನಿಗಳಲ್ಲಿ ೨೯ ಹಾಡಿಗಳನ್ನು ಅಂದರೆ ಚಾಮರಾಜನಗರ ತಾಲ್ಲೂಕಿನಿಂದ ೦೫, ಯಳಂದೂರು ತಾಲ್ಲೂಕಿನಿಂದ ೦೨, ಕೊಳ್ಳೆಗಾಲ ತಾಲ್ಲೂಕಿನಿಂದ ೧೬, ಮತ್ತು ಗುಂಡ್ಲು ಪೇಟೆ ತಾಲ್ಲೂಕಿನಿಂದ ೦೬ ಹಾಡಿ/ಪೋಡು/ಕಾಲೊನಿಗಳನ್ನು ಆಯ್ದು ಕೊಳ್ಳಲಾಗಿದೆ. ಒಟ್ಟು ೭೦ ಹಾಡಿಗಳಲ್ಲಿ ೨೭ ಸೋಲಿಗರ, ೦೭ ಬೆಟ್ಟ ಕುರುಬರ, ೨೯ ಜೇನುಕುರುಬರ, ೧ ಯರವವರು ವಾಸಿಸುವ ಹಾಡಿಯನ್ನು ಗಮನಿಸಬಹುದು. ಹಾಗೆಯೇ ಒಂದು ಹಾಡಿಯಲ್ಲಿ ಬೆಟ್ಟಕುರುಬರು, ಜೇನುಕುರುಬರು ಮತ್ತು ಯರವರು ಜೊತೆಯಾಗಿ ವಾಸಿಸುತ್ತಿದ್ದಾರೆ. ಬೆಟ್ಟಕುರುಬರು ಮತ್ತು ಯರವರು ಒಂದು ಹಾಡಿಯಲ್ಲಿದ್ದರೆ, ಜೇನುಕುರುಬರು ಮತ್ತು ಯರವರು ಮತ್ತೊಂದು ಹಾಡಿಯಲ್ಲಿದ್ದಾರೆ. ಎರೆಡು ಹಾಡಿಯಲ್ಲಿ ಬೆಟ್ಟಕುರುಬರು ಮತ್ತು ಜೇನುಕುರುಬರು ಜೊತೆಯಾಗಿ ವಾಸಿಸುತ್ತಿದ್ದಾರೆ. ಮತ್ತೊಂದು ಹಾಡಿಯಲ್ಲಿ ಸೋಲಿಗರು ಮತ್ತು ಬೆಟ್ಟಕುರುಬರು ಜೊತೆಯಾಗಿ ವಾಸಿಸುತ್ತಿರುವ ಅಂಶಗಳನ್ನು ಗಮನಿಸಬಹುದು. ಇಲ್ಲಿ ಅರಣ್ಯದ ಮಧ್ಯದಲ್ಲಿರುವ, ಅರಣ್ಯದಂಚಿನಲ್ಲಿರುವ, ಹಳ್ಳಿಗಳ ಪಕ್ಕದಲ್ಲಿ ರಚಿಸಿರುವ ಕಾಲೊನಿಗಳು ಹಾಗೂ ಪುನರ್ವಸತಿ ಕಾಲೊನಿಗಳೆಲ್ಲವಕ್ಕೂ ಆಧ್ಯತೆ ನೀಡಲಾಗಿದೆ. ಒಟ್ಟು ೭೦ ಹಾಡಿಗಳಲ್ಲಿ ೩೬೫೪ ಕುಟುಂಬಗಳ ೧೬೦೮೭ ಜನ ವಾಸಿಸುತ್ತಿದ್ದು ಪ್ರತಿ ಹಾಡಿ/ಪೋಡು/ಕಾಲೊನಿಗೆ ಅಧ್ಯಯನಕ್ಕೆ ತೆರಳಿದಾಗ ಲಭ್ಯರಿದ್ದ ೦೮ ರಿಂದ ೧೫ ಜನರ ಗುಂಪಿನಲ್ಲಿ ಸಂದರ್ಶನ ಅನುಸೂಚಿ ಪ್ರಕಾರ ಮಾಹಿತಿ ಕಲೆಹಾಕಲಾಯಿತು. ಸಂದರ್ಶನದಲ್ಲಿ ಭಾಗವಹಿಸಿದ ಮಾಹಿತಿದಾರರ ವಿವರವನ್ನು ಕೋಷ್ಟಕ ೨.೨ ರಲ್ಲಿ ವಿವರಿಸಲಾಗಿದೆ.

### ೨.೩.೨. ಮಾಹಿತಿದಾರರ ಸಂಖ್ಯೆ, ಲಿಂಗ, ವಯಸ್ಸು ಮತ್ತು ಆದಿವಾಸಿ ಪಂಗಡಗಳು

ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ಗುಂಪು ಸಂದರ್ಶನದಲ್ಲಿ ಭಾಗವಹಿಸಿದವರ ವಿವರವನ್ನು ವಿಂಗಡಿಸಲಾಗಿದೆ.

**ೋಷ್ಟಕ: ೨.೦೨: ಮಾಹಿತಿದಾರರ ಸಂಖ್ಯೆ, ಲಿಂಗ, ವಯಸ್ಸು ಮತ್ತು ಆದಿವಾಸಿ ಪಂಗಡಗಳು.**

| ಲಿಂಗ | ಪುರುಷರು | | | | | ಮಹಿಳೆಯರು | | | | | |
|---|---|---|---|---|---|---|---|---|---|---|---|
| ವಯಸ್ಸು→ ಪಂಗಡ↓ | ೧೮-೨೫ | ೨೬-೪೦ | ೪೧-೬೦ | ೬೦ ಹೆಚ್ಚು | ಒಟ್ಟು | ೧೮-೨೫ | ೨೬-೪೦ | ೪೧-೬೦ | ೬೦ ಹೆಚ್ಚು | ಒಟ್ಟು | ಒಟ್ಟು ಮಹಾ ಮೊತ್ತ |
| ಸೋಲಿಗರು | ೫೯ | ೩೧ | ೪೨ | ೩೧ | ೧೬೩ | ೨೦ | ೩೪ | ೩೧ | ೧೯ | ೧೦೪ | ೨೬೭ |
| ಬೆಟ್ಟ ಕುರುಬರು | ೧೭ | ೧೩ | ೨೧ | ೧೫ | ೬೬ | ೧೪ | ೧೮ | ೧೧ | ೫ | ೪೮ | ೧೧೪ |
| ಜೇನು ಕುರುಬರು | ೪೯ | ೨೧ | ೨೮ | ೨೭ | ೧೨೫ | ೪೭ | ೬೨ | ೪೮ | ೧೫ | ೧೭೨ | ೨೯೭ |
| ಯರವರು | ೬ | ೯ | ೧೫ | ೩ | ೩೩ | ೦ | ೨ | ೩ | ೧ | ೬ | ೩೯ |
| ಒಟ್ಟು | ೧೩೧ | ೭೪ | ೧೦೬ | ೭೬ | ೩೮೭ | ೮೧ | ೧೧೬ | ೯೩ | ೪೦ | ೩೩೦ | ೭೧೭ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ಸಂಖ್ಯೆ ೨.೨ ರಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಹಾಡಿ/ಪೋಡು/ಕಾಲೊನಿಗಳಲ್ಲಿ ಮಾಹಿತಿ ನೀಡಿದ ಮಾಹಿತಿದಾರರ ಲಿಂಗ, ವಯಸ್ಸು, ಆದಿವಾಸಿ ಪಂಗಡ ಮತ್ತು ಒಟ್ಟು ಮಾಹಿತಿದಾರರ ಸಂಖ್ಯೆ ತೋರಿಸಲಾಗಿದೆ. ಕೋಷ್ಟಕ ೦೧ ರಲ್ಲಿ ಕಂಡು ಬಂದಿರುವಂತೆ ೭೦ ಹಾಡಿ/ಪೋಡು/ಕಾಲೊನಿಗಳಲ್ಲಿ ೩೬೫೪ ಕುಟುಂಬಗಳ ೧೬೦೮೭ ಜನರನ್ನು ೭೧೭ ಜನರು ಪ್ರತಿನಿಧಿಸಿದ್ದಾರೆ. ಇವರಲ್ಲಿ ೩೮೭ ಜನ ಅಂದರೆ ಶೇಕಡಾ ೫೩.೯೭ ಪುರಷರು, ೩೩೦ ಜನ ಅಂದರೆ ಶೇಕಡಾ ೪೬.೦೨ ಮಹಿಳೆಯರಿದ್ದಾರೆ. ಇದು ಆದಿವಾಸಿ ಪಂಗಡಗಳಲ್ಲಿ ಮಹಿಳೆಯರಿಗೆ ಅವರು ನೀಡುವ ಪ್ರಾತಿನಿಧ್ಯವನ್ನು ತೋರಿಸುತ್ತದೆ. ಹಾಗೆಯೇ ಸೂಕ್ಷ್ಮವಾಗಿ ಗಮನಿಸಿದರೆ ಸೋಲಿಗರು, ಬೆಟ್ಟಕುರುಬರು ಮತ್ತು ಯರವರಿಗಿಂತ ಜೇನುಕುರುಬರಲ್ಲಿ ಮಹಿಳಾ ಪ್ರಾತಿನಿಧ್ಯ ಹೆಚ್ಚಿರುವುದು ಕಂಡು ಬಂದಿದೆ. ಇದಕ್ಕೆ ಕಾರಣವೂ ಇದೆ. ಜೇನುಕುರುಬ ಸಮುದಾಯ ಈಗಲೂ ಕೂಡ ನಾಗರೀಕ ಜಗತ್ತಿನಿಂದ ದೂರವೇ ಉಳಿದಿದೆ. ಅಲ್ಲದೆ ಇವರು ಅರಣ್ಯ ಇಲಾಖೆಯ ಸಿಬ್ಬಂದಿಗೆ ಬಹಳಷ್ಟು ಹೆದರುವುದನ್ನು ಅಧ್ಯಯನದ ಸಂದರ್ಭದಲ್ಲಿ ಗಮನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಚಿಕ್ಕ ವಯಸ್ಸಿನ ಮಕ್ಕಳು, ಮುದುಕರು ಮತ್ತು ಮಹಿಳೆಯರನ್ನು ಹೊರತುಪಡಿಸಿ ದೈಹಿಕವಾಗಿ ಗಟ್ಟಿಮುಟ್ಟಾದ ಜೇನುಕುರುಬರ

ಪುರುಷರು ನಸುಕಿನಲ್ಲಿ ಅಂದರೆ ಸೂರ್ಯ ಮೂಡುವ ಮುನ್ನವೇ ಕಾಡು ಸೇರಿದರೆ, ಸೂರ್ಯ ಮುಳುಗಿದ ನಂತರವೇ ಹಾಡಿ ಸೇರುವುದು. ಅಲ್ಲದೆ ಯಾರಾದರೂ ಹೊಸಬರನ್ನು ಕಂಡರೂ ಇವರೂ ಧೈರ್ಯದಿಂದ ಮಾತನಾಡಿಸದೇ ಏನಾದರೂ ನೆಪ ಹೇಳಿ ಜಾರಿಕೊಳ್ಳುವುದನ್ನು ಗಮನಿಸಲಾಗಿದೆ. ಅಧ್ಯಯನಕ್ಕೆ ಆಯ್ದುಕೊಂಡ ನಾಲ್ಕು ಆದಿವಾಸಿ ಪಂಗಡಗಳಲ್ಲಿ ಯರವರು ಸ್ವಲ್ಪ ಮಟ್ಟಿನ ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಅಭಿವೃದ್ಧಿಯನ್ನು ಕಂಡುಕೊಂಡು ನಾಗರೀಕ ಜಗತ್ತಿನೊಂದಿಗೆ ಹೆಚ್ಚಿನ ಒಡನಾಟ ಇರುವುದನ್ನ ಗಮನಿಸಲಾಗಿದೆ. ಆದರೆ ಈ ಸಮುದಾಯದ ಮಹಿಳಾ ಪ್ರಾತಿನಿಧ್ಯ ಅತ್ಯಲ್ಪವಾಗಿರುವುದನ್ನೂ ಕೋಷ್ಟಕ ೨ ರಲ್ಲಿ ಗಮನಿಸಬಹುದು. ಇದಕ್ಕೆ ನಾಗರೀಕ ಜಗತ್ತಿನ ಸಂಪರ್ಕದ ಪ್ರಭಾವವಿರಬಹುದೆ ಎಂದು ಅನುಮಾನ ಮೂಡುತ್ತದೆ. ಇದಕ್ಕೆ ಹೆಚ್ಚಿನ ಅಧ್ಯಯನದ ಅವಶ್ಯಕತೆ ಕಂಡುಬರುತ್ತದೆ.

ಮಾಹಿತಿದಾರರ ವಯಸ್ಸನ್ನು ಗಮನಿಸುವುದಾದರೆ ೧೮ ರಿಂದ ೨೫ ವಯಸ್ಸಿನವರು ಶೇಕಡಾ ೨೯.೫೬, ೨೬ ರಿಂದ ೪೦ ವರ್ಷ ವಯಸ್ಸಿನವರು ಶೇಕಡಾ ೨೬.೪೯, ೪೧ ರಿಂದ ೬೦ ವರ್ಷ ವಯಸ್ಸಿನವರು ಶೇಕಡಾ ೨೭.೭೫, ಮತ್ತು ೬೦ ವರ್ಷ ಮೇಲ್ಪಟ್ಟವರು ಶೇಕಡಾ ೧೬.೧೭ ರಷ್ಟಿದ್ದಾರೆ.

ಇಲ್ಲಿ ೧೮ ರಿಂದ ೨೫ ವರ್ಷ ವಯಸ್ಸಿನವರು ಅಧಿಕ ಸಂಖ್ಯೆಯಲ್ಲಿರುವುದಕ್ಕೆ ಕಾರಣವಿದೆ. ಇತ್ತೀಚಿನ ವರ್ಷಗಳಲ್ಲಿ ಆಶ್ರಮ ಶಾಲೆಗಳು ಮತ್ತು ಸರ್ಕಾರಿ ಶಾಲೆಗಳು ಆದಿವಾಸಿ ಮಕ್ಕಳ ಶಿಕ್ಷಣಕ್ಕೆ ಒತ್ತು ನೀಡುತ್ತಿದ್ದಾರೆ. ಇದು ಒಳ್ಳೆಯದು. ಆದರೆ ಈ ಶಾಲೆಗಳಿಗೆ ತೆರಳಿದ ಮಕ್ಕಳ ಪರಿಸ್ಥಿತಿ ಏನಾಗಿದೆ ಎಂದರೆ ಇವರು ಕಾಲೇಜು ಶಿಕ್ಷಣ ಮಾಡಲು ಹೆಚ್ಚಿನ ಅವಕಾಶವಿಲ್ಲ ಮತ್ತು ತಮ್ಮ ಸಮುದಾಯದ ಜೀವನೋಪಾಯಗಳಾದ ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹಿಸುವ ಕೌಶಲ್ಯವಿಲ್ಲ. (ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹಿಸಲು ಹಲವು ನಿರ್ಭಂಧಗಳಿವೆ ಆ ಮಾತು ಬೇರೆ) ಅಲ್ಲದೆ ಈ ಮಕ್ಕಳು ಓದಿರುವ ವಿದ್ಯಾಭ್ಯಾಸಕ್ಕೆ ಪಟ್ಟಣಗಳಲ್ಲಿ ನೌಕರಿ ಗಿಟ್ಟಿಸಿಕೊಳ್ಳುವುದು ಕಷ್ಟಕರವಾದುದಾಗಿದೆ. ಒಂದು ವೇಳೆ ಕೆಲಸ ದೊರೆತರೂ ಅವರು ನೀಡುವ ಕೂಲಿ ಇವರಿಗೆ ಸಾಕಾಗುವುದಿಲ್ಲ. ಈ ಎಲ್ಲಾ ಕಾರಣಗಳಿಂದಾಗಿ ಈ ವಯಸ್ಸಿನವರು ಯಾವುದೇ ಕೆಲಸವಿಲ್ಲದೆ ಮನೆಯಲ್ಲಿ ಇರವಂತಹ ಪರಿಸ್ಥಿತಿ ಎದುರಾಗಿರುವುದನ್ನು ಗಮನಿಸಲಾಗಿದೆ. ೬೦ ಕ್ಕಿಂತ ಹೆಚ್ಚಿನ ವಯಸ್ಸಿನವರು ಕಡಿಮೆ ಮಾಹಿತಿದಾರರು ದೊರೆತಿರುವುದು ಆದಿವಾಸಿಗಳ ಆಯುಷ್ಯ ಮಟ್ಟವನ್ನು ಅರಿಯುವ ಒಂದು ಸೂಕ್ಷ್ಮ ಎಳೆಯಾಗಿದೆ. ಅಧ್ಯಯನದ ಸಂದರ್ಭದಲ್ಲಿ ದೊರೆತ ಮಾಹಿತಿಯಂತೆ ಆದಿವಾಸಿಗಳ ಆಯುಷ್ಯ ಮಟ್ಟ ಕೂಡ ಕುಸಿಯುತ್ತಿದೆ ಇದಕ್ಕೆ ಕಾರಣ ಆಧುನಿಕ ಆಹಾರ ಪದ್ಧತಿ ಎಂದು ದೂರುತ್ತಾರೆ. ಅಲ್ಲದೆ ಅರಣ್ಯಕ್ಕೆ ಬೆಂಕಿ ಬೀಳದೇ ಇರುವುದರಿಂದ ಅರಣ್ಯ ಕಿರು ಉತ್ಪನ್ನಗಳು ನಶಿಸುತ್ತಿವೆ ಎಂಬ ಮಾಹಿತಿ ಕೂಡ ದೊರೆತಿದೆ. ತರಗು ಬೆಂಕಿಯ ಮಹತ್ವ ಕುರಿತು ಅಧ್ಯಾಯ ೦೨ ರಲ್ಲಿ ವಿಸ್ತೃತವಾಗಿ

ಚರ್ಚಿಸಲಾಗಿದೆ. ಇದನ್ನು ಗಮನಿಸಿದರೆ ಪ್ರಭುತ್ವದ ನಿರ್ಧಾರಗಳು ಹೇಗೆ ಒಂದು ಸಮುದಾಯದ ಆಹಾರವನ್ನೆ ಕಿತ್ತುಕೊಳ್ಳುತ್ತದೆ ಎಂಬುದು ಮನವರಿಕೆಯಾಗುತ್ತದೆ. ಇನ್ನು ೨೬ ರಿಂದ ೪೦ ವರ್ಷ ವಯಸ್ಸಿನವರು ತಮ್ಮ ಕುಟುಂಬ ನಿರ್ವಹಣೆಗೆ ಬೇರೆ ಬೇರೆ ಕೆಲಸ-ಕಾರ್ಯಗಳಿಗೆ ತೆರಳುವುದರಿಂದ ಈ ವಯಸ್ಸಿನ ಮಾಹಿತಿದಾರರು ಕಡಿಮೆ ಸಂಖ್ಯೆಯಲ್ಲಿ ದೊರೆತಿರುವುದನ್ನು ಗಮನಿಸಬಹುದಾಗಿದೆ. ಇನ್ನು ೪೧ ರಿಂದ ೬೦ ವಯಸ್ಸಸಿನವರು ತಮ್ಮ ಹಾಡಿಯಲ್ಲಿಯೇ ಇದ್ದರೂ ಮಾಹಿತಿ ನೀಡಲು ಬಾರದೇ ಇರುವದನ್ನು ಅಧ್ಯಯನದ ಸಂದರ್ಭದಲ್ಲಿ ಗಮನಿಸಲಾಗಿದೆ.

**೨.೩.೩. ಹಾಡಿ/ಪೋಡು/ಕಾಲೊನಿ ಸ್ಥಳಾಂತರ ಗೊಂಡಿದ್ದರ ಬಗೆಗಿನ ಮಾಹಿತಿ**

ಅಧ್ಯಯನ ಕ್ಷೇತ್ರದಲ್ಲಿನ ಹಾಡಿ/ಪೋಡು/ಕಾಲೊನಿಗಳು ಎಷ್ಟು ಬಾರಿ ಸ್ಥಳಾಂತರ ಗೊಂಡಿವೆ ಎಂಬ ಮಾಹಿತಿಯನ್ನು ಕಲೆಹಾಕಲಾಗಿದೆ.

**ಸ್ಥಂಭ ನಕ್ಷೆ: ೨.೧: ಹಾಡಿ/ಪೋಡು/ಕಾಲೊನಿ ಸ್ಥಳಾಂತರ ಗೊಂಡಿದ್ದರ ಬಗೆಗಿನ ವಿವರ**




(ಮೂಲ: ಕ್ಷೇತ್ರ ಅಧ್ಯಯನ)

ಸ್ಥಂಭ ನಕ್ಷೆ ೨.೧ ಅಧ್ಯಯನಕ್ಕೆ ಆಯ್ದುಕೊಂಡ ಹಾಡಿ/ಪೋಡು/ಕಾಲೊನಿಗಳು ಸ್ಥಳಾಂತರ ಗೊಂಡಿದ್ದರ ಬಗೆಗೆ ಮಾಹಿತಿ ನೀಡುತ್ತದೆ. ಒಟ್ಟಾರೆ ಶೇಕಡಾ ೭೨.೮೫ ರಷ್ಟು ಹಾಡಿ/ಪೋಡುಗಳು ಸ್ಥಳಾಂತರಗೊಂಡಿವೆ. ಇವುಗಳಲ್ಲಿ ಒಮ್ಮೆ ಮಾತ್ರ ಸ್ಥಳಾಂತರ ಗೊಂಡಂತಹವುಗಳು ಶೇಕಡಾ ೨೨.೮೫. ಆದರೆ ಇವರು ಖಾಯಂ ನಿವಾಸ ಹೊಂದಿದ್ದಾರೆಂದಾಗಲಿ ಅಥವಾ ಇನ್ನು ಮುಂದೆ ಸ್ಥಳಾಂತರ ಮಾಡುವುದಿಲ್ಲವೆಂದಾಗಲಿ ಭರವಸೆ ಇಲ್ಲ. ಏಕೆಂದರೆ ಅಧ್ಯಯನದಲ್ಲಿ ಕಂಡುಕೊಂಡಂತೆ ಎರೆಡು ಬಾರಿ, ಮೂರು

ಬಾರಿ, ನಾಲ್ಕು ಬಾರಿ ಅಷ್ಟೇ ಏಕೆ ಐದು ಬಾರಿ ಸ್ಥಳಾಂತರ ಗೊಳಿಸಿದ ಮಾಹಿತಿ ಇದೆ. ಈ ಐದೈದು ಬಾರಿ ಸ್ಥಳಾಂತಗೊಂಡವರ ಅತಂತ್ರತೆ ಹೇಳ ತೀರದು. ಒಮ್ಮೆ ರಾಷ್ಟ್ರೀಯ ಅರಣ್ಯ ಸಂರಕ್ಷಣೆ ನೀತಿಯಿಂದ ಹಾಗೆಯೇ ಅಣೆಕಟ್ಟು ಯೋಜನೆಯಿಂದ, ಮತ್ತೊಮ್ಮೆ ರಾಷ್ಟ್ರೀಯ ಉದ್ಯಾನವನ ಯೋಜನೆಯಿಂದ, ಮಗದೊಮ್ಮೆ ಹುಲಿ ಅಭಯಾರಣ್ಯ ಯೋಜನೆಯಿಂದ, ಇನ್ನೊಮ್ಮೆ ಆನೆ ಅಭಯಾರಣ್ಯ ಯೋಜನೆಯಿಂದ ಹೀಗೆ ಹಲವು ನೆಪಗಳನ್ನು ನೀಡಿ ಇವರನ್ನು ಸ್ಥಳಾಂತರಿಸಲಾಗಿದೆ. ಇವರು ಈಗಲೂ ತಾವು ನೆಲೆಸಿರುವ ಜಾಗ ತಮ್ಮದೆಂದು ಹೇಳಿಕೊಳ್ಳಲು ಮುಜುಗರ ಮತ್ತು ಅನುಮಾನ ಪಡುತ್ತಾರೆ. ಮತ್ತೆ ನಮ್ಮನ್ನು ಸ್ಥಳಾಂತರ ಮಾಡುವುದಿಲ್ಲ ಅನ್ನುವುದಕ್ಕೆ ನಂಬಿಕೆಯೆ ಇಲ್ಲ ಎನ್ನುತ್ತಾರೆ. ಇನ್ನು ಶೇಕಡಾ ೨೭.೧೪ ಸ್ಥಳಾಂತರಗೊಂಡಿರದ ಹಾಡಿ/ಪೋಡುಗಳನ್ನು ನೋಡಬಹುದು. ಇದಕ್ಕೆ ಮೂಲ ಕಾರಣ ಇವರು ಅರಣ್ಯದ ಅಂಚಿನಲ್ಲಿದ್ದವರಾಗಿದ್ದಾರೆ. ಆದರೆ ಇವರನ್ನು ಮುಂದೊಂದು ದಿನ ಸ್ಥಳಾಂತರ ಮಾಡುವುದಿಲ್ಲ ಎಂದು ಹೇಳುವುದು ಕಠಿಣ. ಸ್ಥಳಾಂತರಗೊಂಡಂತಹ ಹಾಡಿ/ಪೋಡಿನ ಆದಿವಾಸಿಗಳಿಗೆ ಅರಣ್ಯ ಹಕ್ಕುಗಳ ಕಾಯಿದೆಯ ಲಾಭವನ್ನು ಪಡೆಯಲು ಕಾನೂನಿನ ತೊಡಕು ಎದುರಾಗುತ್ತಿರುವುದನ್ನು ಮುಂದೆ ಗಮನಿಸಬಹುದಾಗಿದೆ.

**೨.೩.೪. ಹಾಡಿ/ಪೋಡು/ಕಾಲೊನಿಗಳ ರಸ್ತೆ ಸೌಲಭ್ಯದ ಮಾಹಿತಿ**

ಅಧ್ಯಯನ ಕ್ಷೇತ್ರದಲ್ಲಿ ಹಾಡಿ/ಪೋಡು/ಕಾಲೊನಿಗಳು ಹೊಂದಿರುವ ರಸ್ತೆ ಮಾದರಿಗಳನ್ನು ವಿಂಗಡಿಸಲಾಗಿದೆ.

**ಕೋಷ್ಟಕ: ೨.೦೩: ಹಾಡಿ/ಪೋಡು/ಕಾಲೊನಿಗಳ ರಸ್ತೆ ಸೌಲಭ್ಯದ ವಿವರ**

| ಕ್ರ.ಸಂ | ರಸ್ತೆಗಳ ವಿಧ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ಕಚ್ಚಾರಸ್ತೆ | ೧೯ | ೨೭.೧೪ |
| ೦೨ | ಸಿಮೆಂಟ್ ರಸ್ತೆ. | ೦೩ | ೦೪.೨೯ |
| ೦೩ | ಡಾಂಬರು ರಸ್ತೆ | ೧೫ | ೨೧.೪೩ |
| ೦೪ | ಕಾಲುದಾರಿ | ೩೩ | ೪೭.೧೪ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೩ ಹಾಡಿ/ಪೋಡು/ಕಾಲೊನಿಗಳಿಗೆ ಸಂಪರ್ಕ ಕಲ್ಪಿಸುವ ರಸ್ತೆಗಳ ಬಗೆಗೆ ಸಂಬಂಧಿಸಿದಂತೆ ಮಾಹಿತಿ ನೀಡುತ್ತದೆ. ಶೇಕಡಾ ೨೭.೧೪ ಕಚ್ಚಾ ರಸ್ತೆಗಳನ್ನು, ಶೇಕಡಾ ೪.೨೯ ಸಿಮೆಂಟ್ ರಸ್ತೆಗಳನ್ನು, ಶೇಕಡಾ ೨೧.೪೩ ಡಾಂಬರು ರಸ್ತೆ ಹಾಗೂ ಶೇಕಡಾ ೪೭.೧೪ ಕಾಲುದಾರಿ ಹೊಂದಿವೆ.

ಇಲ್ಲಿ ಡಾಂಬರು ರಸ್ತೆಗಳನ್ನೆನೂ ಹಾಡಿ/ಪೋಡುಗಳನ್ನು ಸಂಪರ್ಕಿಸಲು ರಚಿಸಲಾಗಿಲ್ಲ; ಬದಲಾಗಿ ನಗರ, ಪಟ್ಟಣ ಅಥವಾ ಹೊರ ರಾಜ್ಯಗಳಿಗೆ ಸಂಪರ್ಕ ಕಲ್ಪಿಸುವ ರಸ್ತೆಗಳ ಪಕ್ಕ ಇವುಗಳು ಇರುವುದರಿಂದ ಅಥವಾ ಇರಿಸಲ್ಪಟ್ಟಿದ್ದರಿಂದ ಡಾಂಬರು ರಸ್ತೆ ದೊರಕಿದೆ. ಕಾಲುದಾರಿ ಇರುವ ಹಾಡಿಗಳಿಗೆ ಮಳೆಗಾಲದಲ್ಲಿ ತಲುಪುವುದೇ ದುಸ್ತರ. ಪ್ರಸ್ತುತ ಪರಿಸ್ಥಿತಿ ಗಮನಿಸಿದರೆ ಈಗಿರುವ ಕಚ್ಚಾ ರಸ್ತೆಗಳು ಕೆಲವೇ ದಿನಗಳಲ್ಲಿ ಕಾಲುದಾರಿಯಾಗುವುದರಲ್ಲಿ ಸಂಶಯವಿಲ್ಲ. ಇಂತಹ ಕಾಲುದಾರಿಯಲ್ಲಿ ಸಂಚರಿಸುವಾಗ ವಿಷಜಂತುಗಳ ಕಡಿತಕ್ಕೆ ಒಳಗಾಗುತ್ತಿರುವುದನ್ನು ಆದಿವಾಸಿಗಳು ವ್ಯಕ್ತಪಡಿಸಿರುತ್ತಾರೆ.

### ೨.೩.೫. ಹಾಡಿ/ಪೋಡು/ಕಾಲೊನಿಗಳಿಗೆ ವಾಹನ ಸೌಲಭ್ಯದ ವ್ಯವಸ್ಥೆ

ಆದಿವಾಸಿಗಳು ಅರಣ್ಯ ಮತ್ತು ಅರಣ್ಯದಂಚಿನಲ್ಲಿ ಹೆಚ್ಚಾಗಿ ತಮ್ಮ ನೆಲೆಗಳನ್ನು ಕಟ್ಟಿಕೊಂಡಿರುತ್ತಾರೆ. ಇದಕ್ಕೆ ಮುಖ್ಯ ಕಾರಣ ಅವರು ನಾಗರೀಕ ಜಗತ್ತಿನಿಂದ ದೂರ ಇರಲು ಬಯಸುವುದು. ಇಂತಹ ಕಡೆ ಅವರು ತೆರಳುವುದು ಶ್ರಮದಾಯಕವಾಗಿದೆ.

**ಕೋಷ್ಟಕ: ೨.೦೪: ಹಾಡಿ/ಪೋಡು/ಕಾಲೊನಿಗಳಿಗೆ ವಾಹನ ಸೌಲಭ್ಯದ ವಿವರ**

| ಕ್ರಸಂ | ವಾಹನ ವ್ಯವಸ್ಥೆ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ಸರ್ಕಾರಿ ವಾಹನ | ೧೫ | ೨೧.೪೩ |
| ೦೨ | ಖಾಸಗಿ ವಾಹನ | ೩೪ | ೪೮.೦೬ |
| ೦೩ | ಸ್ವಂತ ವಾಹನ | ೧೧ | ೧೫.೭೧ |
| ೦೪ | ಇಲ್ಲ | ೧೦ | ೧೪.೨೯ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೦೪ ಹಾಡಿ/ಪೋಡು/ಕಾಲೊನಿಗಳಿಗೆ ಇರವ ವಾಹನ ಸೌಲಭ್ಯದ ಮಾಹಿತಿಯನ್ನು ತಿಳಿಸುತ್ತದೆ. ಶೇಕಡಾ ೨೧.೪೩ ರಷ್ಟು ಸರ್ಕಾರಿ ವಾಹನ ವ್ಯವಸ್ಥೆ ಹೊಂದಿವೆ. ಶೇಕಡಾ ೪೮.೬ ರಷ್ಟು ಖಾಸಗಿ ವಾಹನ ವ್ಯವಸ್ಥೆ ಹೊಂದಿವೆ. ಶೇಕಡಾ ೧೫.೭೧ ರಷ್ಟು ಹಾಡಿ/ಪೋಡುಗಳ ಕೆಲವು ಜನರು ಮಾತ್ರ ಸ್ವಂತ ವಾಹನ ಹೊಂದಿರುತ್ತಾರೆ. ಶೇಕಡಾ ೧೪.೨೯ ಹಾಡಿಗಳ ಜನರು ಇಂದಿಗೂ ಕಾಲುನಡಿಗೆಯನ್ನೇ ಅವಲಂಬಿಸಿದ್ದಾರೆ.

ಸರ್ಕಾರಿ ವಾಹನಗಳ ವ್ಯವಸ್ಥೆ ಮುಖ್ಯ ರಸ್ತೆಯ ಪಕ್ಕದಲ್ಲಿರುವ ಹಾಡಿ/ಪೋಡುಗಳಿಗಿ ಮಾತ್ರ ಇದೆ. ಆದರೆ ಇಲ್ಲಿ ಸಂಚರಿಸುವ ಎಲ್ಲಾ ಬಸ್ಸುಗಳು ನಿಲ್ಲಿಸುವುದಿಲ್ಲ. ಖಾಸಗಿ ವಾಹನಗಳಾದ ಜೀಪು, ಲಗೇಜ್ ಆಟೋ, ಡೀಸೆಲ್ ಆಟೋ, ಕೆಲವು ಕಡೆ ಟೆಂಪೋಗಳೇ ಇವರ ಸಂಚಾರಿ ವ್ಯವಸ್ಥೆಯಾಗಿದೆ. ಇವುಗಳಲ್ಲಿ ಸಂಚರಿಸುವುದು ವೃದ್ಧರಿಗೆ, ಮಹಿಳೆಯರಿಗೆ ಮತ್ತು ಮಕ್ಕಳಿಗೆ ಬಹಳ ಕಷ್ಟಕರವಾದುದಾಗಿದೆ. ಇವು

ಅಷ್ಟೊಂದು ಸುರಕ್ಷಿತ ಕೂಡ ಅಲ್ಲ. ಕಾಲುಗಳಿಗಳಿಗೆ ಒಂದು ಜೊತೆ ಚಪ್ಪಲಿ ಖರೀದಿಸಲೂ ಸಂಕಷ್ಟವಿರುವ ಇವರು ಕಲ್ಲು, ಮುಳ್ಳು, ಬಿಸಿಲ ಬೇಗೆ ಇವುಗಳ ಜೊತೆಗೆ ವಿಷಜಂತುಗಳ ಕಾಟಕ್ಕೂ ತುತ್ತಾಗುತ್ತಾರೆ. ಕೆಲವು ಕಡೆ ಸೂರ್ಯ ಮೂಡುವ ಮುನ್ನ ಮತ್ತು ಕತ್ತಲಾದ ಮೇಲೆ ಸಂಚರಿಸಿದರೆ ವನ್ಯಪ್ರಾಣಿಗಳ ದಾಳಿಗೆ ಸಿಲುಕುವ ಸಾಧ್ಯತೆ ಬಹಳಷ್ಟಿದೆ ಎಂಬ ಮಾಹಿತಿಯು ಅಧ್ಯಯನದ ಸಂದರ್ಭದಲ್ಲಿ ದೊರೆತಿದೆ.

**೨.೩.೬. ಆದಿವಾಸಿ ನೆಲೆಗಳಿಗೆ ಇರುವ ಅಂಚೆ ವ್ಯವಸ್ಥೆ**

ಗುಡ್ಡಗಾಡು ಮತ್ತು ಅರಣ್ಯಗಳಲ್ಲಿ ವಾಸಿಸುತ್ತಿರುವ ಆದಿವಾಸಿ ನೆಲೆಗಳಿಗೆ ಅಂಚೆ ತಲುಪಿಸುವುದು ಇಂದಿಗೂ ಸವಾಲಾಗಿದೆ.

**ಕೋಷ್ಟಕ: ೨.೦೫: ಆದಿವಾಸಿ ನೆಲೆಗಳಿಗೆ ಇರುವ ಅಂಚೆ ಸೌಲಭ್ಯದ ವಿವರ**

| ಕ್ರಸಂ | ಅಂಚೆ ಕಛೇರಿ ದೂರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧–೨ ಕಿ.ಮೀ | ೧೩ | ೧೮.೫೭ |
| ೦೨ | ೨–೩ ಕಿ.ಮೀ | ೧೬ | ೨೨.೦೯ |
| ೦೩ | ೩–೫ ಕಿ.ಮೀ | ೧೯ | ೨೭.೧೪ |
| ೦೪ | ೫ ಕಿ.ಮೀ.ಗಿಂತ ಹೆಚ್ಚು | ೨೨ | ೩೧.೪೩ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೫ ಹಾಡಿ/ಪೋಡು/ಕಾಲೊನಿಗಳಿಗೆ ಇರವ ಅಂಚೆ ಸೌಲಭ್ಯದ ಮಾಹಿತಿಯನ್ನು ತಿಳಿಸುತ್ತದೆ. ಶೇಕಡಾ ೧೮.೫೭ ರಷ್ಟು ೧ ರಿಂದ ೨ ಕಿಲೋಮೀಟರ್, ಶೇಕಡಾ ೨೨.೦೯ ರಷ್ಟು ೨ ರಿಂದ ೩ ಕಿಲೋಮೀಟರ್, ಶೇಕಡಾ ೨೭.೧೪ ರಷ್ಟು ೩ ರಿಂದ ೫ ಕಿಲೋಮೀಟರ್ ಮತ್ತು ಶೇಕಡಾ ೩೧.೪೩ ರಷ್ಟು ೫ ಕಿಲೋಮೀಟರ್ ಗಿಂತಲೂ ಹೆಚ್ಚಿನ ದೂರದಲ್ಲಿ ಅಂಚೆ ವ್ಯವಸ್ಥೆ ಹೊಂದಿವೆ.

ಹತ್ತಿರದಲ್ಲಿ ಅಂಚೆ ವ್ಯವಸ್ಥೆ ಹೊಂದಿಲ್ಲದ ಕಾರಣ ಪತ್ರಗಳು ವ್ಯವಸ್ಥಿತವಾಗಿ ತಲುಪುವುದಿಲ್ಲ. ಮಳೆಗಾಲದಲ್ಲಿ ಪತ್ರಗಳು ಹಲವು ದಿನಗಳ ನಂತರವೇ ತಲುಪುತ್ತವೆ ಎಂದು ವ್ಯಕ್ತಪಡಿಸುತ್ತಾರೆ. ಇದಕ್ಕೆ ಮುಖ್ಯ ಕಾರಣ ಅಸಮರ್ಪಕ ರಸ್ತೆ ವ್ಯವಸ್ಥೆಯಾಗಿದೆ.

**೨.೩.೭. ಹಾಡಿ/ಪೋಡು/ಕಾಲೊನಿಗಳಿಗೆ ಇರುವ ಆಸ್ಪತ್ರೆ ಲಭ್ಯತೆ**

ಆದಿವಾಸಿಗಳು ತಮ್ಮ ಆಹಾರವೇ ಔಷಧಿ ಎಂದು ನಂಬಿರುವವರು. ಇವರು ಗಿಡಮೂಲಿಕೆಗಳನ್ನು ಹೆಚ್ಚಾಗಿ ಅವಲಂಬಿಸಿ ಬದುಕುತ್ತಿದ್ದವರು. ಪ್ರಸ್ತುತ ಔಷಧಿ ಸಸ್ಯಗಳು ಹಲವು ಕಾರಣಗಳಿಂದ ಕಣ್ಮರೆಯಾಗಿವೆ. ಈ ಹಿನ್ನೆಲೆಯಲ್ಲಿ ಆದಿವಾಸಿಗಳು ಆಧುನಿಕ

ವೈದ್ಯ ಪದ್ಧತಿ ಕಡೆ ಮುಖ ಮಾಡುತ್ತಿರುವುದು ಆಶಾದಾಯಕ. ಆದರೆ ಇವುಗಳ ಲಭ್ಯತೆ ತೃಪ್ತಿಕರವಾಗಿಲ್ಲ.

**ಕೋಷ್ಟಕ: ೨.೦೬: ಹಾಡಿ/ಪೋಡು/ಕಾಲೊನಿಗಳಿಗೆ ಇರುವ ಆಸ್ಪತ್ರೆ ಸೌಲಭ್ಯದ ವಿವರ**

| ಕ್ರ.ಸಂ | ಆಸ್ಪತ್ರೆಗಳ ವಿಧ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ಸರ್ಕಾರಿ ಆಸ್ಪತ್ರೆ | ೨೭ | ೩೮.೫೭ |
| ೦೨ | ಖಾಸಗಿ ಆಸ್ಪತ್ರೆ | ೨೨ | ೩೧.೦೪ |
| ೦೩ | ಸಂಚಾರಿ ಆಸ್ಪತೆ | ೦೬ | ೦೮.೫೭ |
| ೦೪ | ಇತರೆ | ೧೫ | ೨೧.೪೩ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೬ ಹಾಡಿ/ಪೋಡು/ಕಾಲೊನಿಗಳು ಹೊಂದಿರುವ ಆಸ್ಪತ್ರೆ ಸೌಲಭ್ಯದ ಮಾಹಿತಿಯನ್ನು ನೀಡುತ್ತದೆ. ಶೇಕಡಾ ೩೮.೫೭% ಹಾಡಿಗಳಿಗೆ ಮಾತ್ರ ಹತ್ತಿರದಲ್ಲಿ ಸರ್ಕಾರಿ ಆಸ್ಪತ್ರೆ ದೊರುಕುತ್ತಿವೆ. ಶೇಕಡಾ ೩೧.೪ ಹಾಡಿಗಳು ಖಾಸಗಿ ಆಸ್ಪತ್ರೆ ಮೊರೆ ಹೋಗುತ್ತಾರೆ. ಶೇಕಡಾ ೮.೫೭ ರಷ್ಟು ಹಾಡಿ/ಪೋಡುಗಳು ಸ್ವಯಂ ಸೇವಾ ಸಂಸ್ಥೆಗಳು ನಡೆಸುವ ಸಂಚಾರಿ ಆಸ್ಪತ್ರೆ ವ್ಯವಸ್ಥೆ ಹೊಂದಿವೆ. ಶೇಕಡಾ ೨೧.೪೩ ರಷ್ಟು ಹಾಡಿಗಳು ಸ್ಥಳೀಯ ಗಿಡಮೂಲಿಕೆ ಔಷಧಿ ನೀಡುವವರನ್ನು ಅಥವಾ ಮನೆಮದ್ದನ್ನು ಅವಲಂಬಿಸಿದ್ದಾರೆ. ಆದಿವಾಸಿಗಳು ಆಹಾರ ಮತ್ತು ಔಷಧಿ ವಿಚಾರದಲ್ಲಿ ಹೊಸಬರನ್ನು ನಂಬುವುದಿಲ್ಲ. ತಮಗೆ ಗುರುತು ಪರಿಚಯವಿರುವವರ ಬಳಿ ಮಾತ್ರ ಔಷಧಿ ಪಡೆಯಲು ಬಯಸುತ್ತಾರೆ. ತಮ್ಮ ಸಮಸ್ಯೆಗಳನ್ನು ಮುಕ್ತವಾಗಿ ಹಂಚಿಕೊಳ್ಳಲು ಹಿಂಜರಿಯುವ ಸ್ವಭಾವ ಇವರದಾಗಿದೆ.

**೨.೩.೮. ಹಾಡಿ/ಪೋಡು/ಕಾಲೊನಿಗಳಿಗೆ ಆಸ್ಪತ್ರೆ ದೂರದ ಮಾಹಿತಿ**

ಸರಿಯಾದ ರಸ್ತೆ ವ್ಯವಸ್ಥೆಯೂ ಇಲ್ಲದ ಆದಿವಾಸಿಗಳ ಹಾಡಿ/ಪೋಡು/ಕಾಲೊನಿಗಳು ತುರ್ತು ಸಂದರ್ಭದಲ್ಲಿ ಆರೋಗ್ಯ ಸೇವೆ ಪಡೆಯಲು ಬಹಳಷ್ಟು ಶ್ರಮಪಡಬೇಕಾಗಿದೆ. ಇದರಿಂದಾಗಿ ಹಲವು ಬಾರಿ ವ್ಯಥೆಪಡುವಂತಾಗಿದೆ ಎಂದು ಮರುಗುತ್ತಾರೆ.

**ಕೋಷ್ಟಕ: ೨.೦೭: ಆಸ್ಪತ್ರೆ ಸೌಲಭ್ಯ ದೂರಕುವ ದೂರದ ವಿವರ**

| ಕ್ರ.ಸಂ | ಆಸ್ಪತ್ರೆ ಇರುವ ದೂರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧–೨ ಕಿ.ಮೀ. | ೧೨ | ೧೭.೧೪ |
| ೦೨ | ೨–೩ ಕಿ.ಮೀ. | ೧೭ | ೨೪.೦೩ |
| ೦೩ | ೩–೫ ಕಿ.ಮೀ. | ೨೧ | ೩೦ |
| ೦೪ | ೫ ಕಿ.ಮೀ. ಗಿಂತ ಹೆಚ್ಚು. | ೨೦ | ೨೮.೫೭ |
|  | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೦೭ ಹಾಡಿ/ಪೋಡು/ಕಾಲೊನಿಗಳು ಹೊಂದಿರುವ ಆಸ್ಪತ್ರೆ ಸೌಲಭ್ಯದ ದೂರದ ಮಾಹಿತಿಯನ್ನು ಹೊದಗಿಸುತ್ತದೆ. ಶೇಕಡಾ ೧೭.೧೪ ರಷ್ಟು ೧ ರಿಂದ ೨ ಕಿಲೋಮೀಟರ್, ಶೇಕಡಾ ೨೪.೦೩ ರಷ್ಟು ೨ ರಿಂದ ೩ ಕಿಲೋಮೀಟರ್, ಶೇಕಡಾ ೩೦ ರಷ್ಟು ೩ ರಿಂದ ೫ ಕಿಲೋಮೀಟರ್ ಮತ್ತು ಶೇಕಡಾ ೨೮.೫೭ ರಷ್ಟು ೫ ಕೀ.ಮೀ ಗಿಂತಲೂ ಹೆಚ್ಚಿನ ದೂರದಲ್ಲಿ ಆಸ್ಪತ್ರೆ ಸೌಲಭ್ಯವನ್ನು ಹೊಂದಿವೆ. ವೈದ್ಯಕೀಯ ಸೌಲಭ್ಯ ಪಡೆಯಬೇಕಾದರೆ ಹಲವು ಕಿಲೋಮೀಟರ್‌ಗಳನ್ನು ಕ್ರಮಿಸಬೇಕಾದ ಅವಶ್ಯಕತೆ ಇದೆ. ಹೆರಿಗೆ ಸಂದರ್ಭ ಮತ್ತು ವಿಷಜಂತುಗಳ ಕಡಿತದ ಸಂದರ್ಭದಲ್ಲಿ ವಾಹನ ಸೌಲಭ್ಯವಿಲ್ಲದ ಹಾಡಿ/ಪೋಡುಗಳಂತೂ ಜೀವದ ಜೊತೆ ಹೋರಾಡಬೇಕಾದ ಪರಿಸ್ಥಿತಿ ಇದೆ.

### ೨.೩.೯. ಬ್ಯಾಂಕ್ ಸೇವೆ ಲಭ್ಯತೆ ಮಾಹಿತಿ

ಪ್ರಸ್ತುತ ಆದಿವಾಸಿಗಳ ಆರ್ಥಿಕ ಅಭಿವೃದ್ಧಿ ತುರ್ತಾಗಿ ಆಗಬೇಕಾದ ಕೆಲಸವಾಗಿದೆ. ಆದರೆ ಆರ್ಥಿಕ ಸಹಾಯಕ್ಕಾಗಿ ಇರುವ ಬ್ಯಾಂಕ್‌ಗಳು ಆದಿವಾಸಿ ನೆಲೆಗಳಿಂದ ದೂರವಿದ್ದು, ಮಾನಸಿಕವಾಗಿಯೂ ಇವು ನಮಗಲ್ಲ ಎಂಬ ಮನೋಭಾವನೆ ಹೊಂದಿರುವುದನ್ನು ಅಧ್ಯಯನ ಸಂದರ್ಭದಲ್ಲಿ ಗುರುತಿಸಲಾಗಿದೆ.

**ಕೋಷ್ಟಕ: ೨.೦೮: ಬ್ಯಾಂಕ್ ಸೌಲಭ್ಯ ದೊರಕುವ ದೂರದ ವಿವರ**

| ಕ್ರ.ಸಂ | ಬ್ಯಾಂಕ್ ಲಭ್ಯತೆ ದೂರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧–೨ ಕಿ.ಮೀ. | ೭ | ೧೦ |
| ೦೨ | ೨–೩ ಕಿ.ಮೀ. | ೯ | ೧೨.೯ |
| ೦೩ | ೩–೫ ಕಿ.ಮೀ. | ೧೩ | ೧೮.೫೭ |
| ೦೪ | ೧೦ ಕಿ.ಮೀ. ಗಿಂತ ಹೆಚ್ಚು. | ೪೩ | ೬೧.೪೩ |
|  | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೮ ಹಾಡಿ/ಪೋಡು/ಕಾಲೊನಿಗಳು ಹೊಂದಿರುವ ಬ್ಯಾಂಕ್ ಸೌಲಭ್ಯದ ದೂರದ ಮಾಹಿತಿಯನ್ನು ಹೊದಗಿಸುತ್ತದೆ. ಶೇಕಡಾ ೧೦ ರಷ್ಟು ೧ ರಿಂದ ೨

ಕಿಲೋಮೀಟರ್, ಶೇಕಡಾ ೧೨.೦೯ ರಷ್ಟು ೨ ರಿಂದ ೩ ಕಿಲೋಮೀಟರ್, ಶೇಕಡಾ ೧೮.೫೭ ರಷ್ಟು ೩ ರಿಂದ ೫ ಕಿಲೋಮೀಟರ್ ಮತ್ತು ಶೇಕಡಾ ೬೧.೪೩ ರಷ್ಟು ೧೦ ಕೀ.ಮೀ ಗಿಂತಲೂ ಹೆಚ್ಚಿನ ದೂರವನ್ನು ಕ್ರಮಿಸಿ ಬ್ಯಾಂಕ್ ಸೌಲಭ್ಯವನ್ನು ಪಡೆಯಬೇಕಾಗಿದೆ. ಸರಿಯಾದ ವಾಹನ ಸೌಲಭ್ಯ ಇಲ್ಲದಿರುವುದರಿಂದ ಬ್ಯಾಂಕಿನ ಸೌಲಭ್ಯ ಹೊಂದುವುದು ಕಷ್ಟದಾಯಕವಾಗಿದೆ. ಕೆಲವು ಹಾಡಿಗಳು ಹತ್ತಿರದಲ್ಲಿ ಬ್ಯಾಂಕ್ ಹೊಂದಿವೆ. ಆದರೆ ಆದಿವಾಸಿಗಳ ಬಳಿ ತಮ್ಮ ಹೆಸರಿನಲ್ಲಿರುವ ಭೂಮಿ ಇಲ್ಲದಿರುವುದರಿಂದ ಬ್ಯಾಂಕಿನ ಅಥವಾ ಸರ್ಕಾರದ ಯೋಜನೆಗಳ ಯಾವ ಫಲವನ್ನೂ ಪಡೆಯಲಾಗುತ್ತಿಲ್ಲ. ಜನರ ಆರ್ಥಿಕ ಪರಿಸ್ಥಿತಿ ಸುಧಾರಣೆಯಲ್ಲಿ ಬ್ಯಾಂಕುಗಳ ಪಾತ್ರ ಅತೀ ಮುಖ್ಯ. ಆದರೆ ಆದಿವಾಸಿಗಳಿಗೆ ಇದು ಮರೀಚಿಕೆಯಾಗಿದೆ.

### ೨.೩.೧೦. ಸಂಪರ್ಕ ಸಂವಹನ ಸಾಧನಗಳ ಲಭ್ಯತೆ

ಆಧುನಿಕ ಯುಗದ ಸಂಪರ್ಕ ಸಂವಹನ ಮಾಧ್ಯಮಗಳು ಇಡೀ ಜಗತ್ತನ್ನು ಅಂಗೈಯಲ್ಲಿ ಇಟ್ಟಿವೆ. ಆದಿವಾಸಿಗಳಲ್ಲಿ ಇವುಗಳ ಸಂಪೂರ್ಣ ಬಳಕೆಯು ಕಂಡುಬಂದಿಲ್ಲ.

**ಕೋಷ್ಟಕ: ೨.೦೯: ಸಂವಹನ ಮಾಧ್ಯಮಗಳ ವಿವರ**

| ಕ್ರ.ಸಂ | ಸಂವಹನ ಮಾಧ್ಯಮ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ಸ್ಥಿರ ದೂರವಾಣಿ | ೧೩ | ೧೮.೫೭ |
| ೦೨ | ಜಂಗಮವಾಣಿ | ೬೭ | ೯೫.೭೧ |
| ೦೩ | ಫ್ಯಾಕ್ಸ್ | ೦ | ೦ |
|  | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೦೯ ಹಾಡಿ/ಪೋಡು/ಕಾಲೊನಿಗಳು ಹೊಂದಿರುವ ಸಂಪರ್ಕ ಸಂವಹನ ಮಾಧ್ಯಮದ ವಿವರವನ್ನು ಸೂಚಿಸುತ್ತದೆ. ಶೇಕಡಾ ೧೮.೫೭ ರಷ್ಟು ಸ್ಥಿರ ದೂರವಾಣಿ, ಶೇಕಡಾ ೯೫.೭೧ ರಷ್ಟು ಜಂಗಮವಾಣಿ ಸೌಲಭ್ಯವನ್ನು ಹೊಂದಿವೆ. ಫ್ಯಾಕ್ಸ್ ಸೌಲಭ್ಯವನ್ನು ಯಾವುದೇ ಹಾಡಿಗಳು ಹೊಂದಿಲ್ಲ. ಕೆಲವು ಹಾಡಿ/ಪೋಡುಗಳಲ್ಲಿ ಜಂಗಮವಾಣಿಗೆ ಜಾಲದ ಸಮಸ್ಯೆ ಹೊರತುಪಡಿಸಿದರೆ ಸಂವಹನಕ್ಕೆ ಯಾವುದೇ ತೊಂದರೆ ಇಲ್ಲ.

ಆಧುನಿಕ ಯುಗದ ಅತ್ಯಂತ ವಿಸ್ಮಯಕಾರಿ ಮತ್ತು ಅತ್ಯಂತ ಉಪಯುಕ್ತಕಾರಿ ಜಂಗಮವಾಣಿಯನ್ನು ಆದಿವಾಸಿ ಸಮುದಾಯ ಕೇವಲ ಸಂವಹನಕ್ಕಾಗಿ ಮಾತ್ರ ಬಳಸುತ್ತಿದೆ. ಇದರ ಹಲವು ಉಪಯೋಗಗಳನ್ನು ಪಡೆದುಕೊಳ್ಳುವಷ್ಟು ವಿದ್ಯಾವಂತರು ಇಲ್ಲದಿರುವುದು ಕಂಡು ಬಂದಿದೆ.

### ೨.೩.೧೧. ಹಾಡಿ/ಪೋಡು/ಕಾಲೊನಿಗಳಿಗೆ ವಿದ್ಯುತ್ ಪೂರೈಕೆ

ಇಂದಿನ ಯುಗ ವಿದ್ಯುತ್ ಮೇಲೆಯೇ ಅವಲಂಭಿಸಿದೆ. ಇಂತಹ ಅವಶ್ಯಕ ಸೇವೆ ಸಮರ್ಪಕವಾಗಿಲ್ಲದಿರುವುದು ಅಧ್ಯಯನದಲ್ಲಿ ಕಂಡುಬಂದಿದೆ.

**ಕೋಷ್ಟಕ: ೨.೧೦: ಹಾಡಿ/ಪೋಡು/ಕಾಲೊನಿಗಳಿಗೆ ವಿದ್ಯುತ್ ಪೂರೈಕೆ ವಿವರ**

| ಕ್ರ.ಸಂ | ವಿದ್ಯುತ್ ಪೂರೈಕೆ ವಿವರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ಕೆ.ಪಿ.ಟಿ.ಸಿ.ಎಲ್ | ೨೪ | ೩೪.೨೯ |
| ೦೨ | ಸೌರವಿದ್ಯುತ್ | ೨೭ | ೩೮.೬ |
| ೦೪ | ಇಲ್ಲ | ೧೯ | ೨೭.೧೪ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೧೦ ಹಾಡಿ/ಪೋಡು/ಕಾಲೊನಿಗಳು ಹೊಂದಿರುವ ವಿದ್ಯುತ್ ಹೊಂದಿರುವ ವಿವರವನ್ನು ತಿಳಿಸುತ್ತದೆ. ಶೇಕಡಾ ೩೪.೨೯ರಷ್ಟು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಿಂದ, ಶೇಕಡಾ ೩೮.೬ರಷ್ಟು ಸೌರ ವಿದ್ಯುತ್ ಪಡೆಯುತ್ತವೆ. ಶೇಕಡಾ ೨೭ ರಷ್ಟು ಹಾಡಿ/ಪೋಡುಗಳು ವಿದ್ಯುತ್ ಸೌಲಭ್ಯ ಹೊಂದಿಲ್ಲ.

ಆಧುನಿಕ ಯುಗದ ಅತೀ ಅವಶ್ಯಕ ಮತ್ತು ದಿನನಿತ್ಯದ ಜೀವನದಲ್ಲಿ ಹಾಸು ಹೊಕ್ಕಾಗಿರುವುದು ವಿದ್ಯುತ್. ಒಟ್ಟಾರೆ ಶೇಕಡಾ ೭೩ ರಷ್ಟು ಹಾಡಿಗಳು ವಿದ್ಯತ್ ಸೌಲಭ್ಯ ಹೊಂದಿವೆ. ಇದರಲ್ಲಿ ಹೆಚ್ಚಿನ ಹಾಡಿಗಳು ಸೌರವಿದ್ಯುತ್ ಫಲಕದ ಮೂಲಕ ಹಾಡಿಯಲ್ಲಿ ಬೀದಿ ದೀಪ ಹೊಂದಿವೆ. ಆದರೆ ಮಳೆಗಾಲದಲ್ಲಿ ಬಿಸಿಲು ಬೀಳದಿದ್ದಾಗ ಇವುಗಳು ಕೆಲಸ ಮಾಡುವುದಿಲ್ಲ ಎಂಬ ಅಂಶವನ್ನು ಅಧ್ಯಯನದ ಸಂದರ್ಭದಲ್ಲಿ ಹಂಚಿಕೊಂಡಿದ್ದಾರೆ. ಅಲ್ಲದೆ ಬಹಳಷ್ಟು ಕಡೆ ಸೌರಫಲಕಗಳು ರಿಪೇರಿಗೆ ಬಂದಿರುವುದನ್ನು ಗಮನಿಸಲಾಗಿದೆ. ಹಲವು ಕಡೆ ವಿದ್ಯುತ್ ಪೂರೈಕೆಗೆ ಇರುವ ಅಡೆ ತಡೆಗಳನ್ನು ಅಧ್ಯಾಯ ನಾಲ್ಕರಲ್ಲಿ ಚರ್ಚಿಸಲಾಗಿದೆ.

### ೨.೩.೧೨. ಕುಡಿಯುವ ನೀರಿನ ಲಭ್ಯತೆ

ಮಾನವನ ಅವಶ್ಯಕತೆಗಳಲ್ಲಿ ಗಾಳಿಯ ನಂತರ ಎರಡನೆ ಸ್ಥಾನ ನೀರಿನದ್ದು. ಇಂತಹ ಮೂಲಭೂತ ಅವಶ್ಯಕತೆಯ ಕೊರತೆಯನ್ನು ಆದಿವಾಸಿಗಳು ಅನುಭವಿಸುತ್ತಿದ್ದಾರೆ.

**ಕೋಷ್ಟಕ: ೨.೧೧: ಕುಡಿಯುವ ನೀರಿನ ಮೂಲದ ವಿವರ**

| ಕ್ರ.ಸಂ | ನೀರಿನ ಮೂಲದ ವಿವರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ಕೊಳವೆ ಬಾವಿ | ೨೬ | ೩೭.೧೪ |
| ೦೨ | ತೆರೆದ ಬಾವಿ | ೧೨ | ೧೭.೦೧ |
| ೦೩ | ನದಿ, ತೊರೆ | ೧೫ | ೨೧.೪೩ |
| ೦೪ | ಕೆರೆ, ಇತರೆ | ೧೭ | ೨೪.೨೯ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೧೧ ಹಾಡಿ/ಪೋಡು/ಕಾಲೊನಿಗಳು ಕುಡಿಯುವ ನೀರಿಗಾಗಿ ಅವಲಂಬಿಸಿರುವ ಮೂಲಗಳ ವಿವರವನ್ನು ಸೂಚಿಸುತ್ತದೆ. ಶೇಕಡಾ ೩೭.೧೪ ಕೊಳವೆ ಬಾವಿ ನೀರನ್ನು ಬಳಸುತ್ತಿದ್ದಾರೆ. ಶೇಕಡಾ ೧೭.೧ ರಷ್ಟು ತರೆದ ಬಾವಿಗಳನ್ನು ಅವಲಂಭಿಸಿದ್ದರೆ ಶೇಕಡಾ ೨೧.೪೩ ರಷ್ಟು ನದಿ, ತೊರೆಗ ಳ ನೀರನ್ನು ಬಳಸುತ್ತಾರೆ. ಶೇಕಡಾ ೧೭ ರಷ್ಟು ಕೆರೆ ಮತ್ತಿತರೆ ಮೂಲಗಳಿಂದ ನೀರನ್ನು ಬಳಸುತ್ತಿದ್ದಾರೆ.

ಬೇಸಿಗೆ ಸಂದರ್ಭದಲ್ಲಿ ನೀರಿನ ತೊಂದರೆ ಅನುಭವಿಸುವುದು ಕಂಡು ಬಂದಿದೆ. ಮತ್ತು ಇವು ನೇರವಾಗಿ ಕುಡಿಯಲು ಯೋಗ್ಯವಾಗಿರುವುದಿಲ್ಲ. ಆದರೆ ಅನಿವಾರ್ಯ ಪರಿಸ್ಥಿತಿಯಲ್ಲಿ ಅಂತಹ ನೀರನ್ನೇ ಬಳಸುತ್ತಿರುವುದು ಅಧ್ಯಯನದಿಂದ ಕಂಡುಬಂದಿದೆ. ಕಲುಷಿತ ನೀರಿನ ಬಳಕೆಯಿಂದಾಗಿ ಇವರು ಮೇಲಿಂದ ಮೇಲೆ ಅನಾರೋಗ್ಯ ಪೀಡಿತರಾಗುವುದು ಸಾಮಾನ್ಯವಾಗಿದೆ.

**೨.೩.೧೩. ನೀರಿನ ಲಭ್ಯತೆಯ ಮಾಹಿತಿ**

ಆದಿವಾಸಿಗಳು ಅರಣ್ಯಗಳಲ್ಲಿ ಸರ್ವಋತು ನೀರಿನ ಮೂಲ ಇರುವಂತಹ ಕಡೆ ನೆಲೆಸುತ್ತಿದ್ದರು. ಹಲವು ಕಾರಣಗಳಿಂದ ಅವರ ನೆಲೆಗಳನ್ನು ಸ್ಥಳಾಂತರಿಸಲಾಗಿದೆ. ಅವರಿಗೆ ನೀಡಿರುವ ನೆಲೆಗಳು ನೀರಿನ ಮೂಲಕ್ಕೆ ದೂರವಾಗಿದ್ದು ಕಷ್ಟಪಡುವಂತಾಗಿದೆ.

**ಕೋಷ್ಟಕ: ೨.೧೨: ನೀರಿನ ಲಭ್ಯತೆಯ ಅಂತರದ ವಿವರ**

| ಕ್ರ.ಸಂ | ನೀರಿನ ಲಭ್ಯತೆಯ ಅಂತರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧–೨ ಕಿ.ಮೀ | ೨೩ | ೩೨.೮೬ |
| ೦೨ | ೨–೩ ಕಿ.ಮೀ | ೧೫ | ೨೧.೦೪ |
| ೦೩ | ೩–೫ ಕಿ.ಮೀ | ೧೮ | ೨೫.೭೧ |
| ೦೪ | ೫ ಕಿ.ಮೀ. ಗಿಂತ ಹೆಚ್ಚು | ೧೪ | ೨೦ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೧೨ ಹಾಡಿ/ಪೋಡು/ಕಾಲೊನಿಗಳು ಅವಲಂಬಿಸಿರುವ ನೀರಿನ ಲಭ್ಯತೆಯ ಅಂತರದ ವಿವರವನ್ನು ಸೂಚಿಸುತ್ತದೆ. ಶೇಕಡಾ ೩೨.೮೬ ರಷ್ಟು ೧ ರಿಂದ ೨ ಕಿಲೋಮೀಟರ್, ಶೇಕಡಾ ೨೧.೦೪ ರಷ್ಟು ೨ ರಿಂದ ೩ ಕಿಲೋಮೀಟರ್, ಶೇಕಡಾ ೨೫.೭೧ ರಷ್ಟು ೩ ರಿಂದ ೫ ಕಿಲೋಮೀಟರ್ ಮತ್ತು ಶೇಕಡಾ ೨೦ ರಷ್ಟು ೫ ಕಿಲೋಮೀಟರ್ ಗಿಂತ ಹೆಚ್ಚಿನ ದೂರ ಕ್ರಮಿಸಿ ನೀರನ್ನು ಸಂಗ್ರಹಿಸಬೇಕಾದ ವಾಸ್ತವತೆಯನ್ನು ವ್ಯಕ್ತಪಡಿಸುತ್ತದೆ.

ಕೆಲವು ಹಾಡಿಗಳಿಗೆ ಮಾತ್ರ ನೀರು ಹತ್ತಿರದಲ್ಲಿ ದೊರೆಯುತ್ತವೆ. ಹಲವು ಹಾಡಿಗಳು ಬಹಳ ದೂರ ಕ್ರಮಿಸಿಯೇ ನೀರನ್ನು ಪಡೆಯಬೇಕಾಗಿದೆ. ಕೆಲವು ಕಡೆ ನದಿ ಹತ್ತಿರವಿದ್ದರೂ ನೀರನ್ನು ಬಳಸಲು ಅರಣ್ಯ ಇಲಾಖೆಯ ಅನುಮತಿ ಇಲ್ಲದೆ ಆದಿವಾಸಿಗಳು ಪರದಾಡುವಂತಹ ಪರಿಸ್ಥಿತಿಯನ್ನು ಕಾಣಲಾಗಿದೆ.

### ೨.೩.೧೪. ಹಾಡಿ/ಪೋಡು/ಕಾಲೊನಿಗಳಿಗೆ ನ್ಯಾಯಾಬೆಲೆ ಅಂಗಡಿ ಲಭ್ಯತೆ

ಹಸಿವು ಮುಕ್ತ ಸಮಾಜಕ್ಕಾಗಿ ಸರ್ಕಾರ ರಿಯಾಯಿತಿ ದರ/ಉಚಿತ ಪಡಿತರ ವ್ಯವಸ್ಥೆ ಮಾಡಿದೆ. ಆದರೆ ಅರಣ್ಯವಾಸಿಗಳಿಗೆ ಇದನ್ನು ಪಡೆಯಲು ಸಹ ಹಲವು ಸಮಸ್ಯೆಗಳು ಇವೆ ಎಂಬುದನ್ನು ಕಂಡುಕೊಳ್ಳಲಾಗಿದೆ.

**ಕೋಷ್ಟಕ: ೨.೧೩: ನ್ಯಾಯಾಬೆಲೆ ಅಂಗಡಿ ಲಭ್ಯತೆಯ ಅಂತರದ ವಿವರ**

| ಕ್ರ.ಸಂ | ನ್ಯಾಯಾಬೆಲೆ ಅಂಗಡಿ ಲಭ್ಯತೆ ಅಂತರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧–೨ ಕಿ.ಮೀ | ೧೯ | ೨೭.೧೪ |
| ೦೨ | ೨–೩ ಕಿ.ಮೀ | ೨೩ | ೩೨.೦೯ |
| ೦೩ | ೩–೫ ಕಿ.ಮೀ | ೧೬ | ೨೨.೮೬ |
| ೦೪ | ೫ ಕಿ.ಮೀ. ಗಿಂತ ಹೆಚ್ಚು | ೧೨ | ೧೭.೧೪ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೧೩ ಹಾಡಿ/ಪೋಡು/ಕಾಲೊನಿಗಳು ನ್ಯಾಯಾಬೆಲೆ ಅಂಗಡಿಗಳನ್ನು ಹೊಂದಿರುವ ಅಂತರದ ವಿವರವನ್ನು ನೀಡುತ್ತದೆ. ಶೇಕಡಾ ೨೭.೧೪ ರಷ್ಟು ೧ ರಿಂದ ೨ ಕಿಲೋಮೀಟರ್, ಶೇಕಡಾ ೩೨.೦೯ ರಷ್ಟು ೨ ರಿಂದ ೩ ಕಿಲೋಮೀಟರ್, ಶೇಕಡಾ ೨೨.೮೬ ರಷ್ಟು ೩ ರಿಂದ ೫ ಕಿಲೋಮೀಟರ್ ಮತ್ತು ಶೇಕಡಾ ೧೭.೧೪ ರಷ್ಟು ೫ ಕಿಲೋಮೀಟರ್ ಗಿಂತ ಹೆಚ್ಚಿನ ದೂರ ಕ್ರಮಿಸಿ ಪಡಿತರ ತರಬೇಕಾದ ಅನಿವಾರ್ಯತೆಯನ್ನು ಕಾಣಲಾಗಿದೆ.

ಸರ್ಕಾರ ಯಾರೊಬ್ಬರೂ ಹಸಿವಿನಿಂದ ಬಳಲಬಾರದು ಎಂಬ ಉದ್ದೇಶದಿಂದ. ಪಡಿತರ ವ್ಯವಸ್ಥೆ ಮಾಡಿದೆ. ಮತ್ತು ರಿಯಾತಿ ದರದಲ್ಲಿ ಆಹಾರ ದಾನ್ಯಗಳನ್ನು

ವಿತರಿಸಲಾಗುತ್ತಿದೆ. ಇದು ಒಳ್ಳೆಯದೇ ಆದರೆ ಪಡಿತರ ದಾನ್ಯಗಳನ್ನು ಪಡೆಯಲು ೫ ಕೀಲೋಮೀಟರ್‌ಗಿಂತ ಹೆಚ್ಚಿನ ದೂರ ಕ್ರಮಿಸಬೇಕಾದ ಪ್ರಸಂಗ ಹಾಡಿಯಲ್ಲಿ ಕಾಣಬಹುದಾಗಿದೆ. ಇನ್ನು ಕೆಲವು ಕಡೆ ತಿಂಗಳಲ್ಲಿ ಎರೆಡು ದಿನ ಬಂದು ಪಡಿತರ ವಿತರಿಸಿ ಹೋಗುವ ಪರಿಪಾಟವಿದೆ. ಸರ್ಕಾರದ ನೀತಿ ಪ್ರಕಾರ ತಿಂಗಳು ಪೂರ್ತಿ ಆಹಾರ ದಾನ್ಯ ವಿತರಿಸಬೇಕು. ಜನರು ತಮಗೆ ಅನುಕೂಲವಾದಾಗ ಬಂದು ಸಂಗ್ರಹಿಸುತ್ತಾರೆ ಎಂಬುದಾಗಿದೆ. ಈ ನಿಯಮವನ್ನು ಗಣನೆಗೆ ತೆಗೆದುಕೊಳ್ಳದೆ ತಮಗೆ ಅನುಕೂಲವಾದ ಸಮಯ ಮತ್ತು ದಿನಗಳಲ್ಲಿ ಆಹಾರ ದಾನ್ಯಗಳನ್ನು ವಿತರಿಸುತ್ತಾರೆ. ಅಲ್ಲದೆ ಮಕ್ಕಳಿಲ್ಲದ ವೃದ್ಧರು ಪಡಿತರ ತರಲು ಹಲವು ಕಿಲೋಮೀಟರ್ ನಡೆಯುವುದು ಕೂಡ ಕಷ್ಟಕರವಾಗಿದೆ. ಹಲವು ಹಾಡಿ/ಪೋಡುಗಳಿಗೆ ರಸ್ತೆ ಮತ್ತು ವಾಹನ ಸೌಲಭ್ಯವಿಲ್ಲದಿರುವುದನ್ನು ಕೋಷ್ಟಕ ೨.೩ ಮತ್ತು ೨.೪ ರಲ್ಲಿ ಕಂಡುಕೊಂಡಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

### ೨.೩.೧೫. ಹಾಡಿ/ಪೋಡು/ಕಾಲೊನಿಗಳಿಗೆ ಇರುವ ಮಾರುಕಟ್ಟೆ ಅಂತರ

ಅಗತ್ಯ ವಸ್ತುಗಳ ಖರೀದಿಗೆ ಮಾರುಕಟ್ಟೆ ಸನಿಹದಲ್ಲಿದ್ದರೆ ದೈನಂದಿನ ಜೀವನ ಸುಗಮವಾಗುತ್ತದೆ. ಆದರೆ ಆದಿವಾಸಿಗಳು ನಗರ/ಪಟ್ಟಣಗಳಿಂದ ದೂರ ವಾಸ ಮಾಡುವುದರಿಂದ ಮಾರುಕಟ್ಟೆಗೆ ಕ್ರಮಿಸಬೇಕಾದ ಅನಿವಾರ್ಯತೆ ಇದೆ.

**ಕೋಷ್ಟಕ: ೨.೧೪: ಮಾರುಕಟ್ಟೆ ಅಂತರದ ವಿವರ**

| ಕ್ರ.ಸಂ | ಮಾರುಕಟ್ಟೆ ಅಂತರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧–೨ ಕಿ.ಮೀ | ೧೨ | ೧೭.೧೪ |
| ೦೨ | ೨–೩ ಕಿ.ಮೀ | ೧೭ | ೨೪.೦೩ |
| ೦೩ | ೩–೫ ಕಿ.ಮೀ | ೨೧ | ೩೦ |
| ೦೪ | ೫ ಕಿ.ಮೀ. ಗಿಂತ ಹೆಚ್ಚು | ೨೦ | ೨೮.೫೭ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೧೪ ಹಾಡಿ/ಪೋಡು/ಕಾಲೊನಿಗಳು ಮಾರುಕಟ್ಟೆ ಹೊಂದಿರುವ ಅಂತರದ ವಿವರವನ್ನು ನೀಡುತ್ತದೆ. ೫ ಕಿಲೋಮೀಟರ್‌ಗಿಂತ ಹೆಚ್ಚು ದೂರ ಕ್ರಮಿಸಬೇಕಾದ ಅನಿವಾರ್ಯತೆಯನ್ನು ಶೇಕಡಾ ೨೮.೫೭ ರಷ್ಟು ಜನರು ಅನುಭವಿಸುತ್ತಿದ್ದಾರೆ. ವಾಹನ ಸೌಲಭ್ಯವಿಲ್ಲದ ಇವರಿಗೆ ಏನಾದರೂ ವಸ್ತು ಖರೀದಿಸುವುದಿದ್ದರೆ ಒಂದು ದಿನ ಪೂರ್ತಿ ಅದಕ್ಕೇ ಮೀಸಲಿಡಬೇಕಾದ ಅನಿವಾರ್ಯತೆ ಇದೆ. ಇದು ಆದಿವಾಸಿ ಜನರ ಬವಣೆಗೆ ಕೈಗನ್ನಡಿ.

### ೨.೩.೧೬. ಪ್ರಾಥಮಿಕ ಶಾಲೆ ವಿವರ

ಉಚಿತ ಮತ್ತು ಕಡ್ಡಾಯ ಶಿಕ್ಷಣ ಸರ್ಕಾರದ ಆದ್ಯತೆಯಾಗಿದೆ. ಆದರೆ ಆದಿವಾಸಿಗಳು ನೆಲೆಸಿರುವೆಡೆ ಪ್ರಾಥಮಿಕ ಶಾಲೆಗಳ ಅವಶ್ಯಕತೆ ಇದೆ.

**ಕೋಷ್ಟಕ: ೨.೧೫: ಪ್ರಾಥಮಿಕ ಶಾಲೆ ಲಭ್ಯತೆ ವಿವರ**

| ಕ್ರ.ಸಂ | ಶಾಲೆ ಲಭ್ಯತೆ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ಸ್ವಂತ ಊರು | ೨೪ | ೩೪.೨೯ |
| ೦೨ | ೧–೨ ಕಿ.ಮೀ | ೨೮ | ೪೦ |
| ೦೩ | ೨–೩ ಕಿ.ಮೀ. | ೧೩ | ೧೮.೫೭ |
| ೦೪ | ೩ಕಿ.ಮೀ. ಗಿಂತ ಹೆಚ್ಚು | ೫ | ೭.೧೪ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೧೫ ಹಾಡಿ/ಪೋಡು/ಕಾಲೊನಿಗಳು ಪ್ರಾಥಮಿಕ ಶಾಲೆ ಹೊಂದಿರುವ ಮಾಹಿತಿ ಹೊದಗಿಸುತ್ತದೆ. ಶೇಕಡಾ ೩೪.೨೯ರಷ್ಟು ಅದೇ ಹಾಡಿ/ಪೋಡುಗಳಲ್ಲಿ ಪ್ರಾಥಮಿಕ ಶಾಲೆ ಹೊಂದಿವೆ. ಶೇಕಡಾ ೪೦ರಷ್ಟು ಒಂದರಿಂದ ಎರೆಡು ಕಿ.ಮೀ, ಶೇಕಡಾ ೧೮.೫೭ ರಷ್ಟು ೩ ಕಿ.ಮೀ. ದೂರವಿದ್ದರೆ ಶೇಕಡಾ ೭.೧೪ರಷ್ಟು ಹಾಡಿಗಳ ಮಕ್ಕಳು ಮೂರು ಕಿ.ಮೀ ಗಿಂತ ಹೆಚ್ಚು ದೂರ ಕ್ರಮಿಸಬೇಕಾದ ಅನಿವಾರ್ಯತೆ ಇದೆ.

ಕೆಲವು ಕಡೆ ಶಾಲೆಗಳು ಇವೆ ಎನ್ನುವುದನ್ನು ಬಿಟ್ಟರೆ ಅಲ್ಲಿ ಶಿಕ್ಷಕರಾಗಲಿ, ವಿದ್ಯಾರ್ಥಿಗಳಾಗಲಿ ಇಲ್ಲ. ಇನ್ನು ಕೆಲವು ಕಡೆ ಆದಿವಾಸಿಗಳ ಬಗೆಗೆ ಅಭಿಮಾನವಾಗಲಿ ಅಥವಾ ಆದಿವಾಸಿಗಳ ಕುರಿತ ಜ್ಞಾನವಾಗಲಿ ಇರುವವರನ್ನ ನೇಮಿಸದೇ ಇರುವುದನ್ನು ಗಮನಿಸಲಾಗಿದೆ. ಇಂತಹ ಶಿಕ್ಷಕರು ಆದಿವಾಸಿ ಮಕ್ಕಳ ಬಗೆಗೆ ತಾತ್ಸಾರ ಮನೋಭಾವ ತಾಳುತ್ತಾರೆ ಇದು ಮಕ್ಕಳ ಮೇಲೆ ಪರಿಣಾಮ ಬೀರಿ ಮಕ್ಕಳು ಅರ್ಧಕ್ಕೇ ಶಾಲೆ ನಿಲ್ಲಿಸುತ್ತಿರುವ ಹಲವು ಉದಾಹರಣೆಗಳನ್ನು ಅಧ್ಯಯನದ ಸಂದರ್ಭದಲ್ಲಿ ಕಂಡುಬಂದಿದೆ. ಕೆಲವು ಕಡೆ ಆಶ್ರಮ ಶಾಲೆಗಳನ್ನು ತೆರೆಯಲಾಗಿದೆಯಾದರೂ ಅವು ಅನುದಾನದ ಸಮಸ್ಯೆ ಎದುರಿಸುತ್ತಿರುವುದನ್ನು ಗಮನಿಸಲಾಗಿದೆ.

ಶಿಕ್ಷಣ ಪಡೆಯುವುದು ಪ್ರತಿಯೊಂದು ಮಗುವಿನ ಹಕ್ಕು ಮತ್ತು ಕೊಡಿಸುವುದು ಪ್ರತಿಯೊಬ್ಬ ಪಾಲಕರ ಕರ್ತವ್ಯ. ಇದಕ್ಕೆ ಪೂರಕ ವ್ಯವಸ್ಥೆ ಮಾಡುವುದು ಸರ್ಕಾರದ ಜವಾಬ್ದಾರಿ. ಇಲ್ಲಿನ ಪರಿಸ್ಥಿತಿ ಗಮನಿಸಿದರೆ ಇನ್ನೂ ಪ್ರಾಥಮಿಕ ಶಿಕ್ಷಣ ಕೊಡಿಸಲಾಗದಷ್ಟು ಭಾರತ ಹಿಂದುಳಿದಿದೆಯೇ ಎಂಬ ಪ್ರಶ್ನೆ ಹೇಳುತ್ತದೆ.

### ೨.೩.೧೭. ಪ್ರೌಢ ಶಾಲೆ ಅಂತರದ ಮಾಹಿತಿ

ಪ್ರೌಢಶಾಲೆಗಳು ಸನಿಹದಲ್ಲಿದ್ದರೆ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಾರೆ. ಆದರೆ ಆದಿವಾಸಿ ಮಕ್ಕಳು ಹಲವು ಕಿಲೋಮೀಟರ್ ಕ್ರಮಿಸಬೇಕಾಗಿದೆ.

**ಕೋಷ್ಟಕ: ೨.೧೬: ಪ್ರೌಢ ಶಾಲೆ ಅಂತರದ ವಿವರ**

| ಕ್ರ.ಸಂ | ಶಾಲೆ ಅಂತರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧–೨ ಕಿ.ಮೀ | ೧೩ | ೧೮.೫೭ |
| ೦೨ | ೨–೩ ಕಿ.ಮೀ | ೧೫ | ೨೧.೦೪ |
| ೦೩ | ೩–೫ ಕಿ.ಮೀ | ೨೩ | ೩೨.೮೬ |
| ೦೪ | ೫ ಕಿ.ಮೀ. ಗಿಂತ ಹೆಚ್ಚು | ೧೯ | ೨೭.೧೪ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೧೬ ಹಾಡಿ/ಪೋಡು/ಕಾಲೊನಿಗಳು ಪ್ರೌಢ ಶಾಲೆ ಹೊಂದಿರುವ ಮಾಹಿತಿ ಹೊದಗಿಸುತ್ತದೆ. ಶೇಕಡಾ ೧೮.೫೭ ರಷ್ಟು ಒಂದರಿಂದ ಎರೆಡು ಕಿಲೋಮೀಟರ್, ಶೇಕಡಾ ೨೧.೦೪ ರಷ್ಟು ಎರೆಡರಿಂದ ಮೂರು ಕಿಲೋಮೀಟರ್ ಶೇಕಡಾ ೩೨.೮೬ ರಷ್ಟು ಮೂರರಿಂದ ಐದು ಕಿ.ಮೀ ದೂರ ಇದ್ದರೆ ಶೇಕಡಾ ೨೭.೧೪ ರಷ್ಟು ಹಾಡಿ/ಪೋಡುಗಳ ಮಕ್ಕಳು ಐದು ಕಿ.ಮೀಗಿಂತ ಹೆಚ್ಚು ದೂರ ಕ್ರಮಿಸಬೇಕಾದ ಅನಿವಾರ್ಯತೆ ಇದೆ.

ಸರ್ಕಾರಿ ಬಸ್ಸುಗಳು ಇರುವೆಡೆ ರಿಯಾಯಿತಿ ದರದಲ್ಲಿ ಮಕ್ಕಳು ಶಾಲೆಗೆ ಹೋಗಿ ಬರಬಹುದು. ಆದರೆ ಮೇಲೆ ಹೇಳಿದಂತೆ ಹಲವು ಕಡೆ ಖಾಸಗೀ ವಾಹನಗಳೇ ಅನಿವಾರ್ಯ ಇಂತಹ ಕಡೆ ಕಡು ಬಡವರಾದ ಆದಿವಾಸಿಗಳಿಗೆ ಪ್ರತಿನಿತ್ಯ ಸಂಚಾರಿ ವೆಚ್ಚ ಭರಿಸುವುದು ಕಷ್ಟಕರವಾದುದಾಗಿದೆ.

### ೨.೩.೧೮. ಕಾಲೇಜು ಅಂತರದ ಮಾಹಿತಿ

ಆದಿವಾಸಿ ಮಕ್ಕಳಿಗೆ ಕಾಲೇಜು ಶಿಕ್ಷಣ ಹಲವು ಕಾರಣಗಳಿಂದ ಇನ್ನೂ ಮರೀಚಿಕೆಯಾಗಿದೆ. ಇಂತಹ ಕಾರಣಗಳಲ್ಲಿ ದೂರ ಕೂಡ ಒಂದು

**ಕೋಷ್ಟಕ: ೨.೧೭: ಕಾಲೇಜು ಅಂತರದ ವಿವರ**

| ಕ್ರ.ಸಂ | ಕಾಲೇಜುಗಳ ದೂರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೨–೩ ಕಿ.ಮೀ | ೯ | ೧೨.೮೬ |
| ೦೨ | ೩–೬ ಕಿ.ಮೀ | ೧೪ | ೨೦ |
| ೦೩ | ೭–೧೦ ಕಿ.ಮೀ | ೧೩ | ೧೮.೫೭ |
| ೦೪ | ೧೦ ಕಿ.ಮೀ. ಗಿಂತ ಹೆಚ್ಚು | ೩೪ | ೪೮.೫೭ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೧೭ ಹಾಡಿ/ಪೋಡು/ಕಾಲೊನಿಗಳು ಕಾಲೇಜನ್ನು ಹೊಂದಿರುವ ಅಂತರದ ಮಾಹಿತಿ ನೀಡುತ್ತದೆ. ಶೇಕಡಾ ೧೨.೮೬ ಎರೆಡರಿಂದ ಮೂರು ಕಿಲೋಮೀಟರ್, ಶೇಕಡಾ ೨೦ ರಷ್ಟು ಮೂರರಿಂದ ಆರು ಕಿಲೋಮೀಟರ್, ಶೇಕಡಾ ೧೮.೫೭ ರಷ್ಟು ಏಳರಿಂದ ಹತ್ತು ಕಿಲೋಮೀಟರ್ ಮತ್ತು ಶೇಕಡಾ ೪೮.೫೭ ರಷ್ಟು ೧೦ ಕಿಲೋಮೀಟರ್ ಗಿಂತ ಹೆಚ್ಚಿನ ದೂರ ಸಂಚರಿಸಬೇಕಾದ ಅನಿವಾರ್ಯತೆ ಇದೆ.

ಕಾಲೇಜು ವಿದ್ಯಾರ್ಥಿಗಳು ಕೂಡ ಪ್ರೌಢ ಶಾಲೆ ಮಕ್ಕಳು ಅನುಭವಿಸುವ ಸಂಕಷ್ಟವನ್ನು ಎದುರಿಸುತ್ತಿದ್ದಾರೆ. ಅಲ್ಲದೆ ಹಾಸ್ಟೆಲ್ ವ್ಯವಸ್ಥೆ ಯಾವಾಗಲೂ ಕಾಲೇಜ್ ಪ್ರಾರಂಭವಾಗಿ ಎರೆಡು ಅಥವಾ ಮೂರು ತಿಂಗಳು ಕಳೆದ ನಂತರ ಪ್ರಾರಂಭವಾಗುವುದರಿಂದ ಇಲ್ಲಿಯೂ ಕೂಡ ಕಷ್ಟವನ್ನ ಅನುಭವಿಸುತ್ತಾರೆ. ಅಲ್ಲದೆ ನಾಡಿನ ಮತ್ತು ಕಾಡಿನ ಮಕ್ಕಳು ಜೊತೆಗೆ ಇರಬೇಕಾದ ಸಂದರ್ಭದಲ್ಲಿ ಇವರಿಗೆ ಹೊಂದಾಣಿಕೆ ಮಾಡಿಕೊಳ್ಳಲು ಬಹಳ ಕಠಿಣವಾದುದಾಗಿದೆ ಎಂಬ ಅಂಶವನ್ನು ಅಧ್ಯಯನದ ಸಂದರ್ಭದಲ್ಲಿ ಯುವ ಮಾಹಿತಿದಾರರು ವ್ಯಕ್ತಪಡಿಸಿದ್ದಾರೆ. ಇಂತಹ ಕಾರಣಗಳಿಂದಾಗಿ ಆದಿವಾಸಿ ಮಕ್ಕಳು ಇತ್ತ ಕಾಡಿಗೂ ಸಲ್ಲದೆ ಅತ್ತ ನಾಡಿಗೂ ಸಲ್ಲದೆ ಅತಂತ್ರರಾಗುತ್ತಿದ್ದಾರೆ.

### ೨.೩.೧೯. ಹಾಡಿ/ಪೋಡು/ಕಾಲೊನಿಗಳ ಸಮಸ್ಯೆಗಳು ಮತ್ತು ಕಾರಣಗಳು

ಆದಿವಾಸಿಗಳು ನೆಲೆಗೊಂಡಿರುವ ಹಾಡಿ/ಪೋಡು/ಕಾಲೊನಿಗಳು ಹಲವು ಸಮಸ್ಯೆಗಳಿಂದ ಬಳಲುತ್ತಿವೆ. ಇದಕ್ಕೆ ಬೇರೆ ಬೇರೆ ಕಾರಣಗಳಿರುವುದನ್ನು ಅಧ್ಯಯನದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ.

## ಕೋಷ್ಟಕ: ೨.೧೮: ಹಾಡಿ/ಪೋಡು/ಕಾಲೊನಿಗಳಲ್ಲಿರುವ ಸಮಸ್ಯೆಗಳು ಮತ್ತು ಕಾರಣಗಳು

| ಕ್ರ.ಸಂ | ಸಮಸ್ಯೆಗಳು | ಸಮಸ್ಯೆಗೆ ಕಾರಣಕರ್ತರು<br>1. ಅರಣ್ಯ ಇಲಾಖೆ ಸಿಬ್ಬಂದಿ. 2. ಗ್ರಾಮ ಪಂಚಾಯತ್ ಸಿಬ್ಬಂದಿ. 3. ಗ್ರಾಮ ಪಂಚಾಯತ್ ಸದಸ್ಯರು. 4. ಗ್ರಾಮವಾಸಿಗಳಿಂದ 5. ನೆರೆ ಗ್ರಾಮವಾಸಿಗಳಿಂದ. 6. ಕಂದಾಯ ಇಲಾಖೆಯವರಿಂದ. 7.ಲ್ಯಾಂಪ್ಸ್ ಸೊಸೈಟಿ. 8. ಕೆ.ಪಿ.ಟಿ.ಸಿ.ಎಲ್. 9.ಸಮಾಜ ಕಲ್ಯಾಣ ಇಲಾಖೆ. 10. ಲೋಕೋಪಯೋಗಿ ಇಲಾಖೆ. 11. ಸಾರಿಗೆ ಇಲಾಖೆ. | | | | | | | | | | |
|---|---|---|---|---|---|---|---|---|---|---|---|---|
| | | 1 | 2 | 3 | 4 | 5 | 6 | 7 | 8 | 9 | 10 | 11 |
| ೧ | ನಿವೇಶನ ಸಮಸ್ಯೆ | ೪೯ | ೨೭ | ೩೦ | ೧೫ | ೦೦ | ೦೫ | ೦೦ | ೦೦ | ೦೦ | ೦೦ | ೦೦ |
| ೨ | ಮನೆಗಳ ಸಮಸ್ಯೆ | ೪೯ | ೩೫ | ೨೮ | ೨೦ | ೦೦ | ೦೦ | ೦೦ | ೦೦ | ೦೦ | ೦೦ | ೦೦ |
| ೩ | ರಸ್ತೆ ಸಮಸ್ಯೆ | ೪೨ | ೩೫ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೩೭ | ೦೦ |
| ೪ | ವಿದ್ಯುತ್ ಸಂಪರ್ಕ ಸಮಸ್ಯೆ | ೪೯ | ೨೫ | ೦೦ | ೦೦ | ೦೦ | ೦೦ | ೦೦ | ೪೭ | ೦೦ | ೦೦ | ೦೦ |
| ೫ | ನೀರಿನ ಸಮಸ್ಯೆ | ೭೦ | ೩೭ | ೦೦ | ೦೦ | ೦೯ | ೦೦ | ೦೦ | ೧೯ | ೦೦ | ೨೦ | ೦೦ |
| ೬ | ಸಂಪರ್ಕ/ಸಂವಹನ ಸಮಸ್ಯೆ | ೩೮ | ೦೫ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೦೦ |
| ೭ | ವಾಹನ ಸೌಲಭ್ಯ | ೪೭ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೩೯ | ೫೪ |
| ೮ | ಭೂಮಿ ಸಮಸ್ಯೆ | ೭೦ | ೪೫ | ೩೦ | ೩೭ | ೧೯ | ೭೦ | ೦೦ | ೦೦ | ೭೦ | ೦೦ | ೦೦ |
| ೯ | ಅರಣ್ಯ ಕಿರು ಉತ್ಪನ್ನಗಳ ಸಂಗ್ರಹ | ೭೦ | ೪೫ | ೧೦ | ೩೫ | ೨೦ | ೦೦ | ೦೦ | ೦೦ | ೭೦ | ೦೦ | ೨೦ |
| ೧೦ | ಅರಣ್ಯ ಕಿರು ಉತ್ಪನ್ನಗಳ ಮಾರಾಟ | ೭೦ | ೪೦ | ೦೦ | ೦೦ | ೦೦ | ೦೦ | ೭೦ | ೦೦ | ೭೦ | ೦೦ | ೨೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೧೮ ಹಾಡಿ/ಪೋಡು/ಕಾಲೊನಿಗಳಲ್ಲಿರುವ ಸಮಸ್ಯೆಗಳು ಮತ್ತು ಅವುಗಳಿಗೆ ಕಾರಣಕರ್ತರಾದವರ ವಿವರವನ್ನು ಹೊದಗಿಸುತ್ತದೆ. ಇಲ್ಲಿ ಮಾಹಿತಿದಾರರು ಪ್ರತಿಯೊಂದು ಸಮಸ್ಯೆಗೂ ಒಂದಕ್ಕಿಂತ ಹೆಚ್ಚು ಕಾರಣಕರ್ತರನ್ನು ಗುರುತಿಸಿದ್ದಾರೆ. ಕೋಷ್ಟಕದಲ್ಲಿ ನೇರವಾಗಿ ಸಂಖ್ಯೆಗಳನ್ನು ನಮೂದಿಸಲಾಗಿದೆ. ಆದರೆ ವಿವರಣೆಯಲ್ಲಿ ಪ್ರತಿಶತದಲ್ಲಿ ಹೇಳಲಾಗಿದೆ.

ನಿವೇಶನಗಳ ಸಮಸ್ಯೆಗೆ ಶೇಕಡಾ ೭೦ ರಷ್ಟು ಅರಣ್ಯ ಇಲಾಖೆ ಸಿಬ್ಬಂದಿ ಕಾರಣವಾಗಿದ್ದರೆ, ಶೇಕಡಾ ೩೮.೫೭ ರಷ್ಟು ಗ್ರಾಮ ಪಂಚಾಯತ್ ಸಿಬ್ಬಂದಿ, ಶೇಕಡಾ ೪೨.೮೫ ಗ್ರಾಮ ಪಂಚಾಯತ್ ಸದಸ್ಯರು, ಶೇಕಡಾ ೨೧.೪೨ ಗ್ರಾಮವಾಸಿಗಳಿಂದ, ಶೇಕಡಾ ೭.೧೪% ಕಂದಾಯ ಇಲಾಖೆಯವರಿಂದ ನಿವೇಶನಗಳ ಪಡೆಯುವಲ್ಲಿ ಸಮಸ್ಯೆ ಅನುಭವಿಸುತ್ತಿರುವ ಕುರಿತು ಮಾಹಿತಿ ವ್ಯಕ್ತವಾಗಿದೆ. ಒಬ್ಬ ವ್ಯಕ್ತಿಯೇ ಆಗಲಿ, ಹಾಡಿಯೇ ಆಗಲಿ ಒಂದು ಇಲಾಖೆಯ ಅಧಿಕಾರಿ ವರ್ಗದ ಜೊತೆ ವ್ಯವಹರಿಸುವುದು ಕಷ್ಟದಾಯಕವಾಗಿದೆ. ಈಗಿರುವಾಗ ತಮ್ಮ ಮಧ್ಯದಲ್ಲಿರುವವರೇ ಮತ್ತು ಹಲವು ಇಲಾಖೆಯ ಅಧಿಕಾರಿ ವರ್ಗ ಒಟ್ಟಾಗಿ ಕಿರುಕುಳ ಕೊಡಲು ಶುರುವಿಟ್ಟುಕೊಂಡರೆ ತಮ್ಮ ನೋವನ್ನು ಯಾರ ಬಳಿ ಹಂಚಿಕೊಳ್ಳಬೇಕೆಂಬ ಪ್ರಶ್ನೆ ಉದ್ಭವಿಸುತ್ತದೆ. ಅರಣ್ಯ ಇಲಾಖೆ

ಸಿಬ್ಬಂಧಿಗೆ ಸಂಬಂಧಿಸಿದಂತೆ ಇವರು ಹೇಳುವುದೆಂದರೆ ನಾವು ಖಾಲಿ ಇರುವ ಜಾಗೆ ತೋರಿಸಿದರೂ ಅದು ಅರಣ್ಯ ಇಲಾಖೆಯದ್ದು ಎಂದು ಹೇಳುತ್ತಾರೆ. ಇನ್ನು ಗ್ರಾಮ ಪಂಚಾಯತ್ ಸಿಬ್ಬಂದಿ ಸರಿಯಾದ ಮಾಹಿತಿ ನೀಡುವುದಿಲ್ಲ. ಅಂದರೆ ಯಾವುದು ಕಂದಾಯ ಭೂಮಿ ಯಾವುದು ಅರಣ್ಯ ಭೂಮಿ ಎಂದು ಸರಿಯಾಗಿ ತಿಳಿಸುವುದಿಲ್ಲ. ಜೊತೆಗೆ ಯೋಜನೆ ಸಿದ್ಧಪಡಿಸುವಾಗ ನಿಜವಾದ ಅರ್ಹ ಫಲಾನುಭವಿಗಳನ್ನು ಸರಿಯಾಗಿ ಗುರುತಿಸದೆ ಇರುವುದು. ಗ್ರಾಮ ಪಂಚಾಯತ್ ಸದಸ್ಯರಂತೂ ಸ್ವಜನ ಪಕ್ಷಪಾತ ಮತ್ತು ಭ್ರಷ್ಟಾಚಾರದಿಂದಾಗಿ ಗ್ರಾಮ ಪಂಚಾಯತ್ ಸಿಬ್ಬಂದಿಯನ್ನು ದಾರಿ ತಪ್ಪಿಸುತ್ತಾರೆ. ಈ ಎಲ್ಲಾ ಕಾರಣಗಳು ನಮಗೆ ನಿವೇಶನ ದೊರೆಯಲು ಸಮಸ್ಯೆಯಾಗಿದೆ ಎಂಬುದು ಆದಿವಾಸಿಗಳ ಅಳಲು.

ಆದಿವಾಸಿಗಳ ಮನೆಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ ಕೆಲವು ಪ್ರತಿಶತದಲ್ಲಿನ ವ್ಯತ್ಯಾಸ ಹೊರತುಪಡಿಸಿದರೆ ನಿವೇಶನ ಪಡೆಯುವಲ್ಲಿನ ಸಮಸ್ಯೆಯನ್ನೇ ಅನುಭವಿಸುತ್ತಿದ್ದಾರೆ. ಮನೆಗೆ ಸಂಬಂಧಿಸಿದಂತೆ ಅಧ್ಯಯನದ ಸಂದರ್ಭದಲ್ಲಿ ಅವಲೋಕಿಸಿದ ಅಂಶವೆಂದರೆ ಸರ್ಕಾರ ನಿರ್ಮಿಸಿದ ಮನೆಗಳಲ್ಲಿ ಆದಿವಾಸಿಗಳು ವಾಸಿಸದೇ ಇರುವುದು. ಇದಕ್ಕೆ ಹಲವು ಕಾರಣ ನೀಡುತ್ತಾರೆ. ಒಂದನೆಯದು ಆದಿವಾಸಿಗಳು ಮನೆಕಟ್ಟುವ ಮುನ್ನ ಅನುಸರಿಸುವ ಪದ್ಧತಿಯನ್ನು ಸರ್ಕಾರದ ಗುತ್ತಿಗೆದಾರರು ಅನುಸರಿಸದೇ ಇರುವುದು. ಎರಡನೆಯದಾಗಿ ಕಟ್ಟಿದ ಮನೆಗಳ ಮೇಲ್ಛಾವಣಿ ಅಥವಾ ಗೋಡೆ ಕುಸಿದು ಬಿದ್ದರೆ ನಮ್ಮ ಜೀವಕ್ಕೆ ಅಪಾಯ ಎನ್ನುವ ಭಯ. ಮೂರನೆಯದು ವಾಸ ಮಾಡುತ್ತಿದ್ದ ಮನೆಯಲ್ಲಿ ಯಾರಾದರೂ ಮರಣಿಸಿದರೆ ಅಂತಹ ಮನೆಯಲ್ಲಿ ವಾಸವನ್ನು ಮುಂದುವರೆಸಬಾರದು ಎಂಬ ಪರಿಕಲ್ಪನೆ. ಇಲ್ಲಿ ಮಾಡಬೇಕಾದ ಕಾರ್ಯ ಎಂದರೆ ಮನೆಗಳನ್ನು ನಿರ್ಮಿಸುವ ಮುನ್ನ ಆದಿವಾಸಿಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು. ಇದಕ್ಕಾಗಿ ಇಂತಹ ಕಡೆ ನೇಮಿಸುವ ಗುತ್ತಿಗೆದಾರರಿಗೆ ಅವಶ್ಯಕ ನಿಯಮಗಳನ್ನು ರೂಪಿಸುವುದು. ಹಾಗೆಯೇ ಮನುಷ್ಯನ ಸಾವಿನ ಬಗೆಗಿರುವ ಅಂಜಿಕೆ ಅಥವಾ ಭಯವನ್ನು ತೊಡೆದು ಹಾಕುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುವುದು. ಇಲ್ಲವಾದರೆ ಸರ್ಕಾರ ಎಷ್ಟೇ ಮನೆ ನಿರ್ಮಿಸಿಕೊಟ್ಟರೂ ಆದಿವಾಸಿಗಳು ಮತ್ತೆ ಗುಡಿಸಲುಗಳಲ್ಲಿ ವಾಸ ಮಾಡುವುದನ್ನು ತಪ್ಪಿಸಲಾಗದು.

ರಸ್ತೆ ಸಮಸ್ಯೆಗೆ ಮೂಲ ಕಾರಣ ಅರಣ್ಯ ಇಲಾಖೆಯವರೆಂದು ಶೇಕಡಾ ೬೦ ರಷ್ಟು ಜನ ವ್ಯಕ್ತಪಡಿಸಿದ್ದಾರೆ. ಏಕೆಂದರೆ ಅರಣ್ಯ ಇಲಾಖೆಯವರು ರಸ್ತೆ ನಿರ್ಮಿಸಲು ಬಿಡುವುದಿಲ್ಲ ಎಂಬುದು. ಗ್ರಾಮ ಪಂಚಾಯತ್‌ನವರು ಸರಿಯಾದ ಮಾಹಿತಿ ನೀಡದೇ ಇರುವುದರಿಂದ ರಸ್ತೆಗಳ ಸಮಸ್ಯೆ ಇದೆ ಎಂದು ಶೇಕಡಾ ೫೦ ವ್ಯಕ್ತಪಡಿಸಿದರೆ. ಶೇಕಡಾ ೫೨.೮೫ ಲೋಕೋಪಯೋಗಿ ಇಲಾಖೆಯವರ ಕಳಪೆ ಕಾಮಗಾರಿಯಿಂದಾಗಿ ನಾವು ಇಂತಹ ಸಮಸ್ಯೆ ಎದುರಿಸಬೇಕಾಗಿದೆ ಎಂದು ವ್ಯಕ್ತಪಡಿಸುತ್ತಿದ್ದಾರೆ.

ವಿದ್ಯುತ್ ಸಮಸ್ಯೆಗೆ ಪುನಃ ಅರಣ್ಯ ಇಲಾಖೆ ಮತ್ತು ಗ್ರಾಮಪಂಚಾಯತ್ ಸಿಬ್ಬಂದಿಗಳನ್ನು ಇಲ್ಲಿ ಹೊಣೆಗಾರರನ್ನಾಗಿ ಮಾಡಿರುವುದನ್ನು ಗಮನಿಸಲಾಗಿದೆ. ಜೊತೆಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮದವರನ್ನೂ ಇಲ್ಲಿ ಹೊಣೆಗಾರರನ್ನಾಗಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಅಧ್ಯಾಯ ೦೪ ರ ೪.೩.೫. ರಲ್ಲಿನ ವಿದ್ಯುತ್ ಮಂಡಳಿ ನೀತಿ ನಿಯಮಗಳು ಎಂಬ ಉಪಶೀರ್ಷಿಕೆ ಅಡಿ ವಿವರವಾಗಿ ಚರ್ಚಿಸಲಾಗಿದೆ.

ಆದಿವಾಸಿಗಳು ಅನುಭವಿಸುವ ನೀರಿನ ಸಮಸ್ಯೆಗೆ ಅರಣ್ಯ ಇಲಾಖೆಯೇ ಮೂಲ ಕಾರಣ ಎಂದು ಪ್ರತಿಶತ ೧೦೦ ರಷ್ಟು ಹಾಡಿಗಳು ವ್ಯಕ್ತಪಡಿಸಿದ್ದಾರೆ. ಇದಕ್ಕೆ ಅವರು ನೀಡುವ ಕಾರಣ, ನೀರನ್ನು ಸಂಗ್ರಹಿಸಲು ತೊಂದರೆ ನೀಡುವುದು. ಮತ್ತೊಂದು ಅರಣ್ಯಕ್ಕೆ ಬೆಂಕಿ ಹಾಕದೇ ಇರುವುದರಿಂದ ಭೂಮಿ ಹದಗೊಳ್ಳುತ್ತಿಲ್ಲ ಹೀಗಾಗಿ ಅದು ಮಳೆಗಾಲದಲ್ಲಿ ನೀರನ್ನು ಹಿಡಿದಿಟ್ಟುಕೊಳ್ಳದೆ ಬೇಸಿಗೆಯಲ್ಲಿ ನೀರಿಗೆ ಹಾಹಾಕಾರ ವಾಗುತ್ತಿದೆ. ಜೊತೆಗೆ ವನ್ಯಪ್ರಾಣಿಗಳಿಗೂ ಇದರಿಂದ ಸಮಸ್ಯೆಯಾಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ಅಧ್ಯಾಯ ೦೨ ರಲ್ಲಿ ತರಗು ಬೆಂಕಿ ಮತ್ತು ಆದಿವಾಸಿಗಳ ಪಾರಂಪರಿಕ ಜ್ಞಾನ ಎಂಬ ತಲೆಬರಹದ ಅಡಿಯಲ್ಲಿ ಕೂಲಂಕುಷವಾಗಿ ಚರ್ಚಿಸಲಾಗಿದೆ. ಗ್ರಾಮ ಪಂಚಾಯತ್ ನವರು ಸರಿಯಾದ ಯೋಜನೆ ತಯಾರಿಸದೇ ಇರುವುದು ಮತ್ತು ನಿರ್ವಹಣೆ ಮಾಡದೇ ಇರುವುದೂ ಒಂದು ಕಾರಣವಾದರೆ ವಿದ್ಯುತ್ ಸರಬರಾಜಿನಲ್ಲಿನ ವ್ಯತ್ಯಯ ಕೂಡ ಕಾರಣವಾಗಿದೆ. ಜೊತೆಗೆ ಲೋಕೋಪಯೋಗಿ ಇಲಾಖೆಯ ಕಳಪೆ ಕಾಮಗಾರಿಯಿಂದ ನೀರಿನ ತೊಟ್ಟಿಗಳಲ್ಲಿ ಸೋರಿಕೆಯಾಗುತ್ತದೆ. ಹೀಗೆ ಹಲವು ಕಾರಣಗಳ ಕಾರಣಕರ್ತರನ್ನು ಗುರುತಿಸಲಾಗಿದೆ.

ವಾಹನ ಅಲಭ್ಯತೆಗೂ ಅರಣ್ಯ ಇಲಾಖೆಯವರನ್ನು ಹೊಣೆಗಾರರನ್ನಾಗಿಸಿದ್ದಾರೆ. ಅರಣ್ಯ ಇಲಾಖೆಯವರು ರಸ್ತೆ ನಿರ್ಮಿಸಲು ಅನುಮತಿ ನೀಡುತ್ತಿಲ್ಲ. ಜೊತೆಗೆ ಲೋಕೋಪಯೋಗಿ ಇಲಾಖೆಯವರ ಕಳಪೆ ಕಾಮಗಾರಿಯಿಂದ ರಸ್ತೆಗಳು ಬಾಳಿಕೆ ಬರುತ್ತಿಲ್ಲ. ಈ ಕಾರಣವನ್ನಿಟ್ಟುಕೊಂಡು ಜೊತೆಗೆ ಲಾಭಾಂಶವಿಲ್ಲ ಎಂಬ ನೆಪವೊಡ್ಡಿ ಸಾರಿಗೆ ಇಲಾಖೆಯವರು ವಾಹನಗಳನ್ನು ಓಡಿಸುತ್ತಿಲ್ಲ ಎಂಬ ಅಂಶಗಳನ್ನು ವ್ಯಕ್ತಪಡಿಸಿದ್ದಾರೆ.

ಭೂಮಿ ಸಮಸ್ಯೆ ಆದಿವಾಸಿಗಳಿಗೆ ಎಂದಿಗೂ ಅಂಟಿಕೊಂಡ ಶಾಪವಾಗಿದೆ. ಇದಕ್ಕೆ ಅರಣ್ಯ ಇಲಾಖೆ, ಕಂದಾಯ ಇಲಾಖೆ ಮತ್ತು ಸಮಾಜಕಲ್ಯಾಣ ಇಲಾಖೆಯವರನ್ನು ನೇರವಾಗಿ ಹೊಣೆಗಾರರನ್ನಾಗಿಸಿದ್ದಾರೆ. ಪಂಚಾಯತ್ ಸಿಬ್ಬಂಧಿ ಮತ್ತು ಸದಸ್ಯರ ಜೊತೆಗೆ ನೆರೆಗ್ರಾಮಗಳ ಗ್ರಾಮಸ್ಥರೂ ಆದಿವಾಸಿಗಳ ಭೂಮಿ ಸಮಸ್ಯೆಗೆ ಕಾರಣವಾಗಿರುವ ಅಂಶಗಳನ್ನು ಇಲ್ಲಿ ಗಮನಿಸಬಹುದಾಗಿದೆ.

ಅರಣ್ಯ ಕಿರು ಉತ್ಪನ್ನಗಳ ಸಂಗ್ರಹ ಮತ್ತು ಮಾರಾಟಕ್ಕೆ ಸಂಬಂಧಿಸಿದ ಸಮಸ್ಯೆಗಳಿಗೆ ಅರಣ್ಯ ಇಲಾಖೆಯವರೇ ಮೂಲ ಕಾರಣ. ಜೊತೆಗೆ ಪಂಚಾಯತ್ ವ್ಯವಸ್ಥೆಯಲ್ಲಿರುವವರು, ನೆರೆಗ್ರಾಮಸ್ಥರು, ಲ್ಯಾಂಪ್ಸ್ ಸೊಸೈಟಿ ಹಾಗೂ ಸಮಾಜಕಲ್ಯಾಣ ಇಲಾಖೆಯನ್ನು ನೇರ ಹೊಣೆಗಾರರನ್ನಾಗಿಸಲಾಗಿದೆ.

### ೨.೩.೨೦.ಹಾಡಿ/ಪೋಡು/ಕಾಲೊನಿಗಳಿಗೆ ಗ್ರಾಮ ಪಂಚಾಯಿತಿಯಿಂದ ಕಳೆದ 5 ವರ್ಷದಲ್ಲಿ ದೊರಕಿದ ಸೌಲಭ್ಯಗಳ ಮಾಹಿತಿ

ಸರ್ಕಾರ ಜನರಿಗೆ ನೀಡುವ ಸೌಲಭ್ಯಗಳನ್ನು ಪಂಚಾಯತ್ ರಾಜ್ ವ್ಯವಸ್ಥೆ ಮುಖಾಂತರ ನೀಡುತ್ತದೆ. ಕಳೆದ ಐದು ವರ್ಷದಲ್ಲಿ ಅಧ್ಯಯನ ವ್ಯಾಪ್ತಿಯಲ್ಲಿ ಆದಿವಾಸಿಗಳಿಗೆ ದೊರಕಿದ ಸೌಲಭ್ಯಗಳನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

**ಕೋಷ್ಟಕ: ೨.೧೯: ಪಂಚಾಯಿತಿಯಿಂದ ದೊರಕಿದ ಸೌಲಭ್ಯಗಳ ವಿವರ**

| ಕ್ರಸಂ | ಸೌಲಭ್ಯಗಳು | ಒಟ್ಟು ದೊರಕಿದ ಸಂಖ್ಯೆಗಳು | | | | | | | | | | | |
|---|---|---|---|---|---|---|---|---|---|---|---|---|---|
| | | ೧) ೫ ರಿಂದ ೧೦. ೨) ೧೦ ರಿಂದ ೨೦. ೩) ೨೦ ರಿಂದ ೩೦. ೪) ೩೦ ಕ್ಕಿಂತ ಹೆಚ್ಚು. ೫) ಇಲ್ಲ. | | | | | | | | | | | |
| | | ೧ | % | ೨ | % | ೩ | % | ೪ | % | ೫ | % | ಒಟ್ಟು | ಪ್ರತಿಶತ |
| ೧ | ನಿವೇಶನಗಳು | ೩೬ | ೫೧.೪೩ | ೧೩ | ೧೮.೫೭ | ೭ | ೧೦ | ೩ | ೪.೨೮ | ೧೧ | ೧೫.೭೧ | ೭೦ | ೧೦೦% |
| ೨ | ಮನೆಗಳು | ೩೯ | ೫೫.೭೧ | ೧೭ | ೨೪.೨೯ | ೫ | ೭.೧೪ | ೨ | ೨.೮೫ | ೭ | ೧೦ | ೭೦ | ೧೦೦% |
| ೩ | ಕೊಳವೆ ಬಾವಿ | ೮ | ೧೧.೪೩ | ೦ | ೦ | ೦ | ೦ | ೦ | ೦ | ೬೨ | ೮೮.೫೭ | ೭೦ | ೧೦೦% |
| ೪ | ಸಣ್ಣ ನೀರಿನ ಘಟಕ | ೧೫ | ೨೧.೪೩ | ೦ | ೦ | ೦ | ೦ | ೦ | ೦ | ೫೫ | ೭೮.೫೭ | ೭೦ | ೧೦೦% |
| ೫ | ಶೌಚಾಲಯ | ೩೩ | ೪೭.೧೪ | ೧೨ | ೧೭.೧೪ | ೫ | ೭.೧೪ | ೩ | ೪.೨೮ | ೧೭ | ೨೪.೨೯ | ೭೦ | ೧೦೦% |
| ೬ | ಸ್ನಾನದ ಕೊಠಡಿ | ೧೬ | ೨೨.೮೫ | ೪ | ೫.೭೧ | ೨ | ೨.೮೫ | ೦ | ೦ | ೪೮ | ೬೮.೫೭ | ೭೦ | ೧೦೦% |
| ೭ | ಉದ್ಯೋಗ | ೧೭ | ೨೪.೨೯ | ೦ | ೦ | ೦ | ೦ | ೦ | ೦ | ೫೩ | ೭೫.೭೧ | ೭೦ | ೧೦೦% |
| ೮ | ಉದ್ಯೋಗಖಾತ್ರಿ ಕೂಲಿ | ೧೭ | ೨೪.೨೯ | ೦ | ೦ | ೦ | ೦ | ೦ | ೦ | ೫೩ | ೭೫.೭೧ | ೭೦ | ೧೦೦% |
| ೯ | ಮನೆಗಳಿಗೆ ವಿದ್ಯುತ್ | ೨೫ | ೩೫.೭೧ | ೧೧ | ೧೫.೭೧ | ೭ | ೧೦ | ೬ | ೮.೫೭ | ೨೧ | ೩೦ | ೭೦ | ೧೦೦% |
| ೧೦ | ರಸ್ತೆ | ೧೦ | ೧೪.೨೯ | ೦ | ೦ | ೦ | ೦ | ೦ | ೦ | ೬೦ | ೮೫.೭೧ | ೭೦ | ೧೦೦% |
| ೧೧ | ಮನೆಗಳಿಗೆ ಸೋಲಾರ | ೨೩ | ೩೨.೮೬ | ೮ | ೧೧.೪೩ | ೫ | ೭.೧೪ | ೩ | ೪.೨೮ | ೩೧ | ೪೪.೨೯ | ೭೦ | ೧೦೦% |
| ೧೨ | ಬೀದಿ ದೀಪ ವ್ಯವಸ್ಥೆ | ೨೭ | ೩೮.೫೭ | ೬ | ೮.೫೭ | ೨ | ೨.೮೫೭ | ೨ | ೨.೮೫ | ೩೩ | ೪೭.೧೪ | ೭೦ | ೧೦೦% |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೧೯ ರಲ್ಲಿ ಕಂಡುಬರುವಂತೆ ಕಳೆದ ಐದು ವರ್ಷದಲ್ಲಿ ಶೇಕಡಾ ೫೧.೪೩ ಹಾಡಿ/ಪೋಡುಗಳಿಗೆ ೫ ರಿಂದ ೧೦ ನಿವೇಶನಗಳನ್ನು ಹಂಚಿಕೆ ಮಾಡಲಾಗಿದೆ. ಇದನ್ನು ವಾರ್ಷಿಕವಾಗಿ ನೋಡಿದರೆ ಪ್ರತಿಶತ ೧೦ ರಷ್ಟು ವಿತರಿಸಿದಂತೆ ಕಂಡುಬಂದಿದೆ. ಶೇಕಡಾ ೧೮.೫೭ ರಷ್ಟು ಹಾಡಿಗಳಿಗೆ ಕಳೆದ ಐದು ವರ್ಷದಲ್ಲಿ ೧೦ ರಿಂದ ೨೦ ನಿವೇಶನ ಮಂಜೂರು ಮಾಡಲಾಗಿದೆ. ಶೇಕಡಾ ೧೫.೭೧ ರಷ್ಟು

ಹಾಡಿಗಳಿಗೆ ಯಾವುದೇ ನಿವೇಶನಗಳು ಮಂಜೂರಾಗದೇ ಇರುವುದು ಅಧ್ಯಯನದಿಂದ ಕಂಡು ಬಂದಿದೆ.

ಸರ್ಕಾರದ ಆಶ್ರಯ ಮನೆ, ಇಂದಿರಾ ಆವಾಸ್ ಯೋಜನೆ, ಅಂಬೇಡ್ಕರ್ ವಸತಿ ಯೊಜನೆ ಇವುಗಳೆಲ್ಲವನ್ನು ಕೂಡಿಸಿ ಕಳೆದ ಐದು ವರ್ಷಗಳಲ್ಲಿ ೫ ರಿಂದ ೧೦ ಮನೆಗಳನ್ನು ಶೇಕಡಾ ೫೫.೭೧ ರಷ್ಟು ಹಾಡಿ/ಪೋಡಿಗೆ ನೀಡಲಾಗಿದೆ. ಶೇಕಡಾ ೨೪.೨೯ ರಷ್ಟಕ್ಕೆ ೧೦ ರಿಂದ ೨೦ ಮನೆಗಳನ್ನು ಮಂಜೂರು ಮಾಡಲಾಗಿದೆ, ೨೦ ಕ್ಕಿಂತ ಹೆಚ್ಚು ಮನೆಗಳು ಮಜೂರಾಗಿರುವುದು ಬಹಳ ವಿರಳ. ಶೇಕಡಾ ೧೦ ರಷ್ಟು ಹಾಡಿಗಳಿಗೆ ಕಳೆದ ಐದು ವರ್ಷದಲ್ಲಿ ಮನೆಗಳೆ ಮಂಜೂರಾಗಿರುವುದಿಲ್ಲ. ಮನೆಗಳು ಶೇಕಡಾ ೯೦ ಹಾಡಿ/ಪೋಡುಗಳಿಗೆ ಮಂಜೂರಾಗಿರುವುದು ಕಂಡು ಬಂದಿದೆ. ಆದರೆ ಅವುಗಳ ಗುಣಮಟ್ಟವನ್ನು ನೋಡಿದರೆ ವಾಸಿಸುವುದಕ್ಕೆ ಯೋಗ್ಯವೇ ಎಂಬ ಪ್ರಶ್ನೆ ಅಧ್ಯಯನದ ಸಂದರ್ಭದಲ್ಲಿ ಅವಲೋಕಿಸಿದಾಗ ಕಂಡುಬಂದಿದೆ. ಮತ್ತು ಮಾಹಿತಿದಾರರೂ ಇದನ್ನೇ ವ್ಯಕ್ತಪಡಿಸಿರುತ್ತಾರೆ.

ಕೊಳವೆ ಬಾವಿಗಳನ್ನು ಶೇಕಡಾ ೧೧.೪೩ ಹಾಡಿ/ಪೋಡುಗಳಿಗೆ ಕೊಡಲಾಗಿದೆ. ಉಳಿದ ಶೇಕಡಾ ೮೮.೫೭ ರಷ್ಟು ಹಾಡಿ/ಪೋಡುಗಳು ನೀರಿಗೆ ಬೇರೆಯದೇ ವ್ಯವಸ್ಥೆ ಮಾಡಿಕೊಳ್ಳಬೇಕಾದ ಅನಿವಾರ್ಯತೆ ಇದೆ. ಶೇಕಡಾ ೨೧.೪೩ ಸಣ್ಣ ನೀರಿನ ಘಟಕಗಳನ್ನು ಹೊಂದಿದ್ದರೆ. ಶೇಕಡಾ ೭೮.೫೭ ರಷ್ಟು ಹಾಡಿ/ಪೋಡುಗಳಿಗೆ ಈ ವ್ಯವಸ್ಥೆ ಇಲ್ಲವಾಗಿದೆ. ಅಲ್ಲದೆ ಇದ್ದ ಕಡೆಯೂ ರಿಪೇರಿಗೆ ಬಂದು ನೀರಿನ ಪೂರೈಕೆ ಸ್ಥಗಿತಗೊಂಡಿವೆ.

ಶೇಕಡಾ ೪೭.೧೪ ರಷ್ಟು ಹಾಡಿ/ಪೋಡುಗಳಿಗೆ ೫ ರಿಂದ ೧೦ ಶೌಚಾಲಯಗಳನ್ನು ಮಂಜೂರು ಮಾಡಲಾಗಿದೆ. ಶೇಕಡಾ ೧೭.೧೪ ರಷ್ಟಕ್ಕೆ ೧೦ ರಿಂದ ೨೦, ಶೇಕಡಾ ೭.೧೪ ರಷ್ಟಕ್ಕೆ ೨೦ ರಿಂದ ೩೦ ಮತ್ತು ಶೇಕಡಾ ೪.೨೮ ರಷ್ಟಕ್ಕೆ ೩೦ ಕ್ಕಿಂತ ಹೆಚ್ಚು ಶೌಚಾಲಯ ಮಂಜೂರು ಮಾಡಲಾಗಿದೆ. ಇದು ಐದು ವರ್ಷದ ಅವಧಿಯಲ್ಲಾದ ಪ್ರಗತಿ. ಇದು ತೀರಾ ಕಡಿಮೆ. ಮತ್ತು ನೀರಿನ ಪೂರೈಕೆ ಸರಿಯಾಗಿ ಇಲ್ಲದಿರುವುದರಿಂದ ಇವುಗಳ ಬಳಕೆಯನ್ನು ಹಲವರು ಮಾಡುತ್ತಿಲ್ಲ. ಅಲ್ಲದೆ ಶೇಕಡಾ ೨೪.೨೯ ಹಾಡಿ/ಪೋಡುಗಳಿಗೆ ಒಂದೂ ಶೌಚಾಲಯ ದೊರೆತಿರುವ ಉದಾಹರಣೆ ಇಲ್ಲ. ಸರ್ಕಾರದ ಸ್ವಚ್ಚ ಭಾರತ ಯೋಜನೆಯ ಪರಿಕಲ್ಪನೆ ಯಾವಾಗ ಗುರಿ ಮುಟ್ಟುತ್ತದೆ ಎಂಬುದು ಯಕ್ಷ ಪ್ರಶ್ನೆಯಾಗಿದೆ.

ಶೇಕಡಾ ೩೧.೪೩ ರಷ್ಟು ಹಾಡಿ/ಪೋಡುಗಳು ಸ್ನಾನದ ಗೃಹಗಳನ್ನು ಪಡೆದಿವೆ. ಇವುಗಳನ್ನು ಬಳಸುತ್ತಿರುವುದನ್ನು ಅವಲೋಕಿಸಲಾಗಿದೆ. ಆದರೆ ಶೇಕಡಾ ೬೮.೫೭ ರಷ್ಟು ಹಾಡಿ/ಪೋಡುಗಳಲ್ಲಿ ಜನರು ಈಗಲೂ ನೆರಿಕೆ, ತಡಿಕೆ ಮರೆಯಲ್ಲಿ ಸ್ನಾನ ಮಾಡುತ್ತಾರೆ

ಎಂಬುದನ್ನು ಅಧ್ಯಯನ ಸಂದರ್ಭದಲ್ಲಿ ಮಾಹಿತಿದಾರರು ತೋರಿಸಿದ ಅವರ ಬಚ್ಚಲು ಮನೆಗಳನ್ನು ವೀಕ್ಷಿಸಲಾಗಿದೆ. ಇವುಗಳು ಮಹಿಳೆಯರಿಗೆ ಬಹಳಷ್ಟು ಮುಜುಗರದ ಸಂಗತಿಗಳಾಗಿವೆ.

ಉದ್ಯೋಗಕ್ಕೆ ಸಂಬಂಧಿಸಿದಂತೆ ನೋಡುವುದಾದರೆ ಮಹಾತ್ಮಾ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಅಡಿಯಲ್ಲಿ ಕೇವಲ ಶೇಕಡಾ ೨೪.೨೯ ರಷ್ಟು ಹಾಡಿ/ಪೋಡುಗಳಲ್ಲಿ ೫ ರಿಂದ ೧೦ ಕುಟುಂಬಗಳಿಗೆ ಮಾತ್ರ ಉದ್ಯೋಗ ನೀಡಲಾಗಿದೆ. ಮತ್ತು ಅದರ ಕೂಲಿಯನ್ನೂ ನೀಡಲಾಗಿದೆ. ಗ್ರಾಮ ಪಂಚಾಯತ್‌ಗಳಿಗೆ ಬರುವ ಕಾಮಗಾರಿಯನ್ನು ಹೇಗೆ ಮಾಡಿಸುತ್ತಾರೆ ಎಂಬ ಪ್ರಶ್ನೆ ಇಲ್ಲಿ ಕಾಡುತ್ತದೆ. ಶೇಕಡಾ ೭೫.೭೧ ರಷ್ಟು ಹಾಡಿ/ಪೋಡಿನ ಜನರನ್ನ ಖಾತ್ರಿ ಯೋಜನೆಯಡಿ ಕೆಲಸಕ್ಕೆ ತೆಗೆದು ಕೊಂಡಿಲ್ಲ ಎಂಬುದು ಅಧ್ಯಯನದಿಂದ ಕಂಡು ಬಂದಿದೆ.

೫ ರಿಂದ ೧೦ ಮನೆಗಳು ವಿದ್ಯುತ್ ಸೌಲಭ್ಯ ಪಡೆದಿರುವ ಹಾಡಿ/ಪೋಡುಗಳು ಶೇಕಡಾ ೩೫.೭೧ ರಷ್ಟಿವೆ. ಶೇಕಡಾ ೧೫.೭೧ ರಷ್ಟರಲ್ಲಿ ೧೦ ರಿಂದ ೨೦ ಮನೆಗಳು ವಿದ್ಯುತ್ ಸೌಲಭ್ಯ ಪಡೆದಿವೆ. ಶೇಕಡಾ ೧೦ ರಷ್ಟು ೨೦ ರಿಂದ ೩೦ ಮನೆಗಳು ವಿದ್ಯುತ್ ಪಡೆದಿವೆ. ೩೦ ಕ್ಕಿಂತ ಹೆಚ್ಚು ಮನೆಗಳು ಶೇಕಡಾ ೮.೫೭ ರಷ್ಟು ಹಾಡಿಯಲ್ಲಿ ವಿದ್ಯತ್ ಸೌಲಭ್ಯ ಪಡೆದಿದ್ದರೆ ಶೇಕಡಾ ೩೦ ರಷ್ಟು ಹಾಡಿ/ಪೋಡುಗಳು ಇದುವರಗೂ ವಿದ್ಯತ್ ಪಡೆದಿಲ್ಲ. ಉಳಿದ ಶೇಕಡಾ ೭೦ ರಷ್ಟಕ್ಕೆ ಹೆಸರಿಗೆ ಮಾತ್ರ ವಿದ್ಯತ್ ಪೂರೈಸಲಾಗಿದೆ. ಆದರೆ ಹೆಚ್ಚಿನ ಸಮಯ ವಿದ್ಯತ್ ಪೂರೈಕೆ ಇರುವುದಿಲ್ಲ ಎಂದು ಮಾಹಿತಿ ನೀಡಿದ್ದಾರೆ. ಇದನ್ನು ಅಧ್ಯಾಯ ೦೪ ರಲ್ಲಿ ವಿವರಿಸಲಾಗಿದೆ. ರಸ್ತೆ ಸೌಲಭ್ಯವಂತೂ ಬಹಳ ಶೋಚನೀಯವಾಗಿದೆ. ಸೋಲಾರ ಮತ್ತು ಬೀದಿ ದೀಪಗಳ ವ್ಯವಸ್ಥೆಯೂ ಸಮರ್ಪಕವಾಗಿಲ್ಲದಿರುವುದು ಕಂಡುಬಂದಿದೆ.

**೨.೩.೨೧.ಹಾಡಿ/ಪೋಡು/ಕಾಲೊನಿ/ಪುನರ್ವಸತಿ ಕೇಂದ್ರಗಳ ಸದ್ಯದ ಅವಶ್ಯಕತೆಗಳು**

ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಆದಿವಾಸಿಗಳ ಸದ್ಯದ ಅವಶ್ಯಕತೆಗಳನ್ನು ಸಮೀಕ್ಷೆ ಮಾಡಲಾಗಿದೆ. ಈ ವೇಳೆ ವ್ಯಕ್ತವಾದ ಅಂಶಗಳನ್ನು ವಿಂಗಡಿಸಿ ವಿಷಯವಾರು ಪ್ರತ್ಯೇಕ ಕೋಷ್ಟಕಗಳಲ್ಲಿ ಮಾಹಿತಿ ವ್ಯಕ್ತಪಡಿಸಲಾಗಿದೆ.

**೨.೩.೨೧.೧. ಹಾಡಿ/ಪೋಡು/ಕಾಲೊನಿಗಳಲ್ಲಿ ನಿವೇಶನಗಳ ಅವಶ್ಯಕತೆಯ ಮಾಹಿತಿ**

ಪ್ರತಿಯೊಬ್ಬ ಮಾನವನ ಪ್ರಾಥಮಿಕ ಅವಶ್ಯಕತೆಗಳಲ್ಲಿ ವಾಸಕ್ಕೆ ಮನೆ ಅತೀ ಅವಶ್ಯಕತೆಯುಳ್ಳದ್ದು. ಇಂತಹ ನಿವಾಸ ನಿರ್ಮಿಸಲು ನಿವೇಶನ ಬೇಕೇ ಬೇಕು. ಇದು

ಮಾನಸಿಕ ನೆಮ್ಮದಿ ಮತ್ತು ಧೈರ್ಯ ತಂದು ಕೊಡುತ್ತದೆ. ಈ ನಿಟ್ಟಿನಲ್ಲಿ ಇದರ ಬೇಡಿಕೆಯನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

**ಕೋಷ್ಟಕ: ೨.೨೦: ನಿವೇಶನಗಳ ಅವಶ್ಯಕತೆಯ ವಿವರ**

| ಕ್ರ.ಸಂ | ನಿವೇಶನಗಳ ಅವಶ್ಯಕತೆಯ ಕುಟುಂಬಗಳು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧೦ ರಿಂದ ೨೦ | ೨೬ | ೩೭.೧೪ |
| ೦೨ | ೨೦ ರಿಂದ ೪೦ | ೧೪ | ೨೦ |
| ೦೩ | ೪೦ ರಿಂದ ೬೦ | ೧೯ | ೨೭.೧೪ |
| ೦೪ | ೬೦ ಕ್ಕಿಂತ ಹೆಚ್ಚು | ೧೧ | ೧೫.೭೧ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೨೦ ಆದಿವಾಸಿಗಳ ನಿವೇಶನಗಳ ಬೇಡಿಕೆಯನ್ನು ಸೂಚಿಸುತ್ತದೆ. ಇಲ್ಲಿ ಸರಾಸರಿಯನ್ನು ಪರಿಗಣಿಸಲಾಗಿದೆ. ಅಂದರೆ ೧೦ ರಿಂದ ೨೦ ಕುಟುಂಬಗಳ ಬೇಡಿಕೆಯನ್ನು ೧೦+೨೦=೩೦/೨=೧೫ ಎಂದು ನೋಡಲಾಗಿದೆ. ಆಗ ೧೫ x ೨೬=೩೯೦, ೧೪x೩೦=೪೨೦, ೫೦x೧೯=೯೫೦ ಮತ್ತು ೬೦x೪=೨೪೦, ಅಂದರೆ ಒಟ್ಟು ೨೦೦೦ ನಿವೇಶನಗಳ ಅವಶ್ಯಕತೆಯನ್ನು ವ್ಯಕ್ತಪಡಿಸಿರುತ್ತಾರೆ. ಅಂದರೆ ಅಧ್ಯಯನಕ್ಕೆ ಆಯ್ದುಕೊಂಡ ೭೦ ಹಾಡಿಗಳಲ್ಲಿ ಒಟ್ಟು ೩೬೫೪ ಕುಟುಂಬಗಳಿದ್ದು ಅವುಗಳಲ್ಲಿ ೨೦೦೦ ನಿವೇಶನಗಳ ಅವಶ್ಯಕತೆ ಇದೆ. ಅಂದರೆ ಇಷ್ಟು ಕುಟುಂಬಗಳಿಗೆ ತಮ್ಮ ಸ್ವಂತದ್ದೆಂಬ ಜಾಗ ಇಲ್ಲದಿರುವುದನ್ನು ಗುರುತಿಸಲಾಗಿದೆ. ಅಧ್ಯಯನ ಕ್ಷೇತ್ರದಲ್ಲಿ ಒಟ್ಟು ೩೪೪ ಹಾಡಿ/ಪೋಡು/ಕಾಲೊನಿಗಳಲ್ಲಿ ೧೪೨೧೭ ಕುಟುಂಬಗಳಿವೆ. ಇವುಗಳ ಅವಶ್ಯಕತೆಯನ್ನು ನೋಡುವುದಾದರೆ (೨೦೦೦/೩೬೫೪x೧೪೨೧೭=೭೭೮೧) ಒಟ್ಟು ೭೭೮೧ ನಿವೇಶನಗಳ ಅವಶ್ಯಕತೆಯನ್ನು ಗುರುತಿಸಲಾಗಿದೆ.

### ೨.೩.೨೧.೨. ಆದಿವಾಸಿಗಳ ವಸತಿ ಅವಶ್ಯಕತೆಗಳ ಮಾಹಿತಿ

ಆದಿವಾಸಿಗಳು ಅರಣ್ಯದಲ್ಲೇ ವಾಸಿಸುತ್ತಾ ಬಂದಿದ್ದರೂ ಇತ್ತೀಚಿನ ಬೆಳವಣಿಗೆಗಳ ಹಿನ್ನೆಲೆ ಮತ್ತು ನಾಗರೀಕ ಜಗತ್ತಿನ ಅತಿಯಾದ ಸಂಪರ್ಕದಿಂದ ತಮ್ಮ ನಂಬಿಕೆಗಳನ್ನು ಬದಿಗೊತ್ತಿ ಸರ್ಕಾರಿ ಮನೆಗಳಿಗೆ ಬೇಡಿಕೆ ಸಲ್ಲಿಸುತ್ತಿರುವುದು ಕಂಡುಬಂದಿರುವುದನ್ನು ಈ ಕೆಳಗೆ ಅಂಕಿ ಸಂಖ್ಯೆಗಳಲ್ಲಿ ತೋರಿಸಲಾಗಿದೆ.

### ಕೋಷ್ಟಕ: ೨.೨೧: ವಸತಿ ಅವಶ್ಯಕತೆಗಳ ವಿವರ

| ಕ್ರ.ಸಂ | ವಸತಿ ಅವಶ್ಯಕತೆಯ ಕುಟುಂಬಗಳು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧೦ ರಿಂದ ೨೦ | ೩೪ | ೪೮.೫೭ |
| ೦೨ | ೨೦ ರಿಂದ ೪೦ | ೧೭ | ೨೪.೨೯ |
| ೦೩ | ೪೦ ರಿಂದ ೬೦ | ೧೧ | ೧೫.೭೧ |
| ೦೪ | ೬೦ ಕ್ಕಿಂತ ಹೆಚ್ಚು | ೮ | ೧೧.೪೩ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೨೧ ಮನೆಗಳ ಬೇಡಿಕೆಯನ್ನು ಸೂಚಿಸುತ್ತದೆ. ಸರಾಸರಿಯನ್ನು ಪರಿಗಣಿಸಿದಾಗ ೧೫ x ೩೪=೫೧೦, ೩೦ x ೧೭=೫೧೦, ೫೦ x ೧೧=೫೫೦ ಮತ್ತು ೬೦ x ೮=೪೮೦, ಅಂದರೆ ಒಟ್ಟು ೨೦೫೦ ವಸತಿಗಳಿಗೆ ೭೦ ಹಾಡಿ/ಪೋಡುಗಳ ಜನರಿಗೆ ಅವಶ್ಯಕತೆ ಇದೆ. ಇನ್ನು ೩೪೪ ಹಾಡಿ/ಪೋಡುಗಳಿಗೆ (೨೦೫೦/೭೦ x ೩೪೪=೧೦೦೭೪) ೧೦೦೭೪ ವಸತಿಗಳು ಬೇಕು. ಇಲ್ಲಿ ಕೆಲವರಿಗೆ ನಿವೇಶನ ಇದ್ದು ಮನೆ ನಿರ್ಮಾಣಕ್ಕೆ ಸರ್ಕಾರದ ಅನುದಾನಕ್ಕೆ ಕಾಯುತ್ತಿದ್ದಾರೆ. ಕೋಷ್ಟಕ ೨.೧೮ ರಲ್ಲಿ ವಿವರಿಸಿರುವಂತೆ ಹಲವು ಕಾರಣಗಳಿಗಾಗಿ ನಿವೇಶನ ಮತ್ತು ಮನೆಗಳ ಲಭ್ಯತೆ ಸಾಧ್ಯವಾಗುತ್ತಿಲ್ಲ ಎಂಬುದನ್ನು ಕಂಡುಕೊಳ್ಳಲಾಗಿದೆ.

### ೨.೩.೨೧.೩. ಶೌಚಾಲಯಗಳ ಬೇಡಿಕೆ ಮಾಹಿತಿ

ಆದಿವಾಸಿಗಳು ಶೌಚಾಲಯ ಬಳಸಲು ಮುಂದೆ ಬರುತ್ತಿರುವುದು ಸಂತೋಷದ ಸಂಗತಿ. ಆದರೆ ಅವರು ಇದಕ್ಕೆ ಕೊಡುವ ಕಾರಣವೇ ಬೇರೆ. ಆದಿವಾಸಿಗಳು ನದಿ, ತೊರೆ, ಕೆರೆಗಳಲ್ಲಿ ತಮ್ಮ ನಿತ್ಯಕರ್ಮಗಳನ್ನು ಮಾಡುವ ರೂಡಿ ಇಟ್ಟುಕೊಂಡವರು ಮತ್ತು ಇದರಲ್ಲಿ ಆನಂದ ಪಡುತ್ತಿದ್ದರು. ಆದರೆ ಅರಣ್ಯ ಇಲಾಖೆ ಈಗ ನೀರಿನ ಮೂಲಗಳ ಬಳಿ ಸಿ.ಸಿ.ಕ್ಯಾಮೆರಾ ಅಳವಡಿಸಿರುವುದರಿಂದ ಮುಜುಗರ ಪಡುವ ಅವರು ಶೌಚಾಲಯಗಳಿಗೆ ಬೇಡಿಕೆ ಸಲ್ಲಿಸುತ್ತಿದ್ದಾರೆ.

### ಕೋಷ್ಟಕ: ೨.೨೨: ಶೌಚಾಲಯಗಳ ಅವಶ್ಯಕತೆ ವಿವರ

| ಕ್ರ.ಸಂ | ಶೌಚಾಲಯಗಳ ಅವಶ್ಯಕತೆ ವ್ಯಕ್ತಪಡಿಸಿರುವ ಕುಟುಂಬಗಳು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧೦ ರಿಂದ ೨೦ | ೨೪ | ೩೪.೨೯ |
| ೦೨ | ೨೦ ರಿಂದ ೪೦ | ೧೫ | ೨೧.೪೩ |
| ೦೩ | ೪೦ ರಿಂದ ೬೦ | ೧೩ | ೧೮.೫೭ |
| ೦೪ | ೬೦ ಕ್ಕಿಂತ ಹೆಚ್ಚು | ೧೮ | ೨೫.೭೧ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೨೨ ಶೌಚಾಲಯಗಳ ಅವಶ್ಯಕತೆಯನ್ನು ಸೂಚಿಸುತ್ತದೆ. ಪ್ರತಿಶತವನ್ನು ಕೋಷ್ಟಕದಲ್ಲಿ ನೋಡಬಹುದಾಗಿದೆ. ಸರಾಸರಿ ಬೇಡಿಕೆಯನ್ನು ಪರಿಗಣಿಸುವುದಾದರೆ ೧೫ x ೨೪=೩೬೦, ೩೦ x ೧೫=೪೫೦, ೫೦ x ೧೩=೬೫೦ ಮತ್ತು ೬೦ x ೧೮=೧೦೮೦ ಅಂದರೆ ಒಟ್ಟು ೨೫೪೦ ಕುಟುಂಬಗಳು ಶೌಚಾಲಯದ ಅವಶ್ಯಕತೆಯನ್ನು ವ್ಯಕ್ತಪಡಿಸಿದ್ದಾರೆ. ಕೋಷ್ಟಕ ೨.೧೯ ರಲ್ಲಿ ಕಳೆದ ಐದು ವರ್ಷದಲ್ಲಿ ಪಂಚಾಯತ್‌ನಿಂದ ದೊರಕಿದ ಶೌಚಾಲಯಗಳ ಸಂಖ್ಯೆ ೬೫೯. ಇದು ಬೇಡಿಕೆ ಮತ್ತು ಪೂರೈಕೆಗಿರುವ ಅಂತರವನ್ನು ಸೂಚ್ಯವಾಗಿ ವ್ಯಕ್ತಪಡಿಸುತ್ತದೆ.

### ೨.೩.೨೧.೪. ಕುಡಿಯುವ ನೀರಿನ ಬೇಡಿಕೆಯ ಮಾಹಿತಿ

ಕುಡಿಯುವ ನೀರು ಮಾನವನ ಬೇಡಿಕೆಗಳಲ್ಲಿ ಗಾಳಿಯ ನಂತರದ ಮತ್ತು ಅತೀ ಅವಶ್ಯಕವಾದ ಸ್ಥಾನವನ್ನು ಹೊಂದಿದೆ. ಆದಿವಾಸಿಗಳು ಮೊದಲು ಸ್ವಚ್ಛಂದವಾಗಿ ನೈಸರ್ಗಿಕವಾಗಿ ದೊರಕುತ್ತಿದ್ದ ನೀರನ್ನು ಬಳಸುತ್ತಿದ್ದರು. ಆದರೆ ಈಗ ಹಲವು ಕಾರಣಗಳು ಇದಕ್ಕೆ ಅಡ್ಡಿಯಾಗಿ ನೀರಿಗಾಗಿ ಆದಿವಾಸಿಗಳು ಪರಿತಪಿಸುವಂತಾಗಿದೆ.

**ಕೋಷ್ಟಕ: ೨.೨೩: ಕುಡಿಯುವ ನೀರಿನ ಪೂರೈಕೆ ವಿವರ**

| ಕ್ರ.ಸಂ | ನೀರಿನ ಪೂರೈಕೆ ವಿವರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ಸಣ್ಣ ನೀರಿನ ತೊಟ್ಟಿ | ೨೯ | ೪೧.೪೩ |
| ೦೨ | ದೊಡ್ಡ ನೀರಿನ ಟ್ಯಾಂಕ್ ಮೂಲಕ | ೨೫ | ೩೫.೭೧ |
| ೦೩ | ಕೆರೆ ನೀರು ಬಳಸಲು ಅವಕಾಶ | ೭ | ೧೦ |
| ೦೪ | ನದಿ/ತೊರೆ ನೀರು ಬಳಸಲು ಅವಕಾಶ | ೯ | ೧೨.೮೬ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೨೩ ಕುಡಿಯುವ ನೀರಿನ ಬೇಡಿಕೆ ಕುರಿತು ಮಾಹಿತಿ ನೀಡುತ್ತದೆ. ಶೇಕಡಾ ೪೧.೪೩ ರಷ್ಟು ಸಣ್ಣ ನೀರಿನ ತೊಟ್ಟಿಗೆ, ಶೇಕಡಾ ೩೫. ೭೧ ರಷ್ಟು ದೊಡ್ಡ ನೀರಿನ ಟ್ಯಾಂಕ್ ಮೂಲಕ ಮನೆ ಮನೆಗೆ ನೀರಿನ ಪೂರೈಕೆಗೆ ಬೇಡಿಕೆ ಸಲ್ಲಿಸಿದ್ದಾರೆ. ಶೇಕಡಾ ೧೦ ರಷ್ಟು ಹಾಡಿ/ಪೋಡುಗಳು ಕೆರೆ ನೀರು ಬಳಸಲು ಅವಕಾಶ ಕೋರಿದ್ದಾರೆ. ಹಾಗೆಯೇ ಶೇಕಡಾ ೧೨.೮೬ ರಷ್ಟು ಹಾಡಿ/ಪೋಡುಗಳು ನದಿ/ತೊರೆ ನೀರು ಬಳಸಲು ಅವಕಾಶ ಕೋರಿರುವುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಅಂದರೆ ಶೇಕಡಾ ೨೨.೮೬ ರಷ್ಟು ಹಾಡಿ/ಪೋಡುಗಳ ಜನರಿಗೆ ಇರುವ ನೀರನ್ನೂ ಬಳಸಿಕೊಳ್ಳುವ ಸ್ವಾತಂತ್ರ್ಯ ಇಲ್ಲವಾಗಿದೆ. ಇದಕ್ಕೆ ಕಾರಣಗಳನ್ನು ಮತ್ತು ಕಾರಣಕರ್ತರನ್ನು ಕೋಷ್ಟಕ ೨.೧೯ ರಲ್ಲಿ ವಿವರಿಸಿರುವುದನ್ನು ಗಮನಿಸಬಹುದುದಾಗಿದೆ.

### ೨.೩.೨೧.೫. ಅಡುಗೆ ಅನಿಲ ಸಂಪರ್ಕದ ಬೇಡಿಕೆಯ ಮಾಹಿತಿ

ಆದಿವಾಸಿಗಳು ಅರಣ್ಯದಲ್ಲಿ ದೊರೆಯುತ್ತಿದ್ದ ಉರುವಲುಗಳನ್ನು ಬಳಸುತ್ತಿದ್ದರು. ಇಂದು ಇದಕ್ಕೆ ಹಲವು ಅಡ್ಡಿ ಆತಂಕಗಳು ಎದುರಾಗಿ ಕೋರ್ಟ/ಕಛೇರಿ ಅಲೆಯಬೇಕಾದ ಪರಿಸ್ಥಿತಿ ನಿರ್ಮಾಣವಾಗಿರುವುದರಿಂದ ತಮ್ಮ ಆಹಾರ ಬೇಯಿಸಿಕೊಳ್ಳಲು ಅನ್ನಮಾರ್ಗದ ಕಡೆ ಮುಖಮಾಡಿರುವುದನ್ನು ಗಮನಿಸಲಾಗಿದೆ.

**ಕೋಷ್ಟಕ: ೨.೨೪: ಅಡುಗೆ ಅನಿಲ ಸಂಪರ್ಕದ ಬೇಡಿಕೆಯ ವಿವರ**

| ಕ್ರ.ಸಂ | ಅಡುಗೆ ಅನಿಲ ಸಂಪರ್ಕದ ಅವಶ್ಯಕತೆ ವ್ಯಕ್ತಪಡಿಸಿದ ಕುಟುಂಬಗಳು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧೦ ರಿಂದ ೨೦ | ೬ | ೮.೫೭ |
| ೦೨ | ೨೦ ರಿಂದ ೪೦ | ೯ | ೧೨.೮೬ |
| ೦೩ | ೪೦ ರಿಂದ ೬೦ | ೧೯ | ೨೭.೧೪ |
| ೦೪ | ೬೦ ಕ್ಕಿಂತ ಹೆಚ್ಚು | ೩೬ | ೫೧.೪೩ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೨೪ ಅಡುಗೆ ಅನಿಲ ಸಂಪರ್ಕದ ಬೇಡಿಕೆಯನ್ನು ನೀಡುತ್ತದೆ. ಸರಾಸರಿ ಬೇಡಿಕೆ ಪರಿಗಣಿಸಲಾಗಿದೆ. ಆಗ ೧೫ x ೬=೯೦, ೩೦ x ೯=೨೭೦, ೫೦ x ೧೯= ೯೫೦ ಮತ್ತು ೬೦ x ೩೬=೨೧೬೦ ಅಂದರೆ ಒಟ್ಟು ೩೪೭೦ ಕುಟುಂಬಗಳು ಅನಿಲ ಸಂಪರ್ಕ ಬಯಸಿವೆ. ಅಧ್ಯಯನಕ್ಕೆ ಆಯ್ದು ಕೊಂಡ ೭೦ ಹಾಡಿ/ಪೋಡುಗಳ ಒಟ್ಟು ಕುಟುಂಬಗಳು ೩೬೫೪ ಇದರ ಆಧಾರದಲ್ಲಿ ಸರಾಸರಿ ಲೆಕ್ಕಹಾಕಲಾಗಿ ೩೪೭೦/೩೬೫೪ x ೧೦೦= ೯೪.೯೬% ಕುಟುಂಬಗಳು ಅಡುಗೆ ಅನಿಲ ಸಂಪರ್ಕವನ್ನು ಬಯಸಿದ್ದಾರೆ. ಇದು ಒಳ್ಳೆ ಬೆಳವಣಿಗೆ. ಆದರೆ ಕಾಡು ಮತ್ತು ಕಾಡಂಚಿನಲ್ಲಿ ಬದುಕುತ್ತಿರುವ ಇವರಿಗೆ ಸಾಕಷ್ಟು ಉರುವಲು ದೊರೆಯುವ ಅವಕಾಶ ಇದೆ. ಆದರೆ ಅಧ್ಯಯನದ ಸಂದರ್ಭದಲ್ಲಿ ವ್ಯಕ್ತವಾದ ಅಂಶವೆಂದರೆ ಕಾಡಿನಿಂದ ಉರುವಲು ತರಲು ಅರಣ್ಯ ಇಲಾಖೆ ಸಿಬ್ಬಂಧಿ ತೊಂದರೆ ಕೊಡುತ್ತಿರುವುದಾಗಿದೆ. ಅಲ್ಲದೆ ಉರುವಲು ತರಲು ಪುರುಷರನ್ನು ಕಾಡಿನೊಳಕ್ಕೆ ಬಿಡುವುದಿಲ್ಲ. ಒಂದು ವೇಳೆ ಕಾಡಿಗೆ ಬಲವಂತವಾಗಿ ತೆರಳಿ ಕಟ್ಟಿಗೆ ಸಂಗ್ರಹಿಸಿದರೆ ಅರಣ್ಯ ಸಿಬ್ಬಂದಿ ಸುಳ್ಳು ಕೇಸು ದಾಖಲಿಸುತ್ತಾರೆ ಎಂಬ ಅಂಶ ವ್ಯಕ್ತಪಡಿಸಿರುತ್ತಾರೆ. ಮಹಿಳೆಯರಿಗೆ ತಲೆ ಮೇಲೆ ಹೊತ್ತು ತರಲು ಮಾತ್ರ ಅವಕಾಶ ನೀಡಲಾಗಿದೆ. ಹೀಗೆ ಕಾಡಿಗೆ ತೆರಳಿದ ಮಹಿಳೆಯರ ಮೇಲೆ ದೌರ್ಜನ್ಯಗಳಾಗುತ್ತಿವೆ ಎಂಬುದನ್ನು ವ್ಯಕ್ತಪಡಿಸಿದ್ದಾರೆ. ನಿಯಮಿತ ಆದಾಯವಿಲ್ಲದ ಆದಿವಾಸಿಗಳು ಅನಿಲವನ್ನು ಪುನಃ ಭರ್ತಿ ಮಾಡಿಕೊಳ್ಳುವುದರ ಬಗೆಗೆ ಆತಂಕಿತರಾಗಿದ್ದಾರೆ.

### ೨.೩.೨೧.೬. ಪಡಿತರ ಚೀಟಿ ಬೇಡಿಕೆಯ ಮಾಹಿತಿ

ಆದಿವಾಸಿಗಳು ಅರಣ್ಯದಲ್ಲಿ ದೊರೆಯುತ್ತಿದ್ದ ಗಡ್ಡೆ ಗೆಣಸು, ಸೊಪ್ಪು, ಹಣ್ಣುಗಳನ್ನು ಸಂಗ್ರಹಿಸಿ ಜೊತೆಗೆ ತಾವು ಕುಮರಿ ಬೇಸಾಯದಿಂದ ಬೆಳೆಯುತ್ತಿದ್ದ ರಾಗಿ ಮತ್ತು ಅವರೆಕಾಳುಗಳನ್ನು ಆಹಾರಕ್ಕಾಗಿ ಬಳಸುತ್ತಿದ್ದರು. ಇಂದು ಅರಣ್ಯ ಉಪ ಉತ್ಪನ್ನಗಳು ಕಡಿಮೆಯಾಗಿರುವುದರಿಂದ ಇದಕ್ಕೆ ಅವಕಾಶ ಇಲ್ಲದಂತಾಗಿ ಸರ್ಕಾರದ ಪಡಿತರಕ್ಕೆ ಮೊರೆ ಹೊಗುತ್ತಿದ್ದಾರೆ.

**ಕೋಷ್ಟಕ: ೨.೨೫: ಪಡಿತರ ಚೀಟಿಯ ಅವಶ್ಯಕತೆ ವಿವರ**

| ಕ್ರ.ಸಂ | ಪಡಿತರ ಚೀಟಿಯ ಅವಶ್ಯಕತೆ ಇರುವ ಕುಟುಂಬಗಳು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧೦ ರಿಂದ ೨೦ | ೨೮ | ೪೦ |
| ೦೨ | ೨೦ ರಿಂದ ೪೦ | ೨೭ | ೩೮.೫೭ |
| ೦೩ | ೪೦ ರಿಂದ ೬೦ | ೧೦ | ೧೪.೨೯ |
| ೦೪ | ೬೦ ಕ್ಕಿಂತ ಹೆಚ್ಚು | ೫ | ೭.೧೪ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೨೫ ಪಡಿತರ ಚೀಟಿ ಅವಶ್ಯಕತೆಯನ್ನು ಸೂಚಿಸುತ್ತದೆ. ಸರಾಸರಿ ಬೇಡಿಕೆಯು ಈ ರೀತಿ ಇದೆ. ೧೫ x ೨೮=೪೨೦, ೩೦ x ೨೭=೮೧೦, ೫೦ x ೧೦=೫೦೦, ಮತ್ತು ೬೦ x ೫=೩೦೦ ಅಂದರೆ ೨೦೩೮ ಕುಟುಂಬಗಳು ಪಡಿತರ ಚೀಟಿಯನ್ನು ಬಯಸಿವೆ. ಇದು ಕೇವಲ ೭೦ ಹಾಡಿಗಳ ಅವಶ್ಯಕತೆ. ೩೪೪ ಹಾಡಿ/ಪೋಡುಗಳನ್ನು ಗಮನಿಸಿದಾಗ ಹೆಚ್ಚು ಇರುವುದು ವ್ಯಕ್ತವಾಗುತ್ತದೆ.

ಹಲವು ಕುಟುಂಬಗಳು ಒಂದೇ ಮನೆಯಲ್ಲಿ ವಾಸ ಮಾಡುತ್ತಿರುವುದರಿಂದ ಈ ಸಮಸ್ಯೆ ಎದುರಿಸುತ್ತಿರುವುದು ಕಂಡುಬಂದಿದೆ. ಇದೇ ಕೋಷ್ಟಕದ ಕ್ರಮ ಸಂಖ್ಯೆ ೦೨.೨೧ ರಲ್ಲಿ ೨೦೫೦ ಮನೆಗಳಿಗೆ ಬೇಡಿಕೆ ಇರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

### ೨.೩.೨೧.೭. ಅನ್ನ ಅಂತ್ಯೋದಯ ಚೀಟಿ ಅವಶ್ಯಕತೆಯ ಮಾಹಿತಿ

ಸ್ವಾಭಿಮಾನಿಗಳಾದ ಆದಿವಾಸಿಗಳು ಕಡು ಬಡವರಿಗಾಗಿ ನೀಡುವ ಈ ಚೀಟಿಯನ್ನು ಬಯಸುತ್ತಿರುವುದು ಅವರ ಬವಣೆಯನ್ನು ಬಿಂಬಿಸುತ್ತದೆ.

**ಕೋಷ್ಟಕ: ೨.೨೬: ಅನ್ನ ಅಂತ್ಯೋದಯ ಚೀಟಿಗಾಗಿ ಬೇಡಿಕೆ**

| ಕ್ರ.ಸಂ | ಅನ್ನ ಅಂತ್ಯೋದಯ ಚೀಟಿ ಬಯಸಿರುವ ಕುಟುಂಬಗಳು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧-೫ | ೪೧ | ೫೮.೫೭ |
| ೦೨ | ೫-೧೦ | ೧೫ | ೨೧.೪೩ |
| ೦೩ | ೧೦-೨೦ | ೮ | ೧೧.೪೩ |
| ೦೪ | ೨೦ ಕ್ಕಿಂತ ಹೆಚ್ಚು | ೬ | ೮.೫೭ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೨೫ ರಲ್ಲಿ ಅನ್ನ ಅಂತ್ಯೋದಯ ಚೀಟಿಗಳ ಬೇಡಿಕೆಯನ್ನು ಕಂಡುಕೊಳ್ಳಲಾಗಿದೆ. ಸರಾಸರಿಯಲ್ಲಿ ನೋಡಿದಾಗ ೩ x ೪೧=೧೨೩, ೮ x ೧೫=೧೨೦, ೧೫ x ೮=೧೨೦ ಮತ್ತು ೨೦ x ೬=೧೨೦ ಒಟ್ಟು ೪೮೩ ಕುಟುಂಬಗಳು ಅಂತ್ಯೋದಯ ಕಾರ್ಡಿಗೆ ಬೇಡಿಕೆ ಇಟ್ಟಿರುವುದನ್ನು ಕಂಡುಕೊಳ್ಳಲಾಗಿದೆ.

**೨.೩.೨೧.೮. ಹಾಡಿ/ಪೋಡುಗಳಿಗೆ ವಿದ್ಯುತ್ ಪೂರೈಕೆ ಬೇಡಿಕೆ**

ವಿದ್ಯುತ್ ಇಲ್ಲದೆ ಆಧುನಿಕ ಮಾನವ ಬದುಕಲಾರ ಎನ್ನವಷ್ಟರ ಮಟ್ಟಿಗೆ ಇಂದು ನಾವು ವಿದ್ಯುತ್ನ್ನು ಅವಲಂಭಿಸಿದ್ದೇವೆ. ಆದಿವಾಸಿಗಳು ಕೇವಲ ರಾತ್ರಿ ಹೊತ್ತು ಬೆಳಕಿಗಾಗಿ ಮಾತ್ರ ಬೇಡಿಕೆ ಇಟ್ಟಿರುವುದು ನೋಡಿದರೆ ಅವರನ್ನು ಯಾವ ಮಟ್ಟಿಗೆ ನಿರ್ಲಕ್ಷಿಸಲಾಗಿದೆ ಎಂಬುದರ ಅರಿವಾಗುತ್ತದೆ.

**ಕೋಷ್ಟಕ: ೨.೨೭: ಹಾಡಿ/ಪೋಡುಗಳಿಗೆ ವಿದ್ಯುತ್ ಪೂರೈಕೆ ಅವಶ್ಯಕತೆ ವಿವರ**

| ಕ್ರ.ಸಂ | ವಿದ್ಯುತ್ ಪೂರೈಕೆ ಬೇಡಿಕೆ ವಿವರ | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ಸಂಜೆ ೬-೯ ಘಂಟೆವರೆಗೆ ಕೊಟ್ಟರೆ ಸಾಕು | ೧೯ | ೨೭.೧೪ |
| ೦೨ | ಸಂಜೆ ೬-೧೧ಘಂಟೆವರೆಗೆ ಕೊಟ್ಟರೆ ಸಾಕು | ೧೬ | ೨೨.೮೬ |
| ೦೩ | ದಿನಕ್ಕೆ ೬ ಗಂಟೆ | ೧೪ | ೨೦ |
| ೦೪ | ವಿದ್ಯುತ್ ಬೇಕು | ೨೧ | ೩೦ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೨೭ ಹಾಡಿಗಳಿಗೆ ವಿದ್ಯುತ್ ಬೇಡಿಕೆಯನ್ನು ತಿಳಿಸುತ್ತದೆ. ಶೇಕಡಾ ೨೭.೧೪ ರಷ್ಟು ಹಾಡಿಗಳು ಸಂಜೆ ೬ ರಿಂದ ೯ ಗಂಟೆವರೆಗೆ ಕೊಟ್ಟರೆ ಸಾಕು ಎಂದು ವ್ಯಕ್ತಪಡಿಸಿದರೆ. ಶೇಕಡಾ ೨೨.೮೬ ರಷ್ಟು ಸಂಜೆ ೬ ರಿಂದ ರಾತ್ರಿ ೧೧ ರವರೆಗೆ ಕೊಟ್ಟರೆ ಸಾಕು ಎಂದು ವ್ಯಕ್ತಪಡಿಸಿದ್ದಾರೆ. ಶೇಕಡಾ ೨೦ ರಷ್ಟರಲ್ಲಿ ದಿನದ ೬ ಘಂಟೆ ಸಾಕು

ಎಂದು ವ್ಯಕ್ತಪಡಿಸುತ್ತಾರೆ. ಇದು ವಿದ್ಯುತ್ ಪೂರೈಕೆಯ ಪ್ರಮಾಣಕ್ಕೆ ಹಿಡಿದ ಕೈಗನ್ನಡಿ. ಶೇಕಡಾ ೩೦ ರಷ್ಟು ಹಾಡಿಗಳು ವಿದ್ಯುತ್ ಸಂಪರ್ಕಕ್ಕಾಗಿ ಬೇಡಿಕೆ ಇಟ್ಟಿರುವುದನ್ನು ಗಮನಿಸಲಾಗಿದೆ. ಆದಿವಾಸಿಗಳ ನೆಲೆಗಳು ಅರಣ್ಯದಲ್ಲಿರುವುದರಿಂದ ಸೌರವಿದ್ಯುತ್ ಪೂರೈಸುವುದು ಉತ್ತಮವಾದುದು.

### ೨.೩.೨೧.೯. ಮನೆಗಳಿಗೆ ವಿದ್ಯುತ್ ಬೇಡಿಕೆ ಸಲ್ಲಿಸಿರುವ ಮಾಹಿತಿ

ಸ್ವಾತಂತ್ರ್ಯ ಬಂದು ೭೦ ವರ್ಷಗಳಾದರೂ ಕತ್ತಲಲ್ಲಿ ಬದುಕಬೇಕಾದ ಅನಿವಾರ್ಯತೆಯನ್ನು ಇದು ಎತ್ತಿತೋರಿಸುತ್ತಿದೆ.

**ಕೋಷ್ಟಕ: ೨.೨೮: ಮನೆಗಳಿಗೆ ವಿದ್ಯುತ್ ಅವಶ್ಯಕತೆ ವಿವರ**

| ಕ್ರ.ಸಂ | ವಿದ್ಯುತ್ ಅವಶ್ಯಕತೆ ಇರುವ ಮನೆಗಳು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧೦ ರಿಂದ ೨೦ | ೧೯ | ೨೭.೧೪ |
| ೦೨ | ೨೦ ರಿಂದ ೪೦ | ೧೮ | ೨೫.೭೧ |
| ೦೩ | ೪೦ ರಿಂದ ೬೦ | ೧೨ | ೧೭.೧೪ |
| ೦೪ | ಹಾಡಿ/ಪೋಡಿನ ಎಲ್ಲಾ ಮನೆಗಳಿಗೆ | ೨೧ | ೩೦ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೨೮ ಮನೆಗಳಿಗೆ ವಿದ್ಯುತ್ ಸೌಲಭ್ಯದ ಬೇಡಿಕೆಯ ಪ್ರಮಾಣವನ್ನು ತಿಳಿಸುತ್ತದೆ. ಸರಾಸರಿ ಬೇಡಿಕೆಯು ೧೫ x ೧೯=೨೮೫, ೩೦ x ೧೮=೫೪೦, ೫೦ x ೧೨=೬೦೦ ಅಂದರೆ ಶೇಕಡಾ ೪೦ ಹಾಡಿ/ಪೋಡುಗಳ ೧೪೨೫ ಮನೆಗಳು ವಿದ್ಯುತ್ ಸಂಪರ್ಕಕ್ಕೆ ಬೇಡಿಕೆ ವ್ಯಕ್ತಪಡಿಸಿದ್ದಾರೆ. ಹಾಗೆಯೇ ಶೇಕಡಾ ೩೦ ರಷ್ಟು ಹಾಡಿ/ಪೋಡುಗಳ ಎಲ್ಲಾ ಮನೆಗಳು ವಿದ್ಯುತ್ ಸಂಪರ್ಕದ ಅವಶ್ಯಕತೆಯನ್ನು ವ್ಯಕ್ತಪಡಿಸಿದ್ದಾರೆ.

### ೨.೩.೨೧.೧೦. ಮತದಾನದ ಗುರುತಿನ ಚೀಟಿ ಬೇಡಿಕೆ

ಮತದಾನ ಪ್ರತಿಯೊಬ್ಬ ನಾಗರೀಕನ ಆಧ್ಯ ಕರ್ತವ್ಯ. ಆದರೆ ಇದರ ಅರಿವು ಆದಿವಾಸಿಗಳಲ್ಲಿ ಇನ್ನೂ ಜಾಗೃತವಾಗಿಲ್ಲ ಎಂಬುದು ಅವರ ಬೇಡಿಕೆಯನ್ನು ಗಮನಿಸಿದಾಗ ತಿಳಿದು ಬರುತ್ತದೆ.

**ಕೋಷ್ಟಕ: ೨.೨೯: ಮತದಾನದ ಗುರುತಿನ ಚೀಟಿ ಅವಶ್ಯಕತೆ ವಿವರ**

| ಕ್ರ.ಸಂ | ಮತದಾನದ ಗುರುತಿನ ಚೀಟಿ ಅವಶ್ಯಕತೆ ಇರುವ ಕುಟುಂಬಗಳು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧೦ ರಿಂದ ೨೦ | ೧೦ | ೧೪.೨೯ |
| ೦೨ | ಪ್ರತಿಕ್ರಿಯಿಸಿರುವುದಿಲ್ಲ | ೬೦ | ೮೫.೭೧ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೨೯ ರಲ್ಲಿ ಮತದಾನದ ಗುರುತಿನ ಚೀಟಿಯ ಅವಶ್ಯಕತೆಯ ಪ್ರಮಾಣವನ್ನು ನಮೂದಿಸಲಾಗಿದೆ. ಶೇಕಡಾ ೧೪.೨೯ ರಷ್ಟು ಹಾಡಿ/ಪೋಡುಗಳ ೧೦ ರಿಂದ ೨೦ ಕುಟುಂಬಗಳ ಜನರಿಗೆ ಬೇಡಿಕೆ ಸಲ್ಲಿಸಿದರೆ ಶೇಕಡಾ ೬೦ ರಷ್ಟು ಹಾಡಿ/ಪೋಡುಗಳು ಯಾವುದೇ ರೀತಿಯ ಪ್ರತಿಕ್ರಿಯೆ ನೀಡಿರುವುದಿಲ್ಲ. ಬಹುಶಃ ಇವರಿಗೆ ರಾಜಕೀಯ ಮತ್ತು ರಾಜಕೀಯ ವ್ಯಕ್ತಿಗಳ ಮೇಲಿನ ನಿರಾಸಕ್ತಿ ಈ ರೀತಿ ವ್ಯಕ್ತವಾಗಿದೆ.

**೨.೩.೨೧.೧೧. ಆಧಾರ್ ಗುರುತಿನ ಚೀಟಿ ಬೇಡಿಕೆಯ ಮಾಹಿತಿ**

ಇಂದು ಪ್ರತಿಯೊಂದು ಸರ್ಕಾರಿ ಸೇವೆ ಪಡೆಯಲು ಆಧಾರ್ ಗುರುತಿನ ಚೀಟಿ ಕಡ್ಡಾಯಗೊಳಿಸುತ್ತಿರುವುದರಿಂದ ಇದಕ್ಕೆ ಇನ್ನಿಲ್ಲದ ಮಹತ್ವ ಬಂದಿದೆ. ಆದಿವಾಸಿಗಳಲ್ಲೂ ಇದರ ಬಗೆಗೆ ಜಾಗೃತಿ ಇರುವುದನ್ನು ಕಾಣಬಹುದಾಗಿದೆ.

**ಕೋಷ್ಟಕ: ೨.೩೦: ಆಧಾರ್ ಗುರುತಿನ ಚೀಟಿ ಅವಶ್ಯಕತೆ ವಿವರ**

| ಕ್ರ.ಸಂ | ಆಧಾರ್ ಗುರುತಿನ ಚೀಟಿ ಅವಶ್ಯಕತೆ ಇರುವ ಜನರು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧೦ ರಿಂದ ೨೦ | ೩೭ | ೫೨.೮೬ |
| ೦೨ | ೨೦ರಿಂದ ೪೦ | ೧೬ | ೨೨.೮೬ |
| ೦೩ | ೪೦ ರಿಂದ ೬೦ | ೧೧ | ೧೫.೭೧ |
| ೦೪ | ಹಾಡಿ/ಪೋಡಿನ ಎಲ್ಲಾ ಜನರಿಗೆ | ೬ | ೦೮.೫೭ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೩೦ ರಲ್ಲಿ ಆಧಾರ್ ಗುರುತಿನ ಚೀಟಿಯ ಅವಶ್ಯಕತೆಯ ಪ್ರಮಾಣವನ್ನು ನಮೂದಿಸಿದೆ. ಸರಾಸರಿ ಪ್ರಮಾಣದಲ್ಲಿ ವ್ಯಕ್ತಪಡಿಸಿದಂತೆ ೧೫ x ೩೭=೫೫೫, ೩೦ x ೧೬=೪೮೦, ೫೦ x ೧೧=೫೫೦ ಅಂದರೆ ಶೇಕಡಾ ೯೧.೪೨ ರಷ್ಟು ಹಾಡಿ/ಪೋಡುಗಳ ೧೫೮೫ ಜನರು ಮತ್ತು ಶೇಕಡಾ ೮.೫೭ ರಷ್ಟು ಹಾಡಿ/ಪೋಡುಗಳ ಎಲ್ಲಾ ಜನರು ಆಧಾರ್ ಗುರುತಿನ ಚೀಟಿಯ ಅವಶ್ಯಕತೆಯನ್ನು ವ್ಯಕ್ತಪಡಿಸಿದ್ದಾರೆ.

ಪ್ರಸ್ತುತ ಸರ್ಕಾರಿ ಸೌಲಭ್ಯಗಳನ್ನು ಪಡೆಯಲು ಆಧಾರ್ ಕಾರ್ಡ ಅವಶ್ಯಕತೆ ಎಲ್ಲಾ ಕಡೆ ಇರುವುದರಿಂದ ಆದಿವಾಸಿಗಳು ಇದನ್ನು ಪಡೆಯಲು ಆಸಕ್ತರಾಗಿದ್ದಾರೆ.

### ೨.೩.೨೧.೧೨. ವಿಧವಾ ವೇತನದ ಬೇಡಿಕೆ

ಅಂಚಿಗೆ ತಳ್ಳಲ್ಪಟ್ಟ ಸಮುದಾಯಗಳಲ್ಲಿ ವಿಧವೆಯರು ಯಾವತ್ತೂ ಮುಂದಿನ ಸ್ಥಾನ ಗಳಿಸುತ್ತಾರೆ. ಇವರ ಏಳ್ಗೆಗಾಗಿ ಮತ್ತು ಗೌರವಯುತ ಜೀವನ ನೆಡೆಸಲು ವಿಧವೆಯರಿಗಾಗಿ ಮಾಸಿಕ ವೇತನ ಸೌಲಭ್ಯ ಕಲ್ಪಿಸಲಾಗಿದೆ. ಆದರೆ ಇದರ ಬಗೆಗೆ ಸಾಕಷ್ಟು ಜಾಗೃತಿ ಇಲ್ಲದಿರುವುದರಿಂದ ಆದಿವಾಸಿ ವಿಧವೆಯರು ಇನ್ನೂ ಇದರ ಸೌಲಭ್ಯ ಪಡೆಯಲು ಹಿಂದುಳಿದಿದ್ದಾರೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

**ಕೋಷ್ಟಕ: ೨.೩೧: ವಿಧವಾ ವೇತನದ ಅವಶ್ಯಕತೆ ವಿವರ**

| ಕ್ರಸಂ | ವಿಧವಾ ವೇತನ ಅವಶ್ಯಕತೆ ವ್ಯಕ್ತಪಡಿಸಿದ ಜನರು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧ ರಿಂದ ೫ | ೧೩ | ೧೮.೫೭ |
| ೦೨ | ೫ ರಿಂದ ೧೦ | ೩೩ | ೪೭.೧೪ |
| ೦೩ | ೧೦ ರಿಂದ ೨೦ | ೧೬ | ೨೨.೮೬ |
| ೦೪ | ೨೦ ಕ್ಕಿಂತ ಹೆಚ್ಚು | ೮ | ೧೧.೪೩ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೩೧ ವಿಧವಾ ವೇತನ ಅವಶ್ಯಕತೆಯನ್ನು ವ್ಯಕ್ತಪಡಿಸುತ್ತದೆ. ಇಲ್ಲಿ ಸರಾಸರಿಯಲ್ಲಿ ಅಂಕಿಗಳನ್ನು ಕಂಡುಕೊಳ್ಳಲಾಗಿದೆ. ಆಗ ೨.೫ x ೪೬=೧೧೫, ೭.೫ x ೧೧=೮೩, ೧೫ x ೯=೧೩೫ ಮತ್ತು ೨೦ x ೪=೮೦ ಅಂದರೆ ಒಟ್ಟು ೪೧೩ ವಿಧವೆಯರಿಗೆ ವಿಧವಾ ವೇತನದ ಅವಶ್ಯಕತೆ ಇದೆ. ಇದು ಕೇವಲ ೭೦ ಹಾಡಿಗಳ ಬೇಡಿಕೆ.

### ೨.೩.೨೧.೧೩. ಅಂಗವಿಕಲರ ಮಾಸಿಕ ವೇತನದ ಮಾಹಿತಿ

ವಿಕಲಚೇತನರ ಗೌರವಯುತ ಜೀವನಕ್ಕಾಗಿ ನೀಡುತ್ತಿರುವ ಪಿಂಚಣಿ ಕುರಿತು ಇಲ್ಲಿ ಚರ್ಚಿಸಲಾಗಿದೆ.

**ಕೋಷ್ಟಕ: ೨.೩೨: ಅಂಗವಿಕಲರ ವೇತನದ ಅವಶ್ಯಕತೆ ವಿವರ**

| ಕ್ರ.ಸಂ | ಅಂಗವಿಕಲ ವೇತನ ಬಯಸಿದವರು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧ ರಿಂದ ೫ | ೧೫ | ೨೧.೪೩ |
| ೦೨ | ೫ ರಿಂದ ೧೦ | ೦ | ೦ |
| ೦೩ | ೧೦ ರಿಂದ ೨೦ | ೦ | ೦ |
| ೦೪ | ಪ್ರತಿಕ್ರಿಯಿಸಿರುವುದಿಲ್ಲ. | ೫೫ | ೭೮.೫೭ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೩೨ ಅಂಗವಿಕಲರ ವೇತನ ಅವಶ್ಯಕತೆಯ ಪ್ರಮಾಣವನ್ನು ಕಂಡುಕೊಳ್ಳಲಾಗಿದೆ. ಇದನ್ನು ಸರಾಸರಿಯಲ್ಲಿ ಅಂಕಿಗಳನ್ನು ಕಂಡುಹಿಡಿದಾಗ ೨.೫ x ೧೫=೩೮ ಅಂದರೆ ಶೇಕಡಾ ೨೧.೪೩ ರಷ್ಟು ಹಾಡಿಗಳ ೩೮ ಜನರಿಗೆ ಅಂಗವಿಕಲರ ವೇತನದ ಅವಶ್ಯಕತೆಯನ್ನು ವ್ಯಕ್ತಪಡಿಸಿದ್ದಾರೆ. ಶೇಕಡಾ ೭೮.೫೭ ರಷ್ಟು ಹಾಡಿ/ಪೋಡುಗಳಲ್ಲಿ ಇದರ ಬಗೆಗೆ ಪ್ರತಿಕ್ರಿಯಿಸಿರುವುದಿಲ್ಲ. ಕೋಷ್ಟಕ ೦೧ ರಲ್ಲಿ ಕಂಡುಬಂದಂತೆ ಅಧ್ಯಯನಕ್ಕೆ ಆಯ್ದುಕೊಂಡ ೭೦ ಹಾಡಿಗಳ ಒಟ್ಟು ಜನಸಂಖ್ಯೆ ೧೬೦೮೭ ಇದನ್ನು ಆಧಾರವಾಗಿಟ್ಟುಕೊಂಡು ನೋಡುವುದಾದರೆ ೩೮/೧೬೦೮೭ x ೧೦೦= ೦.೨೩೬ ಅಂದರೆ ಶೇಕಡಾ ೦.೨೩೬ ರಷ್ಟು ಅಂಗವಿಕಲರಿಗೆ ಇದರ ಅವಶ್ಯಕತೆ ಇದೆ.

**೨.೩.೨೧.೧೪. ವೃದ್ಧಾಪ್ಯ ವೇತನದ ಮಾಹಿತಿ**

ವೃದ್ಧರು ಹಲವು ರೀತಿಯ ಸಮಸ್ಯೆಗಳನ್ನು ಎದುರಿಸುತ್ತಾರೆ. ಮುಖ್ಯವಾಗಿ ದೈಹಿಕ ಮತ್ತು ಮಾನಸಿಕ ಬೇನೆಗಳು. ಆದಾಯ ಇಲ್ಲದಿರುವುದು. ಈ ಹಿನ್ನೆಲೆಯಲ್ಲಿ ಪಿಂಚಣಿ ಯೋಜನೆ ತರಲಾಗಿದೆ.

**ಕೋಷ್ಟಕ: ೨.೩೩: ವೃದ್ಧಾಪ್ಯ ವೇತನದ ಅವಶ್ಯಕತೆ ವಿವರ**

| ಕ್ರ.ಸಂ | ವೃದ್ಧಾಪ್ಯ ವೇತನದ ಬೇಡಿಕೆ ಸಲ್ಲಿಸಿದವರು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧ ರಿಂದ ೫ | ೫೭ | ೮೧.೪೩ |
| ೦೨ | ೫ ರಿಂದ ೧೦ | ೧೨ | ೧೭.೧೪ |
| ೦೩ | ೧೦ ರಿಂದ ೨೦ | ೧ | ೧.೪೨ |
| ೦೪ | ೨೦ ಕ್ಕಿಂತ ಹೆಚ್ಚು | ೦ | ೦ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೩೩ ವೃದ್ಧಾಪ್ಯ ವೇತನದ ಬೇಡಿಕೆಯನ್ನು ಸೂಚಿಸುತ್ತದೆ. ಸರಾಸರಿಯಲ್ಲಿ ನೋಡಿದಾಗ ೨.೫ x ೫೭=೧೪೩, ೭.೫ x ೧೨=೯೦ ಮತ್ತು ೧೫ x

೧=೧೫ ಅಂದರೆ ೨೪೮ ವೃದ್ಧರಿಗೆ ವೃದ್ಧಾಪ್ಯ ವೇತನದ ಅವಶ್ಯಕತೆಯನ್ನು ವ್ಯಕ್ತಪಡಿಸಿದ್ದಾರೆ. ಕೋಷ್ಟಕ ೦೧ ರಲ್ಲಿ ಕಂಡುಬಂದಂತೆ ಅಧ್ಯಯನಕ್ಕೆ ಆಯ್ದುಕೊಂಡ ೭೦ ಹಾಡಿಗಳ ಒಟ್ಟು ಜನಸಂಖ್ಯೆ ೧೬೦೮೭ ಇದನ್ನು ಆಧಾರವಾಗಿಟ್ಟುಕೊಂಡು ನೋಡುವುದಾದರೆ ೨೪೮/೧೬೦೮೭ x ೧೦೦=೧.೫೪ ಅಂದರೆ ಕೇವಲ ಶೇಕಡಾ ೧.೫೪ ರಷ್ಟು ವೃದ್ಧರಿದ್ದಾರೆಯೇ? ಅಥವಾ ಉಳಿದ ಎಲ್ಲರಿಗೂ ವೃದ್ಧಾಪ್ಯ ವೇತನ ದೊರಕಿದೆಯೇ? ಅಥವಾ ಆದಿವಾಸಿಗಳು ವೃದ್ಧರಾಗುವವರೆಗೂ ಬದುಕುತ್ತಿಲ್ಲವೆ? ಇಲ್ಲವಾದರೆ ಯಾಕೆ? ಇಂತಹ ಹಲವು ಪ್ರಶ್ನೆಗಳು ರಾಷ್ಟ್ರೀಯ ವೃದ್ಧರ ಅಂಕಿ ಅಂಶಗಳನ್ನು ನೋಡಿದಾಗ ಹುಟ್ಟಿಕೊಳ್ಳುತ್ತವೆ. ಇದಕ್ಕೆ ಉತ್ತರ ಕಂಡುಕೊಳ್ಳಬೇಕಿದೆ.

**೨.೩.೨೧.೧೫. ಸ್ವ ಉದ್ಯೋಗ ತರಬೇತಿ**

ಆದಿವಾಸಿಗಳು ಹಲವು ಕಾರಣಗಳಿಂದ ಆರ್ಥಿಕ ಸಮಸ್ಯೆ ಎದುರಿಸುತ್ತಿದ್ದಾರೆ. ಇವರ ಆರ್ಥಿಕ ಸಂಕಷ್ಟ ತೀರಬೇಕಾದರೆ ಉದ್ಯೋಗ ಅತೀ ಅವಶ್ಯಕವಾಗಿದ್ದು ಇದರ ಬೇಡಿಕೆಯನ್ನಿ ಇಲ್ಲಿ ಕಂಡುಕೊಳ್ಳಲಾಗಿದೆ.

**ಕೋಷ್ಟಕ: ೨.೩೪: ಸ್ವ ಉದ್ಯೋಗ ತರಬೇತಿ ಬೇಡಿಕೆ ವಿವರ**

| ಕ್ರ.ಸಂ | ಸ್ವ ಉದ್ಯೋಗ ತರಬೇತಿ ಬಯಸಿದವರು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧ ರಿಂದ ೫ | ೧೫ | ೨೧.೪೩ |
| ೦೨ | ೫ ರಿಂದ ೧೦ | ೧೩ | ೧೮.೫೭ |
| ೦೩ | ೧೦ ರಿಂದ ೨೦ | ೧೪ | ೨೦ |
| ೦೪ | ೨೦ ಕ್ಕಿಂತ ಹೆಚ್ಚು | ೨೮ | ೪೦ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೩೪ ಸ್ವ ಉದ್ಯೋಗ ತರಬೇತಿ ಅವಶ್ಯಕತೆಯನ್ನು ವ್ಯಕ್ತಪಡಿಸಿದೆ. ಸರಾಸರಿಯಲ್ಲಿ ಅಂಕಿಗಳನ್ನು ಕಂಡುಕೊಂಡಾಗ ೨.೫ x ೧೫=೩೮, ೭.೫ x ೧೩=೯೮, ೧೫ x ೧೪=೨೧೦ ಮತ್ತು ೨೦ x ೨೮=೫೬೦ ಅಂದರೆ ಒಟ್ಟು ೭೦ ಹಾಡಿ/ಪೋಡುಗಳಿಂದ ೯೦೬ ಜನರು ಸ್ವ-ಉದ್ಯೋಗ ತರಬೇತಿಗೆ ತಯಾರಿರುವ ಮಾಹಿತಿ ಲಭ್ಯವಾಗಿದೆ. ಇವರಲ್ಲಿ ಹೆಚ್ಚಾಗಿ ಪ್ರೌಢಶಾಲೆ ಮತ್ತು ಪಿ.ಯು.ಸಿ ಕಲಿತು ಮನೆಯಲ್ಲಿರುವವರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿದೆ. ಮೊಬೈಲ್ ರಿಪೇರಿ, ಕಂಪ್ಯೂಟರ್ ಸೆಂಟರ್, ಆಹಾರ ಸಂಸ್ಕರಣೆ ಘಟಕ, ವಾಹನ ಚಾಲನಾ ತರಬೇತಿ ಮತ್ತು ಪರವಾನಗಿ, ಇಂತಹ ಹಲವು ವಿಷಯಗಳಲ್ಲಿ ಆಸಕ್ತಿ ಉಳ್ಳವರಾಗಿದ್ದು ಆಸಕ್ತಿಗನುಗುಣವಾಗಿ ತಂಡಗಳನ್ನು ರಚಿಸಿ ತರಬೇತಿ ನೀಡಿದರೆ ಅತಂತ್ರ ಸ್ಥಿತಿಯಲ್ಲಿರುವ ಆದಿವಾಸಿ ಯುವಕರು ಬದುಕು ಕಟ್ಟಿಕೊಳ್ಳಬಹುದೆಂಬುದನ್ನು ವ್ಯಕ್ತಡಿಸಿದ್ದಾರೆ.

### ೨.೩.೨೧.೧೬. ಬ್ಯಾಂಕ್ ಖಾತೆ ಅವಶ್ಯಕತೆ

ಸರ್ಕಾರ ಯಾವುದೇ ಸೇವೆಗಳನ್ನು ಇಂದು ನೇರ ಫಲಾನುಭವಿಯ ಬ್ಯಾಂಕ್ ಖಾತೆಗೆ ಜಮಾ ಮಾಡುವ ವ್ಯವಸ್ಥೆ ಜಾರಿಗೊಳಿಸುತ್ತಿರುವುದರಿಂದ ಇದಕ್ಕೆ ಅತೀ ಬೇಡಿಕೆ ಇರುವುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

**ಕೋಷ್ಟಕ: ೨.೩೫: ಬ್ಯಾಂಕ್ ಖಾತೆ ಹೊಂದಲು ಬಯಸಿದವರ ವಿವರ**

| ಕ್ರ.ಸಂ | ಬ್ಯಾಂಕ್ ಖಾತೆ ಹೊಂದಲು ಬಯಸಿದವರು | ಒಟ್ಟು ಹಾಡಿ/ಪೋಡು | ಒಟ್ಟು ಪ್ರತಿಶತ |
|---|---|---|---|
| ೦೧ | ೧೦ ರಿಂದ ೨೦ | ೯ | ೧೨.೮೬ |
| ೦೨ | ೨೦ ರಿಂದ ೪೦ | ೧೨ | ೧೭.೧೪ |
| ೦೩ | ೪೦ ರಿಂದ ೬೦ | ೧೪ | ೨೦ |
| ೦೪ | ಹಾಡಿ/ಪೋಡಿನ ಪ್ರತಿಯೊಬ್ಬರಿಗೂ | ೩೫ | ೫೦ |
| | ಒಟ್ಟು | ೭೦ | ೧೦೦ |

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೩೫ ರಲ್ಲಿ ಬ್ಯಾಂಕ್ ಖಾತೆ ಸೌಲಭ್ಯದ ಅವಶ್ಯಕತೆಯನ್ನು ಕಲೆಹಾಕಲಾಗಿದೆ. ಇದನ್ನು ಸರಾಸರಿಯಲ್ಲಿ ನೋಡಿದಾಗ ೧೫ x ೯=೧೩೫, ೩೦ x ೧೨=೩೬೦, ೫೦ x ೧೪=೭೦೦ ಪ್ರತಿಶತ ೫೦ ಹಾಡಿಗಳಲ್ಲಿ ೧೧೯೫ ಜನರು ಹಾಗೂ ಶೆಕಡಾ ೫೦ ಹಾಡಿಯ ಪ್ರತಿಯೊಬ್ಬರಿಗೂ ಬ್ಯಾಂಕ್ ಖಾತೆ ಬೇಕು ಎಂದು ವ್ಯಕ್ತಪಡಿಸಿದ್ದಾರೆ. ಸರ್ಕಾರದ ಪ್ರತಿಯೊಂದು ಸೇವೆಗಳ ಮೊತ್ತವನ್ನು ನೇರವಾಗಿ ಫಲಾನುಭವಿಯ ಬ್ಯಾಂಕಿನ ಖಾತೆಗೆ ಹಣ ಜಮಾವಣೆ ಮಾಡುವ ಪ್ರಕ್ರಿಯೆ ಜಾರಿಯಲ್ಲಿರುವುದರಿಂದ ಬ್ಯಾಂಕ್ ಖಾತೆ ಅವಶ್ಯಕತೆ ಇದೆ.

### ೨.೩.೨೧.೧೭. ಉನ್ನತ ಶಿಕ್ಷಣಕ್ಕೆ ಶಿಷ್ಯವೇತನದ ಅವಶ್ಯಕತೆ

ಶೇಕಡಾ ೧೦೦ ರಷ್ಟು ಹಾಡಿ/ಪೋಡುಗಳಲ್ಲಿ ಶಿಷ್ಯವೇತನಕ್ಕೆ ಬೇಡಿಕೆ ಇಟ್ಟಿರುತ್ತಾರೆ. ಇದು ಅವರ ಶಿಕ್ಷಣದ ಮೇಲಿನ ಆಸಕ್ತಿಯನ್ನು ಪ್ರತಿಬಿಂಬಿಸುತ್ತದೆ.

### ೨.೩.೨೧.೧೮.ವೃದ್ಧಾಪ್ಯ ಬಸ್ ಪಾಸ್ ಬೇಡಿಕೆ

ಎಲ್ಲಾ ಹಾಡಿಗಳಲ್ಲಿಯೂ ಕನಿಷ್ಟ ಒಂದರಿಂದ ಗರಿಷ್ಟ ಐದು ಜನ ವೃದ್ಧರಿಗೆ ವೃದ್ಯಾಪ್ಯದ ರಿಯಾಯಿತಿ ದರದ ಬಸ್ ಪಾಸ್‌ನ ಅವಶ್ಯಕತೆಯನ್ನು ಕಾಣಲಾಗಿದೆ. ವೃದ್ಧರು ಆರೋಗ್ಯ ಸಮಸ್ಯೆಗಳಿಂದ ಬಳಲುವುದು ಸಾಮಾನ್ಯ. ಇವರಿಗೆ ಬಸ್ ಪಾಸ್ ದೊರಕಿಸಿದರೆ ಆಸ್ಪತ್ರೆಗಳಿಗೆ ತೆರಳಲು ಉಪಯೋಗವಾಗುತ್ತದೆ ಎಂಬ ಆಶಯವನ್ನು ವೃದ್ಧ ಮಾಹಿತಿದಾರರು ವ್ಯಕ್ತಪಡಿಸಿದ್ದಾರೆ.

### ೨.೩.೨೧.೧೯. ಬ್ಯಾಂಕ್ ಸಾಲದ ಅವಶ್ಯಕತೆ

ಶೇಕಡಾ ೧೦೦ ಹಾಡಿಗಳಲ್ಲಿಯೂ ೬೦ಕ್ಕಿಂತ ಹೆಚ್ಚು ಕುಟುಂಬಗಳು ಸಾಲಕ್ಕೆ ಬೇಡಿಕೆ ಇಟ್ಟಿರುತ್ತಾರೆ. ಬ್ಯಾಂಕ್ ಸಾಲ ಪಡೆಯಲು ಸ್ಥಿರಾಸ್ತಿಯ ಅಡಮಾನ ಅಥವಾ ಸೂಕ್ತ ವ್ಯಕ್ತಿಯ ಜಾಮೀನಿನ ಅವಶ್ಯಕತೆ ಇದೆ. ಆದಿವಾಸಿಗಳ ಜಮೀನುಗಳಿಗೆ ಕಂದಾಯ ಇಲಾಖೆ ಪಹಣಿ/ಪಟ್ಟ ನೀಡಿಲ್ಲ. ನೀಡಲು ಕಾನೂನಿನ ತೊಡಕಿರುವುದನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಿದೆ. ಪರಿಸ್ಥಿತಿ ಹೀಗಿರುವಾಗ ಇವರ ಸಾಲದ ಬೇಡಿಕೆ ಈಡೇರಬೇಕಾದರೆ ಮತ್ತು ಅಭಿವೃದ್ಧಿ ಸಾಧಿಸಬೇಕಾದರೆ ಆದಿವಾಸಿಗಳ ಜಮೀನಿನ ಸಮಸ್ಯೆ ಮೊದಲು ಪರಿಹರಿಸಲ್ಪಡಬೇಕಿದೆ.

### ೨.೩.೨೧.೨೦. ಅಂಗನವಾಡಿಗಳ ಅವಶ್ಯಕತೆ

ಶೇಕಡಾ ೪೧.೨೩ ರಷ್ಟು ಬೇಕು ಎಂದು ಮತ್ತು ಶೇಕಡಾ ೫೮.೫೭ ರಷ್ಟು ಪ್ರತಿಕ್ರಿಯಿಸದೇ ಇರುವುದನ್ನು ಕಂಡುಕೊಳ್ಳಲಾಗಿದೆ. ಹಲವು ಹಾಡಿ/ಪೋಡುಗಳಲ್ಲಿ ಈಗಾಗಲೇ ಅಂಗನವಾಡಿಗಳಿವೆ. ಎಲ್ಲಿ ಒಂದು ಕಿ.ಮೀ ನಷ್ಟು ದೂರದಲ್ಲಿ ಅಂಗನವಾಡಿಗಳಿವೆಯೋ ಅಂತಹ ಕಡೆ ಅಂಗನವಾಡಿಗಳಿಗೆ ಬೇಡಿಕೆ ಇಟ್ಟಿರುವುದನ್ನು ಕಾಣಲಾಗಿದೆ. ಅಂಗನವಾಡಿ ಕೇಂದ್ರಗಳಲ್ಲಿ ಪೌಷ್ಠಿಕ ಆಹಾರ ಪೂರೈಸಿ ಮಕ್ಕಳ ಆರೋಗ್ಯದ ಕಡೆ ಗಮನ ಹರಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸುತ್ತವೆ.

### ೨.೩.೨೧.೨೧. ಪ್ರಾಥಮಿಕ ಶಾಲೆಗಳ ಅವಶ್ಯಕತೆ

ಶಾಲೆ ಬೇಕು ಎಂದು ಶೇಕಡಾ ೬೫.೭೧ ರಷ್ಟು ಹಾಡಿಗಳು ಪ್ರತಿಕ್ರಿಯಿಸಿವೆ. ಪ್ರತಿಕ್ರಿಯಿಸದೇ ಇರುವುದು ಶೇಕಡಾ ೩೪.೨೯ರಷ್ಟು ಇದೆ. ಬಹಳಷ್ಟು ಹಾಡಿ/ಪೋಡಿನ ಮಕ್ಕಳಿಗೆ ಶಾಲೆ ದೂರವಾಗಿರುವುದನ್ನು ಇದೇ ಅಧ್ಯಾಯದ ಕೋಷ್ಟಕ ೨.೧೫ ರಲ್ಲಿ ತಿಳಿದುಕೊಳ್ಳಲಾಗಿದೆ.

### ೨.೩.೨೧.೨೨. ಮಾಧ್ಯಮಿಕ ಶಾಲೆಗಳ ಅವಶ್ಯಕತೆ

ಮಾಧ್ಯಮಿಕ ಶಾಲೆ ಬೇಕು ಎಂದು ಶೇಕಡಾ ೫೧.೪೩ ರಷ್ಟು ಮತ್ತು ಪ್ರತಿಕ್ರಿಯಿಸದೇ ಇರುವುದು ಶೇಕಡಾ ೪೮.೫೭ ರಷ್ಟು ಇದೆ. ಅರಣ್ಯದ ಮಧ್ಯೆ ಮತ್ತು ಅರಣ್ಯದಂಚಿನಲ್ಲಿರುವ ಹಲವು ಹಾಡಿ/ಪೋಡುಗಳ ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಶಾಲೆ ವಾಸ ಸ್ಥಳದಿಂದ ದೂರ ಇರುವುದು ಮುಖ್ಯ ಕಾರಣ. ಕನಿಷ್ಟ ೨ ಕೀಲೋಮೀಟರ್ ಅಂತರದಲ್ಲಿ ಶಾಲೆ ಇದ್ದರೆ ಮಕ್ಕಳ ವಿದ್ಯಾಭ್ಯಾಸಕ್ಕೆ ಸಹಕಾರಿಯಾಗುತ್ತದೆ.

### ೨.೩.೨೧.೨೩. ಪ್ರೌಢ ಶಾಲೆಗಳ ಅವಶ್ಯಕತೆ

ಶೇಕಡಾ ೬೨.೮೬ ರಷ್ಟು ಹಾಡಿ/ಪೋಡುಗಳು ಪ್ರೌಢ ಶಾಲೆಯ ಅವಶ್ಯಕತೆಯನ್ನು ವ್ಯಕ್ತಪಡಿಸಿದ್ದಾರೆ. ಶೇಕಡಾ ೩೭.೧೪ ರಷ್ಟು ಇದರ ಕುರಿತು ಪ್ರತಿಕ್ರಿಯಿಸಿರುವುದಿಲ್ಲ. ಆದಿವಾಸಿ ಮಕ್ಕಳು ಪ್ರಾಥಮಿಕ ಅಥವಾ ಮಾಧ್ಯಮಿಕ ಶಿಕ್ಷಣಕ್ಕೆ ತಮ್ಮ ಶೈಕ್ಷಣಿಕ ಯಾತ್ರೆ ಕೊನೆಗೊಳಿಸುತ್ತಿರುವುದು ಪ್ರೌಢಶಾಲೆಗಳ ಅಂತರ. ಸರಯಾದ ರಸ್ತೆ ಮತ್ತು ವಾಹನಗಳ ಸೌಲಭ್ಯದಿಂದ ವಂಚಿತರಾಗಿರುವ ಆದಿವಾಸಿಗಳು ಇದೇ ಕಾರಣದಿಂದ ಶಿಕ್ಷಣದಿಂದಲೂ ವಂಚಿತರಾಗುತ್ತಿರುವುದು ಕಂಡುಬರುತ್ತದೆ.

### ೨.೩.೨೧.೨೪. ಸಾರ್ವಜನಿಕ ಉದ್ಯಾನವನದ ಬೇಡಿಕೆ

ಶೇಕಡಾ ೫೭.೧೪ ರಷ್ಟು ಹಾಡಿ/ಪೋಡುಗಳು ಸಾರ್ವಜನಿಕ ಉದ್ಯಾನವನ ಬೇಕು ಎಂದು ಹೇಳಿದರೆ ಶೇಕಡಾ ೪೨.೮೬ ರಷ್ಟು ಏನೂ ಪ್ರತಿಕ್ರಿಯಿಸಿರುವುದಿಲ್ಲ. ಇದಕ್ಕೆ ಅವರು ಕೊಡುವ ಕಾರಣ ದಟ್ಟ ಕಾನನಗಳ ಮಧ್ಯೆ ಬದುಕಿದ ನಮಗೆ ಮಾನವ ನಿರ್ಮಿತ ನಾಲ್ಕು ಗಿಡಗಳು ಏನು ಸಂತೋಷ ಕೊಟ್ಟಾವು ಎಂಬ ಮರು ಪ್ರಶ್ನೆ.

### ೨.೩.೨೧.೨೫. ಸಾಮಾಜಿಕ ಅರಣ್ಯ

ಶೇಕಡಾ ೫೪.೨೯ ರಷ್ಟು ಹಾಡಿ/ಪೋಡುಗಳು ಸಾಮಾಜಿಕ ಅರಣ್ಯ ಬೇಕು ಎಂದು ಹೇಳಿದರೆ ಶೇಕಡಾ ೪೫.೭೧ ರಷ್ಟು ಏನೂ ಪ್ರತಿಕ್ರಿಯಿಸಿರುವುದಿಲ್ಲ. ಇದಕ್ಕೆ ಅವರು ಕೊಡುವ ಕಾರಣ ಸಾಮಾಜಿಕ ಅರಣ್ಯದಲ್ಲಿ ಯಾವುದೇ ರೀತಿಯ ಪ್ರಯೋಜನವಾಗದು. ಅದರಲ್ಲಿ ಯಾವುದೇ ರೀತಿಯ ಅರಣ್ಯ ಕಿರು ಉತ್ಪನ್ನಗಳು ದೊರೆಯುವುದಿಲ್ಲ. ಆದರೆ ಕೆಲವರು ಕನಿಷ್ಠ ಉರುವಲು ಕಟ್ಟಿಗೆ ಪಡೆಯಲಾದರೂ ಇದರ ಅವಶ್ಯಕತೆ ಇದೆ ಎಂದು ಹೇಳುತ್ತಾರೆ.

### ೨.೩.೨೧.೨೬.ಆದಿವಾಸಿಗಳ ಪರವಾಗಿ ಕಾರ್ಯನಿರ್ವಹಿಸುತ್ತಿರುವ ಸ್ವಯಂಸೇವಾ ಸಂಸ್ಥೆಗಳು

ಹಲವು ಸಂಸ್ಥೆಗಳು ಆದಿವಾಸಿಗಳ ಅಭಿವೃದ್ಧಿಗಾಗಿ ವಿಭಿನ್ನ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಸರ್ಕಾರ ಸೇವೆಗಳನ್ನು ನೀಡುವಲ್ಲಿ ವಿಫಲವಾದಂತಹ ಸಂದರ್ಭದಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಮಹತ್ವದ ಪಾತ್ರ ನಿರ್ವಹಿಸುತ್ವೆ. ಅವುಗಳ ವಿವರವನ್ನು ಇಲ್ಲಿ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

**ಕೋಷ್ಟಕ: ೨.೩೬: ಹಾಡಿ/ಪೋಡು/ಕಾಲೊನಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆಗಳು ಮತ್ತು ಅವುಗಳು ನಿರ್ವಹಿಸುತ್ತಿರುವ ಕಾರ್ಯಗಳ ವಿವರ**

| ಕ್ರ.ಸಂ | ಸಂಸ್ಥೆಯ ಹೆಸರು | ನಿರ್ವಹಿಸುತ್ತಿರುವ ಕಾರ್ಯಗಳು [೧. ಹೌದು. ೨. ಇಲ್ಲ] | | | | | | | | |
|---|---|---|---|---|---|---|---|---|---|---|
| | | 1 | 2 | 3 | 4 | 5 | 6 | 7 | 8 | 9 |
| ೧ | ಡೀಡ್ | ೧ | ೧ | ೨ | ೧ | ೧ | ೨ | ೨ | ೨ | ೧ |
| ೨ | ಫೆಡೀನ ವಿಕಾಸನ | ೧ | ೧ | ೨ | ೧ | ೧ | ೨ | ೨ | ೨ | ೧ |
| ೩ | ನಿಸರ್ಗ ಫೌಂಢೇಶನ್ | ೧ | ೧ | ೨ | ೧ | ೧ | ೨ | ೨ | ೨ | ೧ |
| ೪ | ವಿ.ಜಿ.ಕೆ.ಕೆ | ೧ | ೧ | ೧ | ೧ | ೧ | ೨ | ೨ | ೧ | ೧ |
| ೫ | ಎಸ್.ವಿ.ವೈ.ಎಮ್ | ೧ | ೧ | ೧ | ೧ | ೧ | ೨ | ೧ | ೧ | ೧ |
| ೬ | ಬುಡಕಟ್ಟು ಕೃಷಿಕರ ಸಂಘ | ೧ | ೧ | ೨ | ೨ | ೨ | ೨ | ೨ | ೨ | ೨ |
| ೭ | ಲ್ಯಾಂಪ್ಸ್ | ೨ | ೨ | ೨ | ೨ | ೨ | ೧ | ೨ | ೨ | ೨ |
| ೮ | ಏಟ್ರಿ | ೧ | ೧ | ೨ | ೧ | ೧ | ೨ | ೨ | ೨ | ೧ |

**ಸೂಚನೆ:** ನಿರ್ವಹಿಸುತ್ತಿರುವ ಕಾರ್ಯಗಳ ಸಂಕೇತಿಕರಣಗಳು– 1. ಸ್ವ-ಸಹಾಯ ಸಂಘ ರಚನೆ. 2. ಅರಣ್ಯ ಹಕ್ಕುಗಳಿಗಾಗಿ ಹೋರಾಟ. 3. ಕಿರು ಸಾಲ. 4. ಶಿಕ್ಷಣ. 5. ಸಾವಯವ ಕೃಷಿಗೆ ಸಹಾಯ. 6. ಅರಣ್ಯ ಕಿರು ಉತ್ಪನ್ನಗಳ ಮಾರಾಟ. 7. ಕುಡಿಯುವ ನೀರಿನ ಸೌಲಭ್ಯ 8. ಆರೋಗ್ಯ ಸೇವೆ. 9. ಸ್ವಯಂ ಉದ್ಯೋಗ ತರಬೇತಿ.

(ಮೂಲ: ಕ್ಷೇತ್ರ ಅಧ್ಯಯನ)

ಕೋಷ್ಟಕ ೨.೩೬ ಹಾಡಿ/ಪೋಡು/ಕಾಲೊನಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆಗಳು ಮತ್ತು ಅವುಗಳು ನಿರ್ವಹಿಸುತ್ತಿರುವ ಕಾರ್ಯಗಳ ವಿವರವನ್ನು ನೀಡುತ್ತದೆ. ಕೋಷ್ಟಕದಲ್ಲಿ ತೋರಿಸಿದಂತೆ ಸ್ವ-ಸಹಾಯ ಸಂಘ ರಚನೆಯನ್ನು ಏಳು ಸಂಸ್ಥೆಗಳು ಮಾಡುತ್ತಿವೆ. ಆದಿವಾಸಿಗಳ ಪರವಾಗಿ ಏಳು ಸಂಸ್ಥೆಗಳು ಅರಣ್ಯ ಹಕ್ಕುಗಳಿಗಾಗಿ ಹೋರಾಟವನ್ನು ಮಾಡುತ್ತಿವೆ. ಆದಿವಾಸಿಗಳಿಗೆ ಬೇಕಾದ ಕಿರು ಸಾಲವನ್ನು ಕೊಡುವ ಕೆಲಸವನ್ನು ಎರೆಡು ಸಂಸ್ಥೆಗಳು ಮಾತ್ರ ನಿರ್ವಹಿಸುತ್ತಿವೆ. ಇನ್ನು ಶಿಕ್ಷಣ ಮತ್ತು ಸಾವಯವ ಕೃಷಿ ಸಹಾಯಕ್ಕೆ ಸಂಬಂಧಿಸಿದಂತೆ ಆರು ಸಂಸ್ಥೆಗಳು ಕಾರ್ಯನಿರ್ವಹಿಸಿದರೆ ಲ್ಯಾಂಪ್ಸ್ ಸೊಸೈಟಿ ಮಾತ್ರ ಅರಣ್ಯ ಕಿರು ಉತ್ಪನ್ನಗಳ ಮಾರಾಟ ಕಾರ್ಯ ನಿರ್ವಹಿಸುತ್ತಿದೆ. ಕುಡಿಯುವ ನೀರಿನ ಸೌಲಭ್ಯಕ್ಕೆ ಸಂಬಂಧಿಸಿದಂತೆ ಒಂದು ಸಂಸ್ಥೆ ಮಾತ್ರ ಕಾರ್ಯನಿರ್ವಹಿಸುತ್ತಿರುವುದನ್ನು ಗಮನಿಸಲಾಗಿದೆ. ಹಾಗೆಯೇ ಆರೋಗ್ಯ ಸೇವೆ ಮತ್ತು ಸ್ವಯಂ ಉದ್ಯೋಗ ತರಬೇತಿಗೆ ಸಂಬಂಧಿಸಿದಂತೆ ಎರೆಡು ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿರುವುದನ್ನು ಗಮನಿಸಲಾಗಿದೆ.

ಸಂಸ್ಥೆಗಳು ಸ್ವ ಇಚ್ಚೆಯಿಂದ ಕಾರ್ಯನಿರ್ವಹಿಸುತ್ತಿರುವ ಕಾರ್ಯ ಶ್ಲಾಘನೀಯ. ಆದರೆ ಮಿತವಾದ ಸಂಪನ್ಮೂಲಗಳಿಂದ ಸಂಸ್ಥೆಗಳು ಎಲ್ಲಾ ಆದಿವಾಸಿಗಳಿಗೆ ಉತ್ತಮ ಸೇವೆ ನೀಡಲು ಸಾಧ್ಯವಾಗದೆ ಇರುವುದನ್ನು ಗಮನಿಸಲಾಗಿದೆ. ಹೀಗಾಗಿ ಎಲ್ಲಿ

ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿಲ್ಲವೂ ಅಂತಹ ಕಡೆ ಸರ್ಕಾರದ ವಿಶೇಷ ಕಾರ್ಯಕ್ರಮಗಳ ಅವಶ್ಯಕತೆಯನ್ನು ಅಧ್ಯಯನದ ಸಂದರ್ಭದಲ್ಲಿ ಮನಗಾಣಲಾಗಿದೆ.

**ಉಪಸಂಹಾರ**

ಅರಣ್ಯ ಮತ್ತು ಆದಿವಾಸಿಗಳ ಬಗೆಗೆ ಚರ್ಚಿಸಲಾಗಿದೆ. ಅಧ್ಯಯನ ವ್ಯಾಪ್ತಿಯ ಭೌಗೋಳಿಕ ಹಿನ್ನೆಲೆ, ಆದಿವಾಸಿಗಳ ಬಗೆಗಿನ ಕಿರುಪರಿಚಯ ಮತ್ತು ಅರಣ್ಯದೊಂದಿಗೆ ಆದಿವಾಸಿಗಳ ನಂಟು ಹೇಗೆ ಅವರಿಗೆ ವಿಶೇಷ ಜ್ಞಾನ ನೀಡುತ್ತದೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಜೊತೆಗೆ ಮಾನವ ಸಮಾಜ ಜೀವಿ ಮತ್ತು ಪರಿಸರದ ಕೂಸು ಎಂಬುದು ಎಷ್ಟು ಕಟು ಸತ್ಯವೋ, ಅಷ್ಟೇ ಸತ್ಯ ಮಾನವ ಸಂಘರ್ಷ ಜೀವಿಯೂ ಹೌದು ಎಂಬುದು. ಆದಿವಾಸಿಗಳು ಮತ್ತು ನಾಗರಿಕ ಸಮುದಾಯದ ಅಧಿಕಾರಗಳ ನಡುವೆ ನಿತ್ಯ ನಿರಂತರ ಸಂಘರ್ಷ ನಡೆಯುತ್ತಿರುವುದನ್ನು ಗಮನಿಸಬಹುದಾಗಿದೆ. ಇಂತಹ ಸಂಘರ್ಷಗಳು ಆದಿವಾಸಿಗಳಿಗೆ ಸವಾಲುಗಳಾಗಿವೆ. ತರಗು ಬೆಂಕಿಯಿಂದ ಸಾಕಷ್ಟು ಅನುಕೂಲವಿದೆ ಎಂಬುದನ್ನು ಆದಿವಾಸಿಗಳು ಅಧಿಕಾರಿ ವರ್ಗಕ್ಕೆ ಮನವರಿಕೆ ಮಾಡಿದ್ದಾರೆ. ಇದನ್ನು ಅಧಿಕಾರಿಗಳು ತುಂಬು ಮನಸ್ಸಿನಿಂದ ಒಪ್ಪಿದ್ದಾರೆ. ಆದರೆ ಇದರ ಅನುಷ್ಠಾನದಲ್ಲಿ ಇಚ್ಛಾ ಶಕ್ತಿಯುಳ್ಳ ಪ್ರಜ್ಞಾವಂತ ರಾಜಕಾರಣಿಗಳ ಬೆಂಬಲ ಬೇಕಾಗಿದೆ. ಇದು ಪರಿಸರದ ಬಗ್ಗೆ ಆಸಕ್ತಿಯುಳ್ಳ ಅಧಿಕಾರಿ ವರ್ಗದ ಆಶಯ. ಆದರೆ ಕೇವಲ ಇಂತಹ ಆಶಯಗಳಿಂದ ಯಾವುದೇ ಸಮುದಾಯಕ್ಕೆ ಅನುಕೂಲವಾಗದು. ಯಾವುದೇ ವಿಷಯಗಳು ಪರಿಣಾಮಕಾರಿಯಾಗಿ ಅನುಷ್ಠಾನ ಗೊಂಡರೆ ಮಾತ್ರ ಸಮುದಾಯಗಳ ಅಭಿವೃದ್ಧಿ ಸಾಧ್ಯ. ಇದಕ್ಕಾಗಿ ಆದಿವಾಸಿಗಳ ಪಾರಂಪರಿಕ ಜ್ಞಾನದ ಬಳಕೆ ಅವಶ್ಯಕವಾಗಿದೆ. ಹಾಗೆಯೇ ಆದಿವಾಸಿಗಳ ಪ್ರಸ್ತುತ ಜೀವನದ ಸ್ಥಿತಿ ಮತ್ತು ಮುಂದಿನ ಜೀವನದ ಗತಿ ಯನ್ನು ಅರಿಯಲು ಈ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ. ಮುಂದಿನ ಅಧ್ಯಾಯದಲ್ಲಿ ಅರಣ್ಯ ಹಕ್ಕುಗಳ ಕಾಯಿದೆಯ ರಚನೆಯ ಹಿನ್ನೆಲೆಯನ್ನು ಚರ್ಚಿಸಲಾಗಿದೆ.

**ಕೊನೆಟಿಪ್ಪಣಿ:**

೧. ರಂಗನಾಥ್ ಮತ್ತು ಎ.ಎನ್.ಸೋಮಶೇಖರ್, *ಪರಿಸರ ಅಧ್ಯಯನ*, ಮೈಸೂರು ಬುಕ್‌ಹೌಸ್, ೨೦೧೨, ಪುಟ ೧.

೨. ಅದೇ.

೩. ಎಂ.ಬಿ.ಗೌಡರ, *ಪರಿಸರ ಅಧ್ಯಯನ*, ವಿದ್ಯಾನಿಧಿ ಪ್ರಕಾಶನ,೨೦೦೬, ಪುಟ ೦೨.

೪. ಅದೇ.

೫. ಅದೇ.

೬. ಅದೇ.

೭. ಅದೇ.

೮. ರಂಗನಾಥ್ ಮತ್ತು ಸೋಮಶೇಖರ್.ಎ.ಎನ್, *ಪರಿಸರ ಅಧ್ಯಯನ*, ೨೦೧೨, ಪುಟ ಸಂಖ್ಯೆ ೨.

೯. ಪುರಾಣಿ ಪೋಡಿನ ಜಡೇಗೌಡರು ಹೇಳುವ ಹಾಗೆ

೧೦.ಅಚ್ಚುಗಗೌಡ, ಯರಕನಗದ್ದೆ ಪೋಡು, ಬಿಳಿಗಿರಿರಂಗನಬೆಟ್ಟ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ.

೧೧. ಜಡೇಸ್ವಾಮಿಯವರು

೧೨. ಬಸವರಾಜು, ಕಾಲೋನಿ, ಬಿಳಿಗಿರಿರಂಗನಬೆಟ್ಟ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ.

೧೩. ಮೇತ್ರಿ.ಕೆ.ಎಂ. *ಬುಡಕಟ್ಟು ಕುಲಕಸುಬುಗಳು*, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೧೪. ಅದೇ.

೧೫. ಕೃಷ್ಣಾನಂದ ಕಾಮತ್, *ಸಸ್ಯ ಪರಿಸರ*, 'ನಮ್ಮ ವನಸಿರಿ', ಪುಟ ಸಂಖ್ಯೆ ೦೯,

೧೬. ಅದೇ.

೧೭. ಶಿವಾನಂದ ಕಳವೆ, *ಅರಣ್ಯ ಲೋಕದ ಅಲೆಮಾರಿ ಅರಿವು*, ವಿಜಯವಾಣಿ, ೧೫.೦೭.೨೦೧೪, (ವಿಜಯವಿಹಾರ ಪುಟ ೧)

೧೮. ಅದೇ.

೧೯. ಅದೇ.

೨೦. ಬಿ.ಎಂ.ಟಿ.ರಾಜೀವ್, ನೀವೃತ್ತ ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಜಾವಾಣಿ, ಸಂಪುಟ ೧೦, ಸಂಚಿಕೆ ೬೩, ೦೩ ಮಾರ್ಚ್ ೨೦೧೨, ಪುಟ ೦೬

೨೧. ಶಿವಾನಂದ ಕಳವೆ, *ಅರಣ್ಯ, ಬೇರು ಮೂಲಕ್ಕೆ ಪುಟ್ಟ ಪಯಣ*, ಕನ್ನಡ ಪುಸ್ತಕ ಪ್ರಾಧಿಕಾರ, 2008, ಪುಟ 09.



# ಅಧ್ಯಾಯ : ಮೂರು

## ಅರಣ್ಯ ಹಕ್ಕುಗಳ ಕಾಯಿದೆ ರಚನೆಯ ಹಿನ್ನೆಲೆ ಮತ್ತು ಅನುಷ್ಠಾನ



ಪೀಠಿಕೆ

ಆದಿವಾಸಿ ಸಮುದಾಯ ತಾವು ಹುಟ್ಟಿ ಬೆಳೆದ ಸ್ಥಳದ ಭೂಮಿಯೊಂದಿಗೆ ಶಾಶ್ವತ ಸಂಬಂಧ ಹೊಂದಿರುವ ಹಕ್ಕನ್ನು ತಮ್ಮ ಪರಂಪರೆಯಿಂದ ಹೊಂದಿದ್ದಾರೆ. ಅರಣ್ಯ ಅವರ ಪ್ರಮುಖ ಆಸ್ತಿ. ಮತ್ತು ನೈಸರ್ಗಿಕವಾಗಿ ಬಂದ ಅತ್ಯಮೂಲ್ಯ ಆಸ್ತಿಯಾಗಿದೆ. ಅರಣ್ಯದಿಂದ ಬರುವ ಆದಾಯದ ಮೂಲಕ ಅವರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಬದುಕು ನಿರ್ಣಯವಾಗುತ್ತದೆ. ಆದ್ದರಿಂದ ಅರಣ್ಯದ ಜೊತೆಗಿನ ಆದಿವಾಸಿ ಜನರ ಭಾವನಾತ್ಮಕ ಸಂಬಂಧ ಯಾವುದೇ ಕಾರಣಕ್ಕೂ ಧಕ್ಕೆಯಾಗದಂತೆ ನೋಡಿಕೊಳ್ಳಬೇಕಿದೆ.

ಅರಣ್ಯ ಮಾನವನ ಅನೇಕ ಬಯಕೆಗಳನ್ನು ಪೂರೈಸುತ್ತದೆ. ಪ್ರಾಣಿ ಸಂಕುಲಕ್ಕೆ ಆಶ್ರಯ ಒದಗಿಸಿದೆ. ಮಳೆ ಬರಿಸುತ್ತದೆ. ಉತ್ತಮ ಬೆಳೆ ಬೆಳೆಯಲು ಸಹಕಾರಿಯೂ ಆಗಿದೆ. ಹೀಗಿದ್ದೂ ನಾಗರೀಕ ಜಗತ್ತಿನ ಮಾನವ ಅರಣ್ಯ ನಾಶ ಮಾಡುತ್ತಿದ್ದಾನೆ. ಇದನ್ನು ಸಂರಕ್ಷಿಸುವುದು ಹೇಗೆ? ಎಂಬ ಪ್ರಶ್ನೆಗೆ ಆದಿವಾಸಿಗಳು ಉತ್ತರವಾಗಿ ಕಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಆದಿವಾಸಿಗಳು ಅರಣ್ಯ ಸಂರಕ್ಷಣೆಯಲ್ಲಿ ತೊಡಗುವಂತೆ ಮಾಡುವ ಉದ್ದೇಶ ಸರ್ಕಾರದ್ದು. ಸ್ವಾತಂತ್ರ್ಯ ಪೂರ್ವದಿಂದಲೂ ಅರಣ್ಯ ಸಂಪತ್ತನ್ನು ಸಂರಕ್ಷಿಸಲು ಸಾಕಷ್ಟು ಕಾಯಿದೆಗಳನ್ನು ರಚಿಸಲಾಗಿದೆ. ಆದರೆ ಇವು ಅರಣ್ಯವನ್ನೇ ನಂಬಿಕೊಂಡಿರುವ ಆದಿವಾಸಿ ಸಮುದಾಯಗಳಿಗೆ ಮಾರಕವಾದವು. ಆದ್ದರಿಂದ ಸಮುದಾಯದ ರಕ್ಷಣೆ ಮತ್ತು ಅರಣ್ಯ ಸಂರಕ್ಷಣೆಗಾಗಿ ಅರಣ್ಯ ಹಕ್ಕುಗಳ ಕಾಯಿದೆಯನ್ನು ಜಾರಿಗೆ ತರಲಾಗಿದೆ. ಇಂತಹ ಇತಿಹಾಸ ಉಳ್ಳ ಕಾಯಿದೆಯ ರಚನೆಯ ಹಿನ್ನೆಲೆ, ಭಾರತದಲ್ಲಿ ಅರಣ್ಯ ಕಾಯಿದೆಗಳ ಇತಿಹಾಸ, ಅರಣ್ಯ ಹಕ್ಕುಗಳ ಕಾಯಿದೆಯ ಮಸೂದೆ, ಇದರ ಮೇಲಿನ ಸಾರ್ವಜನಿಕ ಚರ್ಚೆ, ಕರ್ನಾಟಕದಲ್ಲಿ ಕಾಯಿದೆ ಅನುಷ್ಠಾನದ ಸ್ಥಿತಿ ಮತ್ತು ಅಧ್ಯಯನ ಕ್ಷೇತ್ರದಲ್ಲಿ ಅನುಷ್ಠಾನದ ಪ್ರಗತಿ ಕುರಿತು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ೩.೧. ಭಾರತದಲ್ಲಿ ಅರಣ್ಯ ಆಡಳಿತ ಹಿನ್ನೆಲೆ

ಬಹು ಹಿಂದೆ ನಾಗರೀಕ ಜಗತ್ತಿನ ಸಂಪರ್ಕವೇ ಇಲ್ಲದೆ ಅಡವಿಯಲ್ಲಿ ಹುಟ್ಟಿ ಬೆಳೆದು ಕಣ್ಮರೆಯಾಗುವ ಆದಿವಾಸಿ ಸಮುದಾಯಗಳು ಕೂಡ 'ಮಾನವ ಕುಲ' ಎಂದು ಪರಿಗಣಿಸಿರಲಿಲ್ಲವೆಂದೆನಿಸುತ್ತದೆ. ಇಂತಹ ಸಂದರ್ಭದಲ್ಲಿ ಬ್ರಿಟಿಷರ ಆಳ್ವಿಕೆ ಪ್ರಾರಂಭವಾಯಿತು. ಇಲ್ಲಿನ ಅರಣ್ಯ ಸಂಪತ್ತನ್ನು ಕಂಡು ಹಿಗ್ಗಿದ ಈಸ್ಟ್ ಇಂಡಿಯಾ ಕಂಪನಿ ಅಧಿಕಾರಿಗಳು ಅದನ್ನು ಸ್ವಂತ ಮಾಡಿಕೊಳ್ಳಲು ಅಡಿಯಿಟ್ಟರು. ಇದಕ್ಕೆ ಕಂಟಕರಾದ ಆದಿವಾಸಿ ಸಮುದಾಯಗಳನ್ನು ಹತ್ತಿಕ್ಕಲು ಸೈನ್ಯದ ಸಹಾಯ ಬಳಸಿದರು. ಗೆರಿಲ್ಲಾ ಯುದ್ಧ ಪ್ರವೀಣರಾದ ಆದಿವಾಸಿಗಳಿಗೆ ಸೋತು ಸುಣ್ಣವಾದರು ಮತ್ತು ಕೋಪೋದ್ರಿಕ್ತರಾದರು. ಇದು ತಮಗಾದ ಅವಮಾನ ಎಂದು ಬಗೆದರು. ಈ ಹಿನ್ನೆಲೆಯಲ್ಲಿ ಆದಿವಾಸಿಗಳನ್ನು ತಮ್ಮ ಅಧೀನಕ್ಕೆ ಒಳಪಡಿಸಲು ಇನ್ನಿಲ್ಲದ ಕಾನೂನಿನ

ನಿಬಂಧನೆಗಳನ್ನು ತಂದರು. ಆ ಮುಖಾಂತರ ಆದಿವಾಸಿಗಳ ಬದುಕು ದುಸ್ತರವಾಗುವಂತೆ ನೋಡಿಕೊಂಡರು. ಇದಕ್ಕೆ ಭಾರತದ ಮುಂದುವರಿದ ಸಮುದಾಯದ ಸಹಾಯ ಪಡೆಯುವಲ್ಲಿ ಯಶಸ್ವಿಯಾದರು. ಕೆಲವು ಕಡೆ ನೇರವಾಗಿ ಅರಣ್ಯದ ಮೇಲೆ ಹಿಡಿತ ಸಾಧಿಸಿದರು. ಇನ್ನೂ ಕೆಲವು ಕಡೆ ಪರೋಕ್ಷವಾಗಿ ಅಂದರೆ ಭಾರತೀಯರನ್ನು ಎಸ್ಟೇಟು ಮಾಲೀಕರನ್ನಾಗಿಸಿ ಅರಣ್ಯದ ಮೇಲೆ ಹಿಡಿತ ಹೊಂದಿದರು. ಇದರಿಂದಾಗಿ ಆದಿವಾಸಿಗಳ ಆರ್ಥಿಕ ಬದುಕು ಶೋಚನೀಯ ಸ್ಥಿತಿ ತಲುಪಿತು.

ಹೀಗೆ ತಮ್ಮದೇ ನೆಲದಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಡುತ್ತಿರುವ ಸಂದರ್ಭದಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದಿತು. ನಂತರ ಬುಡಕಟ್ಟು ಜನರ ಅಭಿವೃದ್ಧಿಗಾಗಿ ಹಲವಾರು ಕಾರ್ಯಕ್ರಮಗಳು ರೂಪಿತವಾದವು. ಭಾರತದ ಅಂದಿನ ಪ್ರಧಾನ ಮಂತ್ರಿಗಳಾದ ಜವಹಾರಲಾಲ್ ನೆಹರೂ ಅರಣ್ಯ ಮತ್ತು ಆದಿವಾಸಿಗಳ ಪಾರಂಪರಿಕತೆ ಕುರಿತು ವೈಜ್ಞಾನಿಕ ವರದಿ ಸಿದ್ಧಪಡಿಸಲು ದೇಬರ್ ಆಯೋಗವನ್ನು ರಚಿಸಿದರು. ಇದರ ನಂತರ ಅನೇಕ ಸಮಿತಿ ರಚಿಸಲ್ಪಟ್ಟವು ಮತ್ತು ಸಮ್ಮೇಳನಗಳು ನಡೆದವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಹರಿಸಿಂಗ್ ಸಮಿತಿ, ರಾಷ್ಟ್ರೀಯ ಕೃಷಿ ಆಯೋಗ, ಅರಣ್ಯ ಮತ್ತು ಆದಿವಾಸಿ ಅಭಿವೃದ್ಧಿ ಖಾತೆಯ ರಾಜ್ಯ ಮಂತ್ರಿಗಳ ಸಮ್ಮೇಳನ, ರಾಯ್ ಬರ್ಮನ್ ಆಯೋಗ, ಭೂರಿಯಾ ಆಯೋಗ. ಹೀಗೆ ಹಲವು ಆಯೋಗಗಳು ರಚಿಸಲ್ಪಟ್ಟು ಅರಣ್ಯವಾಸಿಗಳ ಅಭಿವೃದ್ಧಿಗಾಗಿ ಹಲವಾರು ಶಿಫಾರಸ್ಸುಗಳನ್ನು ಮಾಡಲಾಯಿತು. ಈ ಆಯೋಗಗಳು ನೀಡಿದ ಶಿಫಾರಸ್ಸುಗಳಲ್ಲಿ ಯಾವುವು ಕೂಡ ವೈಜ್ಞಾನಿಕವಾಗಿ ಅನುಷ್ಠಾನಗೊಳ್ಳಲಿಲ್ಲ. ಅವುಗಳ ಸದುಪಯೋಗ ತಲುಪಬೇಕಾದವರಿಗೆ ತಲುಪಲಿಲ್ಲ. ಈ ನಡುವೆ ಕೇಂದ್ರ ಸರ್ಕಾರ ಅರಣ್ಯ ಸಂರಕ್ಷಣಾ ಕಾಯಿದೆ, ಮರಗಳ ಸಂರಕ್ಷಣಾ ಕಾಯಿದೆ, ರಾಷ್ಟ್ರೀಯ ಉದ್ಯಾನವನ, ಹುಲಿ ಯೋಜನೆ ಹೀಗೆ ಅರಣ್ಯಕ್ಕೆ ಸಂಬಂಧಿಸಿದಂತೆ ಹಲವು ನಿಯಮಗಳನ್ನು ರೂಪಿಸಿತು. ಇವು ಆದಿವಾಸಿಗಳ ಬದುಕನ್ನು ದುಸ್ತರ ಮಾಡಿದವು. ಹಾಗಾಗಿ ಕೇಂದ್ರ ಸರ್ಕಾರ ಬುಡಕಟ್ಟು ವ್ಯವಹಾರಗಳ ಸಚಿವಾಲಯದ ಮುಖಾಂತರ ಆದಿವಾಸಿಗಳ ಸಮಗ್ರ ಅಭಿವೃದ್ಧಿಗಾಗಿ ೨೦೦೬ರಲ್ಲಿ ಮೊಟ್ಟಮೊದಲ ಬಾರಿಗೆ ರಾಷ್ಟ್ರೀಯ ಆದಿವಾಸಿ ನೀತಿಯನ್ನು ಜಾರಿಗೆ ತಂದಿತು. ಇದರ ಮುಖ್ಯ ಉದ್ದೇಶ ಪರಿಶಿಷ್ಟ ಪಂಗಡಗಳನ್ನು ಸಂರಕ್ಷಿಸುವುದು; ಅವರ ವಿಶಿಷ್ಟ ಸಂಸ್ಕೃತಿಗೆ ದಕ್ಕೆ ಬಾರದಂತೆ ಅವರ ಸರ್ವಾಂಗೀಣ ಅಭಿವೃದ್ಧಿಗಾಗಿ ಶ್ರಮಿಸುವುದು; ಅದಕ್ಕಾಗಿ ವಿವಿಧ ಮಜಲುಗಳ ಮೂಲಕ ಆದಿವಾಸಿಗಳನ್ನು ಸಮಾಜದ ಮುಖ್ಯವಾಹಿನಿಗೆ ತರುವುದು ಎಂದು ತೀರ್ಮಾನಿಸಿತು. ಈ ಹಿನ್ನೆಲೆಯಲ್ಲಿ ಪಂಚಾಯತ್ ಎಕ್ಸ್‌ಟೆನ್‌ಷನ್ ಶೆಡ್ಯೂಲ್ಡ್ ಏರಿಯಾ ಕಾಯಿದೆ ೧೯೯೬ (ಪಿ.ಇ.ಎಸ್.ಎ) ಮತ್ತು ಪ್ರಸ್ತುತ ೨೦೦೬ ರ ಅರಣ್ಯ ಹಕ್ಕುಗಳ ಕಾಯಿದೆ ಆದಿವಾಸಿಗಳಿಗೆ ಹೆಚ್ಚು ಅಧಿಕಾರ ಕೊಡುವ ನಿಟ್ಟಿನಲ್ಲಿ ಪ್ರಯತ್ನಿಸುತ್ತಿವೆ.

### ೩.೨. ಭಾರತದಲ್ಲಿ ಅರಣ್ಯಕ್ಕೆ ಸಂಬಂಧಿಸಿದ ಕಾಯಿದೆಗಳ ಇತಿಹಾಸ

ಭಾರತದಲ್ಲಿ ಆದಿವಾಸಿ ಸಮುದಾಯಗಳ ಸ್ಥಿತಿಗತಿ ಅರಿಯಬೇಕಾದರೆ ಅರಣ್ಯಕ್ಕೆ ಸಂಬಂಧಿಸಿದ ಕಾಯಿದೆಗಳ ಹಿನ್ನೆಲೆ ಬಗೆಗೆ ತಿಳಿದುಕೊಳ್ಳಬೇಕು. ಇದನ್ನು ಮೂರು ಭಾಗಗಳಲ್ಲಿ ವಿಂಗಡಿಸಲಾಗಿದೆ.

೧. ಬ್ರಿಟಿಷ್ ಪೂರ್ವ ಕಾಲದಲ್ಲಿನ ಅರಣ್ಯ ಆಡಳಿತ

೨. ಬ್ರಿಟಿಷ್ ಕಾಲದಲ್ಲಿನ ಅರಣ್ಯ ಆಡಳಿತ

೩. ಸ್ವತಂತ್ರ ಭಾರತದಲ್ಲಿ ಅರಣ್ಯ ಆಡಳಿತ ೧೯೪೭-೨೦೧೧

### ೩.೨.೧. ಬ್ರಿಟಿಷ್ ಪೂರ್ವ ಕಾಲದಲ್ಲಿನ ಅರಣ್ಯ ಆಡಳಿತ

ಬ್ರಿಟಿಷ್ ಆಡಳಿತ ಪೂರ್ವದಲ್ಲಿ ಅರಣ್ಯಗಳು ಸ್ಥಳೀಯ ಸಮುದಾಯಗಳಿಂದ ನಿರ್ವಹಿಸಲ್ಪಡುತ್ತಿದ್ದವು. ಅರಣ್ಯವಾಸಿಗಳು ಮತ್ತು ಅರಣ್ಯ ಅವಲಂಭಿತರಿಂದ ಅವರ ಜೀವನಾವಶ್ಯಕ ತತ್ವದ ಆಧಾರದ ಮೇಲೆ ಅರಣ್ಯ ಆಡಳಿತ ನೆಡೆಯುತ್ತಿತ್ತು. ಅಂದರೆ ಅರಣ್ಯ ಎಲ್ಲರಿಗೂ ಮುಕ್ತವಾಗಿತ್ತು ಎಂದರ್ಥವಲ್ಲ. ಅಲ್ಲಿ ಕೆಲವೊಂದು ಜಾತಿ ಮತ್ತು ಪಂಗಡಗಳಲ್ಲಿ ನಿರ್ಧಿಷ್ಟ ಅರಣ್ಯ ಉಪ ಉತ್ಪನ್ನಗಳನ್ನು ಸಂಗ್ರಹಿಸುವ ಮತ್ತು ಮಾರಾಟ ಮಾಡುವ ಸಂಸ್ಕೃತಿ ಮತ್ತು ಸಂಪ್ರದಾಯ ಇದ್ದುದನ್ನು ನಾವು ಕಾಣಬಹುದಾಗಿದೆ. ಆದರೆ ಬ್ರಿಟಿಷ್ ಆಡಳಿತ ಭಾರತದಲ್ಲಿ ಕಾಲಿಟ್ಟ ನಂತರ ಅರಣ್ಯದ ಮೇಲೆ ಹಲವು ಕಾಯಿದೆಗಳು ರಚಿಸಲ್ಪಟ್ಟವು.

### ೩.೨.೨. ಬ್ರಿಟಿಷ್ ಕಾಲದಲ್ಲಿನ ಅರಣ್ಯ ಆಡಳಿತ

ಆದಿವಾಸಿಗಳು ಗೆರಿಲ್ಲಾ ಯುದ್ಧ ಪರಿಣಿತರಾಗಿದ್ದರು. ಇವರನ್ನು ಗೆಲ್ಲುವುದು ಅಸಾಧ್ಯ ಎಂಬುದು ಬ್ರಿಟಿಷರಿಗೆ ಮನದಟ್ಟಾಯಿತು. ಹಾಗಾಗಿ ಅರಣ್ಯದ ಮೇಲೆ ಹಿಡಿತ ಸಾಧಿಸಲು ಹಲವು ನಿಯಮಗಳು ಮತ್ತು ಕಾಯಿದೆಗಳನ್ನು ಜಾರಿಗೆ ತಂದರು.

### ೩.೨.೨.೧. ೧೮೫೫ ರ ಅರಣ್ಯ ಸನ್ನದು (ಫಾರೆಸ್ಟ್ ಚಾರ್ಟರ್)

ಕ್ರಿ. ಶ. ೧೮೫೫ ರಲ್ಲಿ ಮೊಟ್ಟ ಮೊದಲಿಗೆ ಭಾರತದಲ್ಲಿ ಅರಣ್ಯ ನಿರ್ವಹಣೆ ಮತ್ತು ಆಡಳಿತ ಮಾಡುವ ಅವಶ್ಯಕತೆ, ಅತ್ಯಾಸೆ ಮತ್ತು ಲೋಭಿತನವನ್ನು ಬ್ರಿಟಿಷ್ ಸರ್ಕಾರ ತೋರಿಸಿತು. ಈ ನಿಟ್ಟಿನಲ್ಲಿ ೧೮೫೫ ರ ಅರಣ್ಯ ಸನ್ನದು ತರಲಾಯಿತು. ಇದು ತೇಗ ರಾಜ್ಯದ ಆಸ್ತಿ ಎಂದು ಸಾರಿತು. ಮತ್ತು ಇದರ ಮಾರಾಟವನ್ನು ಕಠಿಣಗೊಳಿಸಿತು.

### ೩.೨.೨.೨. ಅರಣ್ಯ ಇಲಾಖೆ ಸ್ಥಾಪನೆ

ಕ್ರಿ.ಶ. ೧೮೫೬ ರಲ್ಲಿ 'ಡ್ರೈಟ್ರಿಚ್ ಬ್ರಾಂಡೀಸ್' ಎಂಬ ಜರ್ಮನಿಯ ಸಸ್ಯಶಾಸ್ತ್ರಜ್ಞನನ್ನು ಭಾರತದ ಮೊಟ್ಟ ಮೊದಲ 'ಇನ್‌ಸ್ಪೆಕ್ಟರ್ ಜನರಲ್ ಆಫ್ ಫಾರೆಸ್ಟ್' ಎಂದು ನೇಮಕ ಮಾಡಲಾಯಿತು. ಅರಣ್ಯ ಇಲಾಖೆ ಮತ್ತು ಅರಣ್ಯ ಸಂರಕ್ಷಣೆ ಕಾಯಿದೆ ಇವನ ಮಾರ್ಗದರ್ಶನದಲ್ಲಿ ರಚನೆಯಾಗಿ ಕಾರ್ಯಾರಂಭ ಮಾಡಿದವು. ಈತ ಮರಗಳನ್ನು ಸಂಶೋದನೆ ಮಾಡಿ ಅವುಗಳನ್ನು ವಿಂಗಡಿಸಿದನು. ಇದು ಬ್ರಿಟಿಷ್ ಸಾಮ್ರಾಜ್ಯಶಾಹಿಗೆ ಅರಣ್ಯದ ಮೇಲೆ ಅಧಿಕಾರ ಸ್ಥಾಪಿಸಿ ಹಿಡಿತ ಹೊಂದಲು ಮುನ್ನುಡಿ ಬರೆಯಿತು.

### ೩.೨.೨.೩. ಭಾರತೀಯ ಅರಣ್ಯ ಕಾಯಿದೆ –೧೮೬೫

ಭಾರತದ ಮೊದಲ ಅರಣ್ಯ ಕಾಯಿದೆಯನ್ನು ಕ್ರಿ.ಶ. ೧೮೬೫ ರಲ್ಲಿ ರಚಿಸಲಾಯಿತು. ಇದು ೧೮೫೫ ರ ಅರಣ್ಯ ಸನ್ನದನ್ನು ಅನುಸರಿಸಿತು. ಇದು ಮರಗಳಿಂದ ಆವೃತವಾದ ಯಾವುದೇ ಜಮೀನು ಸರ್ಕಾರದ್ದು ಎಂದು ಹೇಳಿತು. ಜೊತೆಗೆ ತಮ್ಮ ಸ್ವಂತ ಜಮೀನಿನಲ್ಲಿ ಮರಗಳನ್ನು ಸಾಕಿರುವವರು ಕಾಯಿದೆ ಮೂಲಕ ತಮ್ಮ ಹಕ್ಕು ಬಾಧ್ಯತೆಯನ್ನು ಸ್ಥಾಪಿಸಬಹುದೆಂದು ಹೇಳಿತು. (ಇದು ಎಷ್ಟು ಜನರ ಗಮನಕ್ಕೆ ಬಂದು ತಮ್ಮ ಹಕ್ಕು ಸ್ಥಾಪಿಸಿಕೊಂಡರು ಎಂಬುದು ಬೇರೆ ಮಾತು.)

### ೩.೨.೨.೪. ಭಾರತೀಯ ಅರಣ್ಯ ಕಾಯಿದೆ –೧೮೭೮

ಕ್ರಿ.ಶ. ೧೮೭೮ ರ ಅರಣ್ಯ ಕಾಯಿದೆಯು ೧೮೬೫ ರ ಕಾಯಿದೆಯನ್ನು ಸಂಪೂರ್ಣ ರದ್ದುಗೊಳಿಸಿತು. ಅರಣ್ಯ ಸಂಪತ್ತಿನ ಮೇಲೆ ರಾಷ್ಟ್ರದ ಸಂಪೂರ್ಣ ಅಧಿಕಾರ ಇದೆ ಎಂದು ಹೇಳಿ ಅರಣ್ಯವನ್ನು ವಶಪಡಿಸಿಕೊಂಡಿತು. ರಾಜ್ಯದ ಅಧಿಕಾರವನ್ನು ಇದು ಸ್ಪಷ್ಟಪಡಿಸಿತು. ಮತ್ತು ಏಕ ಆಡಳಿತ ವ್ಯವಸ್ಥೆ ತಂದಿತು. ಇದರಿಂದಾಗಿ ಶತಶತಮಾನಗಳಿಂದ ಇದ್ದಂತಹ ಆಡಳಿತ ವ್ಯವಸ್ಥೆ ಅಂತ್ಯಗೊಂಡಿತು. ಕೊನೆಗೆ ಅರಣ್ಯವಾಸಿ ಸಮುದಾಯ ಮತ್ತು ಅರಣ್ಯ ಅವಲಂಭಿತರನ್ನು ಹೊರತಳ್ಳಲ್ಪಡುವ ಕೈಂಕರ್ಯಕ್ಕೆ ನಾಂದಿ ಹಾಡಲಾಯಿತು. ೧೮೭೮ ರ ಕಾಯಿದೆ ಸಾರ್ವಜನಿಕ ಆಸ್ತಿ ಮೂಲ ಸ್ವರೂಪವನ್ನು ಬದಲಾಯಿಸಿ ರಾಜ್ಯದ ಆಸ್ತಿಯನ್ನಾಗಿಸಿತು. ಇದರಿಂದಾಗಿ ಜನರು ಅರಣ್ಯ ಭೂಮಿ ಮತ್ತು ಅರಣ್ಯ ಉತ್ಪನ್ನಗಳ ಮೇಲೆ ಹಕ್ಕನ್ನು ಪಡೆಯಲು ವಿಶೇಷ ಹಕ್ಕು ಪಡೆಯಬೇಕಾಯಿತು. ಹಾಗೆಯೇ ಅರಣ್ಯವು ಮೂರು ಭಾಗಗಳಾಗಿ ವಿಂಗಡಿಸಲ್ಪಟ್ಟಿತು. ೧. ಕಾಯ್ದಿಟ್ಟ ಅರಣ್ಯ ೨. ರಕ್ಷಿತ ಅರಣ್ಯ ೩. ಗ್ರಾಮ ಅರಣ್ಯ ಎಂದು.

ವಾಣಿಜ್ಯ ಮೌಲ್ಯಯತವಾದ ಕಾಯ್ದಿಟ್ಟ ಅರಣ್ಯಗಳನ್ನು ಸರ್ಕಾರದ ಸ್ವಂತ ಉಪಯೋಗಕ್ಕೆ ಬಳಸಿಕೊಳ್ಳಲು ಮೀಸಲಿಟ್ಟಿತು. ಕಟಾವು ಸಾಗಾಣಿಕೆ ಮುಂತಾದ

ಹಕ್ಕುಗಳನ್ನು ತನ್ನಲ್ಲಿಟ್ಟುಕೊಂಡಿತು. ರಕ್ಷಿತ ಅರಣ್ಯಗಳು ರಾಜ್ಯದ ನೇರ ನಿಯಂತ್ರಣಕ್ಕೊಳಪಟ್ಟವು. ಆದರೆ ಕೆಲವು ವೇಳೆ ಬೆಲೆಬಾಳುವ ಮರಗಳನ್ನು ಸಂಗ್ರಹಿಸಲು ವಿಶೇಷ ಹಕ್ಕು ಪಡೆಯಲಾಗುತ್ತಿತ್ತು. ಗ್ರಾಮಗಳಲ್ಲಿ ವಾಸಿಸುವ ಜನರ ಅವಶ್ಯಕತೆಗಳನ್ನು ಪೂರೈಸುವ ದೃಷ್ಟಿಯಿಂದ ಸಾಮಾಜಿಕ ಅರಣ್ಯ ಎಂಬುದನ್ನು ಸೃಷ್ಟಿಸಲಾಯಿತು. ಅದನ್ನು ಕಾಯ್ದಿಟ್ಟ ಅರಣ್ಯಗಳು ಮತ್ತು ರಕ್ಷಿತ ಅರಣ್ಯಗಳಿಂದ ದೂರ ಇಡಲಾಯಿತು. ಇದರಿಂದಾಗಿ ಸಾಂಪ್ರದಾಯಿಕ ಅರಣ್ಯ ಕಿರು ಉತ್ಪನ್ನಗಳನ್ನು ದೊರಕಿಸಿಕೊಳ್ಳುವಲ್ಲಿ ಆದಿವಾಸಿಗಳಿಗೆ ಅನ್ಯಮಾರ್ಗಗಳು ಮುಚ್ಚಲ್ಪಟ್ಟವು. ಪರಿಣಾಮವಾಗಿ ಅರಣ್ಯ ಅವಲಂಭಿತರು ಮತ್ತು ಅರಣ್ಯವಾಸಿಗಳು ಅತಂತ್ರರಾದರು.

### ೩.೨.೨.೫. ಬ್ರಿಟಿಷ್ ಭಾರತದ ಪ್ರಥಮ ಅರಣ್ಯ ನೀತಿ

ಭಾರತದಲ್ಲಿ ಬ್ರಿಟಿಷ್ ಆಡಳಿತ ತನ್ನ ಮೊದಲ ಅರಣ್ಯ ನೀತಿಯ ನಡವಳಿಗಳನ್ನು ಅಕ್ಟೋಬರ್ ೧೯, ೧೮೯೪ ರಲ್ಲಿ ಪ್ರಕಟಿಸಿತು. ಈ ನೀತಿ ಅರಣ್ಯವು ರಾಜ್ಯದ ಅಧೀನಕ್ಕೆ ಒಳಪಟ್ಟಿದ್ದು ಅದರ ಸಂಪೂರ್ಣ ಉತ್ಪನ್ನವು ರಾಜ್ಯದ ಕಂದಾಯ ಎಂದು ಸ್ಪಷ್ಟಪಡಿಸಿತು. ಅರಣ್ಯ ನಿರ್ವಹಣೆಯ ತತ್ವಗಳು, ವಿಧಾನಗಳು ಸಾಂಸ್ಥಿಕ ಚೌಕಟ್ಟುಗಳನ್ನು ಅರಣ್ಯ ಇಲಾಖೆ ಬ್ರಿಟಿಷ್ ಇಂಡಿಯಾ ಸರ್ಕಾರದ ಕಂದಾಯ ಹೆಚ್ಚಿಸುವ ಒಂದೇ ಒಂದು ಗುರಿಯೊಂದಿಗೆ ತನ್ನ ಉದ್ದೇಶಗಳನ್ನು ಈ ನೀತಿಯಲ್ಲಿ ಅಳವಡಿಸಿತ್ತು. ಅರಣ್ಯವಾಸಿಗಳು, ಅವರ ಜೀವನಾಧಾರ, ಅರಣ್ಯ ಅಭಿವೃದ್ಧಿ ಮತ್ತು ಸಂರಕ್ಷಣೆ ಮತ್ತು ವನ್ಯಪ್ರಾಣಿಗಳು ಎಲ್ಲಾ ಅಂಶಗಳು ಆಡಳಿತದ ಅಧೀನದಲ್ಲಿ ಬರತಕ್ಕದ್ದು ಎಂಬುದಾಗಿ ಸ್ಪಷ್ಟಪಡಿಸಿತು.

### ೩.೨.೨.೬. ಭಾರತೀಯ ಅರಣ್ಯ ಕಾಯಿದೆ –೧೯೨೭

ಇದು ಕ್ರಿ.ಶ. ೧೮೭೮ ರ ಕಾಯಿದೆ ಸ್ಥಾನದಲ್ಲಿ ಬಂದಿತು. ಇದು ಈ ಮೊದಲಿನ ಎಲ್ಲಾ ಅವಕಾಶಗಳನ್ನು ನೆಲದಲ್ಲಿ ಹೂಳಿತು. ತೇಗದ ಮೇಲಿನ ಸುಂಕವನ್ನು ಅಧಿಕಗೊಳಿಸಿತು. ಇನ್ನೂ ತನ್ನ ಪ್ರಭಾವವನ್ನು ಉಳಿಸಿಕೊಂಡಿರುವ ಈ ಕಾಯಿದೆಯ ಪೂರ್ವ ಪೀಠಿಕೆಯಲ್ಲಿ ಅರಣ್ಯ ಉತ್ಪನ್ನ ಮತ್ತು ತೇಗದ ಮೇಲಿನ ಸುಂಕವನ್ನು ಬಿಡಲಾಗುದು ಎಂದು ಹೇಳುತ್ತದೆ.

ಕ್ರಿ. ಶ. ೧೯೨೭ ರಲ್ಲಿ ಬ್ರಿಟಿಷರು ಭಾರತೀಯ ಅರಣ್ಯ ಕಾಯಿದೆಯನ್ನು ಜಾರಿಗೆ ತಂದಾಗ ಅಧಿಕೃತ ದಾಖಲೆ ಇಲ್ಲದವರು ಅರಣ್ಯ ಪ್ರದೇಶದ ಭೂಮಿ ಹೊಂದಲು ಅವಕಾಶವಿಲ್ಲದಂತೆ ಮಾಡಿದ್ದರು. ಆದಿವಾಸಿಗಳು ಖಾಸಗೀ ಭೂಮಿ ಪರಿಕಲ್ಪನೆ ಉಳ್ಳವರಾಗಿರಲಿಲ್ಲ. ಹೀಗಾಗಿ ಅವರ ಬಳಿ ಯಾವುದೇ ಭೂ ಒಡೆತನದ ದಾಖಲೆ ಇರಲಿಲ್ಲ. ಆದರೆ ಆದಿವಾಸಿಗಳಿಗೆ ಅರಣ್ಯದ ಅರಿವು ಸಂಪೂರ್ಣ ಇದ್ದು ತಮ್ಮದೇ ಆದ ಮೌಖಿಕ ಸಂಸ್ಕೃತಿಯನ್ನು ಹೊಂದಿವೆ ಎಂಬುದನ್ನು ಪರಿಗಣಿಸಬೇಕಾಗಿತ್ತು. ಆದರೆ

ಯಾವುದೇ ಕಾನೂನಾತ್ಮಕ ಆಸ್ತಿಯ ಒಡೆತನ ಅವರ ಬಳಿ ಇಲ್ಲದಿರುವುದನ್ನು ಆಧಾರವಾಗಿಟ್ಟುಕೊಂಡು ಬ್ರಿಟಿಷ್ ಸರ್ಕಾರ ಲಕ್ಷಾಂತರ ಆದಿವಾಸಿಗಳನ್ನು ಒಕ್ಕಲೆಬ್ಬಿಸಿತು. ಇವರು ಅತಂತ್ರ ಸ್ಥಿತಿಗೆ ತಳ್ಳಲ್ಪಟ್ಟರು. ಇದು ಅನೇಕ ಆದಿವಾಸಿಗಳು ಅಪರಾಧಿಗಳಾಗುವಂತೆ ಮಾಡಿತು. ಹಲವರು ಅರಣ್ಯ ಇಲಾಖೆಯ ಜೀತದಾಳುಗಳಾದರು.

### ೩.೨.೩. ಸ್ವತಂತ್ರ ಭಾರತದಲ್ಲಿ ಅರಣ್ಯ ಆಡಳಿತ ೧೯೪೭-೨೦೧೧

ಸ್ವಾತಂತ್ರ್ಯಾನಂತರ ಅರಣ್ಯ ಸಂರಕ್ಷಣೆ ಜವಾಬ್ದಾರಿ ಅರಣ್ಯ ಇಲಾಖೆಗೆ ಸಂಪೂರ್ಣ ಹಸ್ತಾಂತರವಾಯಿತು. ಅರಣ್ಯ ಮತ್ತು ಅರಣ್ಯ ಉಪ ಉತ್ಪನ್ನಗಳು ಅರಣ್ಯ ಇಲಾಖೆಯ ಹಕ್ಕಾಯಿತು. ಬ್ರಿಟಿಷ್ ಧೋರಣೆಯುಳ್ಳ ಅರಣ್ಯ ಇಲಾಖೆ ಕಠಿಣ ಅರಣ್ಯ ನೀತಿಯನ್ನು ಪುನರ್ರಚಿಸಿತು. ಅರಣ್ಯವಾಸಿಗಳಿಗೆ ನೀವು ವಾಸಿಸುತ್ತಿರುವ ಮತ್ತು ಉಳುಮೆ ಮಾಡುತ್ತಿರುವ ಪ್ರದೇಶದ ಹಕ್ಕುಪತ್ರ ತೋರಿಸಿ ಎಂದು ಇನ್ನಿಲ್ಲದಂತೆ ಕಾಡಿತು. ಇದು ಅವರ ಬದುಕನ್ನು ಕೊಂದಿತು. ಇದಕ್ಕೆ ಪೂರಕವಾಗಿ ಅರಣ್ಯ ಇಲಾಖೆಗೆ ವನ್ಯಮೃಗ ಸಂರಕ್ಷಣಾ ಕಾಯಿದೆ, ಮರಗಳ ಸಂರಕ್ಷಣಾ ಕಾಯಿದೆ, ಅಭಯಾರಣ್ಯ ಕಾಯಿದೆಗಳು, ರಾಷ್ಟ್ರೀಯ ಉದ್ಯಾನವನ ನಿಯಮಗಳು ಒತ್ತಾಸೆಯಾದವು.

ಗ್ರಾಮ ಸಮುದಾಯಗಳು ಸ್ವಾಭಾವಿಕವಾಗಿ ತಮ್ಮ ದೈನಂದಿನ ಮನೆ ಬಳಕೆ ಮತ್ತು ಕೃಷಿ ಅವಶ್ಯಕತೆಗಾಗಿ ತಮ್ಮ ಸುತ್ತಮುತ್ತಲಿನ ಅರಣ್ಯ ಮತ್ತು ಅರಣ್ಯ ಉಪ ಉತ್ಪನ್ನಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದವು. ಇದಕ್ಕೆ ಯಾವುದೇ ಪರವಾನಗಿ ಅವಶ್ಯಕತೆ ಇರಲಿಲ್ಲ. ಆಕಸ್ಮಿಕವಾಗಿ ಅರಣ್ಯದಂಚಿನಲ್ಲಿದ್ದ ಗ್ರಾಮಗಳು ರಾಷ್ಟ್ರೀಯ ಸಂಪತ್ತಿನ ಸಂಪೂರ್ಣ ಹಕ್ಕು ಪಡೆಯುವುದು ಯಾವ ನ್ಯಾಯ ಎಂಬ ಪ್ರಶ್ನೆ ಎದುರಾಗಿ ಅವರ ಮೇಲೆ ನಿರ್ಬಂಧ ಹೇರಲಾಯಿತು.

### ೩.೨.೩.೧. ರಾಷ್ಟ್ರೀಯ ಕೃಷಿ ಆಯೋಗ ೧೯೭೬

ಇದು ಕ್ರಿ.ಶ ೧೯೭೬ರಲ್ಲಿ ರಚನೆಗೊಂಡಿತು. ಕೈಗಾರಿಕರಣಕ್ಕೆ ಅನುಕೂಲವಾಗುವ ನಿಟ್ಟಿನಲ್ಲಿ ಅರಣ್ಯಗಳ ನಿರ್ವಹಣೆ ಮಹತ್ವ ಮತ್ತು ಉದ್ದೇಶಗಳಿಗೆ ಪ್ರೋತ್ಸಾಹ ನೀಡಿತು. ಆದಿವಾಸಿ ಮತ್ತು ಪಾರಂಪರಿಕ ಅರಣ್ಯವಾಸಿ ಸಮುದಾಯಗಳನ್ನು ಸಂಪೂರ್ಣ ನಿರ್ಲಕ್ಷಿಸಿ ಅರಣ್ಯಗಳನ್ನು ವಾಣಿಜ್ಯೀಕರಿಸಲು ನಿರ್ದೇಶಿಸಲಾಯಿತು. ಇದರಿಂದಾಗಿ ಕೆಲವು ತಪ್ಪು ಮಾಹಿತಿಗಳು ಅಂದರೆ ಅರಣ್ಯಗಳು ಮತ್ತು ಅರಣ್ಯ ಉತ್ಪನ್ನಗಳು ಗ್ರಾಮೀಣ ಜನತೆಗೆ ಮುಚ್ಚಲ್ಪಡುತ್ತವೆ ಎಂಬ ಭಾವ ಉಂಟಾಗಿದ್ದರಿಂದ ಈ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಿ ಪರಿಷ್ಕೃತ ರಾಷ್ಟ್ರೀಯ ಅರಣ್ಯ ನೀತಿ ರೂಪುಗೊಂಡಿತು.

## ೩.೨.೩.೨. ಅರಣ್ಯ ಸಂರಕ್ಷಣಾ ಕಾಯಿದೆ ೧೯೮೦

ಭಾರತ ಸರ್ಕಾರ ಅರಣ್ಯ ಸಂರಕ್ಷಣೆ ವಿಶೇಷ ಕಾಯಿದೆಯನ್ನು ಅಕ್ಟೋಬರ್ ೨೫ ೧೯೮೦ ರಲ್ಲಿ ರಚಿಸಿತು. ಇದರ ಮುಖ್ಯ ಉದ್ದೇಶ ಕೇಂದ್ರ ಸರ್ಕಾರದ ಅನುಮತಿ ಇಲ್ಲದೆ ರಾಜ್ಯ ಸರ್ಕಾರ ಯಾವುದೇ ರೀತಿಯಲ್ಲಿ ಅರಣ್ಯ ಭೂಮಿಯನ್ನು ಬಳಸಿಕೊಳ್ಳದಂತೆ ತಡೆಯುವುದಾಗಿತ್ತು. ಕ್ರಿ.ಶ ೧೯೮೮ ರ ತಿದ್ದುಪಡಿ ರಾಜ್ಯ ಸರ್ಕಾರಗಳು ಅರಣ್ಯದ ಯಾವುದೇ ಭೂಮಿಯನ್ನು ಯಾವುದೇ ವ್ಯಕ್ತಿಗೆ ಲೀಸ್ ನೀಡುವುದು, ಸ್ವಂತ ಹೊಂದುವುದಕ್ಕೆ ಅನುಮತಿ ನೀಡುವುದನ್ನು ಪ್ರತಿಬಂಧಿಸಿತು.

## ೩.೨.೩.೩. ಅರಣ್ಯ ಇಲಾಖೆಯ ಪ್ರತ್ಯೇಕತೆ

ಅರಣ್ಯ ಇಲಾಖೆಯು ಕೃಷಿ ಸಚಿವಾಲಯದಿಂದ ಪರಿಸರ ಮತ್ತು ಅರಣ್ಯ ಸಚಿವಾಲಯಕ್ಕೆ ೧೯೮೫ ರಲ್ಲಿ ವರ್ಗಾವಣೆ ಗೊಂಡಿತು. ಇದರ ಮುಖ್ಯ ಉದ್ದೇಶ ಕಂದಾಯ ಸಂಗ್ರಹಣೆಯೊಂದಿಗೆ ಪರಿಸರ ಸಂರಕ್ಷಣೆಗೆ ಹೆಚ್ಚು ಒತ್ತು ನೀಡುವುದು. ಇದರಿಂದಾಗಿ ಜನ ಮತ್ತು ಪರಿಸರವಾದಿಗಳ ಬೆಂಬಲ ಪಡೆಯುವುದು ಸಾಧ್ಯವಿತ್ತು.

ಅರಣ್ಯ ಆಡಳಿತ ಮತ್ತು ನಿರ್ವಹಣೆಯು ತನ್ನ ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ ಅದರ ಗುರಿ ಮತ್ತು ಉದ್ದೇಶಗಳ ಜೊತೆಗೆ ಪ್ರಾಮುಖ್ಯತೆಯಲ್ಲಿ ಬದಲಾಯಿಸಿಕೊಂಡಿತು. ಸ್ಥಳೀಯ ಅರಣ್ಯ ಅವಲಂಬಿತ ಸಮುದಾಯಗಳು ನ್ಯಾಯಸಮ್ಮತ ಹಕ್ಕುದಾರರು ಎಂದು ಹೇಳಿತು. ಮತ್ತು ಆ ಸಮುದಾಯಗಳನ್ನು ಅರಣ್ಯ ಪುನರ್ ಅಭಿವೃದ್ಧಿಯಲ್ಲಿ ಭಾಗಿದಾರರನ್ನಾಗಿಸಲು ಶಿಫಾರಸ್ಸು ಮಾಡಿತು.

೧೯೮೮ ರವರೆಗೆ ಅರಣ್ಯ ನೀತಿ ಬಗ್ಗೆ ವಿಪುಲ ಚರ್ಚೆಗಳಾದವು. ಆದರೆ ಆದಿವಾಸಿಗಳು ಮತ್ತು ಅರಣ್ಯ ಅವಲಂಬಿತ ಸಮುದಾಯಗಳಿಗೆ ಸಹಾಯವಾಗುವಂತಹ ಕಾಯಿದೆ ಭಾರತ ಸರ್ಕಾರದಿಂದ ರಚಿಸಲ್ಪಡಲಿಲ್ಲ. ವನ್ಯ ಜೀವಿ ಮತ್ತು ಪರಿಸರ ವ್ಯವಸ್ಥೆಯ ರಕ್ಷಣೆ, ಜೋಪಾನ ಮತ್ತು ಅಭಿವೃದ್ಧಿ ಹೆಚ್ಚಾಗಿ ಕಂಡು ಬಂದಿತು.

## ೩.೨.೩.೪. ರಾಷ್ಟ್ರೀಯ ಅರಣ್ಯ ನೀತಿ ೧೯೮೮

ಕ್ರಿ.ಶ. ೧೯೮೮ ರಲ್ಲಿ ಮೊದಲ ಬಾರಿಗೆ ರಾಷ್ಟ್ರೀಯ ಅರಣ್ಯ ನೀತಿ ಘೋಷಿಸಲಾಯಿತು. ಇದು ಅರಣ್ಯದಲ್ಲಿ ವಾಸಿಸುವ ಮತ್ತು ಅರಣ್ಯ ಅವಲಂಬಿತರ ಕಡೆ ಗಮನಹರಿಸಿತು. ಅವರ ಜೀವನಾಧರಕ್ಕೆ ಅರಣ್ಯ ಉತ್ಪನ್ನಗಳು ಪ್ರಥಮ ಆದ್ಯತೆ ಎಂದು ಸ್ಪಷ್ಟೋಚ್ಚಾರಣೆ ಮಾಡಿತು.

ನಡಾವಳಿಯಲ್ಲಿ ಪಾರಂಪರಿಕ ಅರಣ್ಯವಾಸಿ ಸಮುದಾಯಗಳ ಕಲ್ಯಾಣಕ್ಕೆ ಒತ್ತು ನೀಡುವುದು ದೇಶದ ಅರಣ್ಯ ನೀತಿಯ ಉದ್ದೇಶವಾಯಿತು. ಆದಿವಾಸಿಗಳು ಮತ್ತು ಇತರೆ ಅರಣ್ಯವಾಸಿಗಳಿಗೆ ಸಂಪೂರ್ಣ ವಿನಾಯಿತಿ ನೀಡಿ ಅವರ ಹಕ್ಕುಗಳನ್ನು ರಕ್ಷಿಸಲಾಯಿತು. ಉರುವಲು ಕಟ್ಟಿಗೆ, ಧನಗಳ ಮೇವು, ಕಿರು ಅರಣ್ಯ ಉತ್ಪನ್ನಗಳಿಗೆ ಅವಕಾಶ ದೊರೆಯಿತು. ಇದು ಸ್ಥಳೀಯ ಸಮುದಾಯಗಳು ಪರಿಸರ ನಿರ್ವಹಣೆ ಮತ್ತು ಆಡಳಿತದಲ್ಲಿ ಭಾಗಿಯಾಗುವಂತೆ ಪ್ರೋತ್ಸಾಹ ನೀಡಿತು. ೧೯೯೨ ರಲ್ಲಿ ೭೩ ನೇ ಸಂವಿಧಾನ ತಿದ್ದಪಡಿ ಇದನ್ನು ಮಾನ್ಯ ಮಾಡಿತು.

**೩.೨.೩.೫. ಜಂಟೀ ಅರಣ್ಯ ನೀತಿ**

ಸರ್ಕಾರ ಚಿಕ್ಕ ಆದರೆ ಐತಿಹಾಸಿಕ ದಿಟ್ಟ ನಿರ್ಧಾರವನ್ನು ತೆಗೆದು ಕೊಂಡು ಜಂಟೀ ಅರಣ್ಯ ನಿರ್ವಹಣೆಗೆ (ಜೆ.ಎಫ್.ಎಮ್) ಒಪ್ಪಿಗೆ ನೀಡಿತು. ಇದರಿಂದಾಗಿ ಅರಣ್ಯವಾಸಿಗಳು ಮತ್ತು ಅರಣ್ಯ ಅವಲಂಭಿತರು ಅರಣ್ಯ ನಿರ್ವಹಣೆ ಆಡಳಿತದಲ್ಲಿ ತಮ್ಮ ಪಾತ್ರ ನಿರ್ವಹಿಸುವಂತೆ ಮಾಡಿತು. ಇದು ಒಂದು ಕಾರ್ಯಕ್ರಮದ ರೀತಿಯಲ್ಲಿ ನಡೆಯಿತು. ಅಲ್ಲಿ ಜನರಿಗೆ ಯಾವುದೇ ರೀತಿಯ ಅಧಿಕಾರದ ಕಾಲಾವಧಿಯ ಬದ್ಧತೆ ದೊರೆಯಲಿಲ್ಲ. ಯಾವಾಗ ಅರಣ್ಯ ಭೂಮಿ ಅರಣ್ಯೇತರ ಚಟುವಟಿಕೆಗೆ ಬದಲಾಯಿತೊ ಆಗ ಅರಣ್ಯ ಅವಲಂಭಿತರು ಮತ್ತು ಅರಣ್ಯವಾಸಿಗಳು ಬಹಳ ನಿಸ್ಸಾರರಾದರು. ಅಲ್ಲದೆ ಅವರ ಹಕ್ಕುಗಳು ಕಾನೂನಿನ ನೆರವು ಇಲ್ಲದ ಅರಣ್ಯ ಇಲಾಖೆಯು ನೀಡಿರುವ ವಿಶೇಷ ಹಕ್ಕುಗಳು ಎಂದು ಪರಿಗಣಿಸಲ್ಪಟ್ಟವು.

**೩.೨.೩.೬. ಜೀವವೈವಿಧ್ಯ ಸಂರಕ್ಷಣಾ ಕಾಯಿದೆ ೨೦೦೨**

ಇದು ಜೀವವೈವಿಧ್ಯ ಸಂರಕ್ಷಣೆಯಲ್ಲಿ ಸ್ಥಳೀಯ ಜನರ ಪಾತ್ರ ಬಹು ಪ್ರಾಮುಖ್ಯತೆ ಪಡೆದಿದೆ ಎಂದು ಹೇಳಿತು. ಜೊತೆಗೆ ಪಂಚಾಯತ್ ಮಟ್ಟದಲ್ಲಿ ಜೀವವೈವಿಧ್ಯ ಸಂರಕ್ಷಣಾ ಸಮಿತಿಯನ್ನು ರಚಿಸಲಾಯಿತು. ಇದು ಸ್ಥಳೀಯ ಸಮುದಾಯಗಳೊಂದಿಗೆ ಒಪ್ಪಂದ ಮಾಡಿಕೊಳ್ಳಲಿಲ್ಲ.

ಇದರ ವಿಫಲತೆ ಹಿನ್ನೆಲೆಯಲ್ಲಿ ಮತ್ತು ಸ್ಥಳೀಯ ಸಮುದಾಯಗಳು ಜೀವವೈವಿಧ್ಯ ಸಂರಕ್ಷಣೆಯಲ್ಲಿ ಭಾಗಿಯಾಗುವುದನ್ನು ಮಾನ್ಯ ಮಾಡುವ ಉದ್ದೇಶ ಮತ್ತು ಅರಣ್ಯ ಸಂಪತ್ತನ್ನು ಪುನಸ್ಥಾಪಿಸುವ ಆಶಯದೊಂದಿಗೆ ಆದಿವಾಸಿಗಳಿಗೆ ಅರಣ್ಯದ ಮೇಲೆ ಹಕ್ಕುಗಳನ್ನು ನೀಡಬೇಕು ಎಂಬ ಕೂಗು ಕೇಳಿ ಬಂದ ಹಿನ್ನೆಲೆಯಲ್ಲಿ ಅರಣ್ಯ ಹಕ್ಕುಗಳ ಮಸೂದೆ ರಚಿಸಿ ಸಂಸತ್ತಿನಲ್ಲಿ ಮಂಡಿಸಲ್ಪಟ್ಟಿತು.

**೩. ೩. ಅರಣ್ಯ ಹಕ್ಕುಗಳ ಮಸೂದೆ ಹಿನ್ನೆಲೆ**

ಆದಿವಾಸಿ ಮತ್ತು ಇತರೆ ಪಾರಂಪರಿಕ ಅರಣ್ಯವಾಸಿಗಳ (ಅರಣ್ಯ ಹಕ್ಕುಗಳನ್ನು ಗುರುತಿಸುವ) ೨೦೦೬ ರ ಮಸೂದೆ ಸಂಸತ್ತಿನ ಚಳಿಗಾಲದ ಅಧಿವೇಶನದಲ್ಲಿ ಪಾಸಾಯಿತು. ಈ ಮಸೂದೆ ವನ್ಯಜೀವಿ ಸಂರಕ್ಷಣಾ ಹೋರಾಟಗಾರರು, ಅರಣ್ಯ ಸಂರಕ್ಷಣಾ ಹೋರಾಟಗಾರರು ಮತ್ತು ಆದಿವಾಸಿ ಹೋರಾಟಗಾರರಿಂದಲೂ ತೀವ್ರ ವಿರೋಧವನ್ನು ಎದುರಿಸಿತು. ಅಲ್ಲದೇ ಅರಣ್ಯ ಮತ್ತು ಪರಿಸರ ಇಲಾಖೆ ಮಂತ್ರಾಲಯ ಮತ್ತು ಪರಿಶಿಷ್ಟ ಪಂಗಡ ಮಂತ್ರಾಲಯ ಇವುಗಳ ನಡುವೆಯೇ ಭಿನ್ನಾಭಿಪ್ರಾಯ ಹೊಂದಲಾಗಿತ್ತು. ಮಸೂದೆಯಲ್ಲಿನ ಪರಿವಿಡಿಯನ್ನು ಹೊಂದಾಣಿಕೆ ಗೊಳಿಸಲು ಸಂಸದೀಯ ಜಂಟೀ ಸಮಿತಿಯನ್ನು ರಚಿಸಲಾಯಿತು.

**೩.೩.೧. ಸಂಸದೀಯ ಜಂಟೀ ಸಮಿತಿ ರಚನೆ**

ಈ ಸಮಿತಿಯು ಪ್ರಸ್ತಾಪಿಸಿದ ಮೂಲ ಅಂಶಗಳಿಗೆ ಹಲವು ತಿದ್ದಪಡಿ ಮಾಡಲಾಯಿತು. ಅತೀ ಮುಖ್ಯವಾದ ಅಂಶ ಎಂದರೆ ಇತರೇ ಪಾರಂಪರಿಕ ಅರಣ್ಯ ವಾಸಿಗಳಿಗೆ ಅವಕಾಶ ಕಲ್ಪಿಸಲು ಅವಧಿಯನ್ನು ವಿಸ್ತರಿಸಿ ಮೂರು ತಲೆಮಾರು ವಾಸವಿರುವವರಿಗೆ ಅವಕಾಶ ಕಲ್ಪಿಸಿತು. ಆದಿವಾಸಿಗಳನ್ನು ಮತ್ತು ಇತರೆ ಪಾರಂಪರಿಕ ಅರಣ್ಯವಾಸಿಗಳ ವಾಸದ ನೆಲೆ ನಿಗದಿಪಡಿಸಲು ಅಂತಿಮ ದಿನಾಂಕವನ್ನು ೨೫ ಅಕ್ಟೋಬರ್ ೧೯೮೦ ರಿಂದ ೧೩ ಡಿಸೆಂಬರ್ ೨೦೦೫ ರವರೆಗೆ ವಿಸ್ತರಿಸಲಾಯಿತು. ಭೂ ಮಿತಿಯನ್ನ ೪ ಹೆಕ್ಟೇರ್‌ವರೆಗೆ ವಿಸ್ತರಿಸಲಾಯಿತು. ಪ್ರಸ್ತುತ ಗ್ರಾಮ ಸಭೆ ಭೂಮಿಯ ಹಕ್ಕನ್ನು ನಿರ್ಧರಿಸುವ ಅಧಿಕಾರ ಪಡೆಯಿತು.

ಕಾಯಿದೆಯ ಮುಖ್ಯ ಧ್ಯೇಯ ಐತಿಹಾಸಿಕ ಅನ್ಯಾಯವನ್ನು ಸರಿಪಡಿಸುವುದು. "ಫೆಡರೇಶನ್ ಆಫ್ ಟ್ರೈಬಲ್ ಅಂಡ್ ಫಾರೆಸ್ಟ್ ಡ್ವೆಲ್ಲರ್ಸ್ ಆರ್ಗನೈಸೇಷನ್" ಪ್ರಕಾರ ಕಾಯಿದೆಯ ಫಲ ಪಡೆಯಬೇಕಾದರೆ ಅರಣ್ಯ ಭೂಮಿಯಲ್ಲಿ ವಾಸವಿರಬೇಕು. ಆದರೆ ಬಹಳಷ್ಟು ಆದಿವಾಸಿಗಳು ವಾಸ ಮಾಡುತ್ತಿರುವ ಭೂಮಿ ಕಂದಾಯ ಭೂಮಿಯಾಗಿದೆ. ಕೃಷಿ ಮಾಡುತ್ತಿರುವ ಭೂಮಿ ಕಂದಾಯ ಇಲಾಖೆಗೆ ಸೇರಿದೆ. ಈ ಸಂದರ್ಭದಲ್ಲಿ ಗ್ರಾಮ ಸಭೆ ಪಟ್ಟ ವಿತರಿಸುವ ಅಧಿಕಾರ ಹೊಂದಿರುವುದರಿಂದ ಸ್ಥಳೀಯ ಪಟ್ಟ ಭದ್ರರ ಹಿತಾಸಕ್ತಿಯಿಂದ ಭೂಮಿ ದೊರೆಯದೇ ಹೋಗಬಹುದಾಗಿದೆ.

ಪ್ರಸ್ತುತ ಸ್ಥಿತಿಯಲ್ಲಿ ಕಾಯಿದೆ ಪರಿಸರದ ಬಗ್ಗೆ ಕಾಳಜಿ ಹೊಂದಿರುವುದಿಲ್ಲ. ಪ್ರತಿ ಫಲಾನುಭವಿಗೆ ೪ ಹೆಕ್ಟೇರ್ ಭೂಮಿ ಕೊಡುವುದಾದರೆ ೪೦ ಲಕ್ಷ ಮೂಲ ಅರಣ್ಯ ಪ್ರದೇಶ ಬೇಕಾಗುತ್ತದೆ. ಇಂತಹ ಸನ್ನಿವೇಶದಲ್ಲಿ ಅರಣ್ಯ ಮತ್ತು ಆದಿವಾಸಿಗಳ ಮಧ್ಯೆ ಹೇಗೆ ಸಮನ್ವಯತೆ ಸಾದಿಸಲಾಗುತ್ತದೆ ಎಂಬ ಪ್ರಶ್ನೆ ಉದ್ಭವವಾಯಿತು.

ಈ ಕಾಯಿದೆ ಅನುಷ್ಠಾನದಿಂದ ಅರಣ್ಯ ಮತ್ತು ವನ್ಯಪ್ರಾಣಿಗಳು ವಿನಾಶವಾಗುತ್ತವೆ. ದೇಶದಲ್ಲಿ ವರ್ಗ ಸಂಘರ್ಷಕ್ಕೆ ದಾರಿಯಾಗುತ್ತದೆ. ಜಾತಿ ಮತ್ತು ಜನಾಂಗಗಳ ಮಧ್ಯೆ ಒಡಕು, ಭಿನ್ನಾಭಿಪ್ರಾಯ ಉಂಟಾಗಿ ಕೋಲಾಹಲವಾಗುತ್ತದೆ ಎಂಬುದು ಕೆಲವರ ವಾದ. ಇದು ಭಯ ಮಿಶ್ರಿತವಾದದ್ದು. ಇನ್ನೊಂದು ತೀವ್ರ ಆಕ್ಷೇಪ ಎಂದರೆ ಪಟ್ಟಭದ್ರ ಹಿತಾಸಕ್ತಿಗಳಿಂದ ಆದಿವಾಸಿಗಳ ಭೂಮಿ ಬೇರೆಯವರ ಪಾಲಾಗಿದೆ. ಈಗ ಅರಣ್ಯ ಸಂಪನ್ಮೂಲವನ್ನೂ ಕೂಡ ಬಲವಂತವಾಗಿ ಅವರಿಂದ ಕಸಿದುಕೊಳ್ಳುವ ಹುನ್ನಾರವಿದೆ. ವನ್ಯಪ್ರಾಣಿಗಳಿಗೂ ಇದು ಅನ್ಯಾಯ. ಮಂಗ, ಅಳಿಲು, ಪ್ಯಾರಾಕಿಟ್ಸ್ ನಂತಹ ಪ್ರಭೇದಗಳು ಮಾನವನು ಹಸನುಗೊಳಿಸಿದ ಒಳಪ್ರದೇಶಗಳನ್ನು ಬಳಸಿಕೊಳ್ಳವಂತಹ ಪರಿಸ್ಥಿತಿ ಎದುರಾಗಿದೆ. ಅದೇ ರೀತಿ ಆನೆ, ಹುಲಿ, ಚಿರತೆ ಮತ್ತು ಘೇಂಢಾಮೃಗಗಳಂತಹ ಪ್ರಾಣಿಗಳಿಗೆ ಅತಿ ಹೆಚ್ಚಿನ ಪ್ರದೇಶ ಬೇಕು. ತಮ್ಮದೇ ಆದ ಆಹಾರ ಸರಪಳಿ ಇರಬೇಕು. ತಮ್ಮ ಪ್ರಭೇದದ ಅಭಿವೃದ್ಧಿಗೆ ಪೂರಕ ವಾತಾವರಣವಿರುವ ನಿರ್ದಿಷ್ಟ ಪ್ರದೇಶ ಬೇಕಾಗಿದೆ. ಅಲ್ಲದೆ ಇವುಗಳು ದೊಡ್ಡ ದೇಹವುಳ್ಳ ಮತ್ತು ನಿಧಾನವಾಗಿ ತಮ್ಮ ಸಂತತಿ ಉತ್ಪತ್ತಿಸುವ ಕ್ರಮ ಹೊಂದಿವೆ. ಇಂತಹ ಸಂದರ್ಭದಲ್ಲಿ ಆದಿವಾಸಿ ಮತ್ತು ಪ್ರಾಣಿಗಳ ಮಧ್ಯೆ ಸ್ಪರ್ಧೆ ಏರ್ಪಡುತ್ತದೆ. ಹಾಗಾಗಿ ಅರಣ್ಯ ಭೂಮಿಯನ್ನು ವನ್ಯ ಜೀವಿ ಸಂರಕ್ಷಣಾ ವಿಭಾಗದವರಿಗೆ ಬಿಟ್ಟು ಕೊಡುವುದು ಸರಿಯಾಗಿದೆ. ಮುಂದಿನ ದಿನಮಾನಗಳಲ್ಲಿ ಇವುಗಳನ್ನು ರಕ್ಷಿಸುವುದು ಅನಿವಾರ್ಯವಾಗಿದೆ. ಈ ನಿಟ್ಟಿನಲ್ಲಿ ಅರಣ್ಯ ಹಕ್ಕುಗಳ ಕಾಯಿದೆಯುನ್ನು ವಿರೋಧಿಸಲಾಗಿದೆ.

ಭೂಮಿ ಹಕ್ಕಿನ ಜೊತೆಗೆ ಅರಣ್ಯ ಸಂಪನ್ಮೂಲದ ಹಕ್ಕುಗಳನ್ನು ಕೊಡುವುದನ್ನೂ ಕೂಡ ಕಾಯಿದೆ ಒಳಗೊಂಡಿದೆ. ಆದರೆ ಇದು ವನ್ಯಜೀವಿಗಳಿಗೆ ಬಹಳ ಗಂಭೀರವಾದ ಅಪಾಯದ ಸೂಚನೆ. ಭೂಮಿಯ ಮೇಲಿನ ಹಕ್ಕಾದರೆ ನೇರವಾಗಿ ನಿಗಾವಹಿಸಬಹುದು. ಆದರೆ ಅರಣ್ಯ ಸಂಪನ್ಮೂಲಗಳ ಬಳಕೆಯ ಮೇಲೆ ನಿಗಾ ಇಡುವುದು ಬಹಳ ಕಠಿಣ ಎಂಬ ವಾದವಿದೆ. ಈ ಕಾಯಿದೆ ಇತರೆ ಪ್ರಾಣಿ ವರ್ಗದ ಜೀವನೋಪಾಯದ ಕುರಿತು ಮಾತನಾಡುವುದಿಲ್ಲ. ಜೀವವೈವಿಧ್ಯ ಸಂರಕ್ಷಣೆ ಮತ್ತು ಸಂಪನ್ಮೂಲಗಳ ಬಗ್ಗೆ ಕೂಡ ಚಕಾರವೆತ್ತುತ್ತಿಲ್ಲ. ಕಾನೂನುಬಾಹಿರವಾಗಿ ಉಪಯೋಗಿಸಿದ್ದಕ್ಕಾಗಿ ಯಾವ ಕ್ರಮ ಕೈಗೊಳ್ಳಬೇಕೆಂದು ಹೇಳಿಲ್ಲ. ಇಂತಹ ಅಂಶಗಳನ್ನು ಸ್ಪಷ್ಟವಾಗಿ ನಮೂದಿಸಿದ ಮೇಲೆ ಕಾಯಿದೆ ಅನುಷ್ಠಾನ ಮಾಡಬೇಕು ಎಂಬ ವಾದವನ್ನೂ ಇಲ್ಲಿ ಗಮನಿಸಲಾಗಿದೆ.

ಅರಣ್ಯ ಹಕ್ಕುಗಳ ಕಾಯಿದೆಯ ಕರಡು ಭಾರತದ ಸಂವಿಧಾನ ೫ ನೇ ವಿಧಿಯ ಆಶಯದಂತೆ ಆದಿವಾಸಿಗಳ ಪಿತ್ರಾರ್ಜಿತಗೆ ಹೆಚ್ಚು ಮಹತ್ವ ನೀಡಿದೆ. ಇಲ್ಲಿ ಮಹಿಳೆಗೆ ಪ್ರಾಧಾನ್ಯತೆ ಇಲ್ಲ. ಅವಳ ಹಕ್ಕಿನ ಬಗ್ಗೆ ಪ್ರಸ್ತಾಪಿಸಲಾಗಿಲ್ಲ. ೬ ನೇ ವಿಧಿ ಅಧಿಕಾರ ವಿಕೇಂದ್ರಿಕರಣದ ಬಗ್ಗೆ ಹೇಳಿದೆ. ಅನುಸೂಚಿತ ಬುಡಕಟ್ಟು ಪ್ರದೇಶ ಯಾವುದು ಎಂಬುದರ ಸ್ಪಷ್ಟನೆ ಕೂಡ ಸರಿಯಾಗಿ ಇಲ್ಲ. ಉದಾಹರಣೆಗೆ ಮಧ್ಯಪ್ರದೇಶದಲ್ಲಿ ೫೦

ಪ್ರತಿಶತ ಅನುಸೂಚಿತ ಬುಡಕಟ್ಟು ಸಮುದಾಯದವರಿದ್ದಾರೆ. ಹಾಗಾದರೆ ಯಾವುದು ಅನುಸೂಚಿತ ಬುಡಕಟ್ಟು ಪ್ರದೇಶವಲ್ಲವೆಂದು ಹೇಳಬಹುದು. ಇಂತಹ ಅಂಶಗಳು ೫ ನೇ ವಿಧಿಗೆ ಬದ್ಧವಾಗಿಲ್ಲ ಎಂಬುದನ್ನು ಇಲ್ಲಿ ಗಮನಿಸಬೇಕಾಗಿದೆ.

ಪಂಚಾಯತ್ (ಎಕ್ಸ್‌ಟೆನ್‌ಷನ್ ಟು ಶೆಡ್ಯೂಲ್ಡ್ ಏರಿಯಾ) ಕಾಯಿದೆ ೧೯೯೬ (ಪಿಇಎಸ್‌ಎ) ಇದರನ್ವಯ ಮರಮುಟ್ಟುಯೇತರ ಅರಣ್ಯ ಉತ್ಪನ್ನಗಳ ಮಾಲೀಕತ್ವವು ಪರಿಶಿಷ್ಟ ಪಂಗಡಗಳಿಗೆ ಸೇರಿದ್ದಾಗಿದೆ. ಕೇರಳ, ಕರ್ನಾಟಕ, ತಮಿಳುನಾಡು, ಪಶ್ಚಿಮ ಬಂಗಾಳ, ಇಲ್ಲೆಲ್ಲ ಸಾಕಷ್ಟು ಬುಡಕಟ್ಟು ಜನರಿದ್ದಾರೆ. ಆದರೆ ಇಲ್ಲಿ ಪರಿಶಿಷ್ಟ ಪ್ರದೇಶವನ್ನು ಗುರುತಿಸಲಾಗಿಲ್ಲ. ಇನ್ನೊಂದೆಡೆ ಗ್ರಾಮೀಣಾಭಿವೃದ್ಧಿ ಸಚಿವಾಲಯದ ಇತ್ತೀಚಿನ ಬಿ.ಎನ್. ಯುಗಾಂದರ ರವರ ನೇತೃತ್ವದ ವರದಿಯಲ್ಲಿ ಹೇಳಿರುವಂತೆ ಕೆಲವು ರಾಜ್ಯಗಳಲ್ಲಿ ೫೦% ಗಿಂತ ಹೆಚ್ಚು ಜನರು ಅರಣ್ಯದಂಚಿನ ೫ ಕಿ.ಮೀ ವ್ಯಾಪ್ತಿಯಲ್ಲಿ ವಾಸಿಸುತ್ತಿದ್ದಾರೆ. ಆದರೆ ಇವರಿಗೆ ಪರಿಶಿಷ್ಟ ಪ್ರದೇಶದ ಬುಡಕಟ್ಟು ಜನರಿಗೆ ನೀಡಿದ ಪ್ರಾಧಾನ್ಯತೆ ನೀಡಲು ಅವಕಾಶವಿಲ್ಲದಾಗಿದೆ.

ಒಟ್ಟಾರೆ ಇಂತಹ ಹಲವು ವಾದ ಪ್ರತಿವಾದಗಳ ಮಧ್ಯೆ ಆದಿವಾಸಿಗಳು ನಶಿಸಿ ಹೋಗುವ ಮೊದಲು ಅವರನ್ನು ರಕ್ಷಿಸಬೇಕು ಎಂಬ ಕೂಗಿನ ಹಿನ್ನೆಲೆಯಲ್ಲಿ ಅರಣ್ಯ ಹಕ್ಕುಗಳ ಮಸೂದೆ ತಯಾರಿಸಲು ಜಂಟೀ ಸಂಸದೀಯ ಸಮಿತಿ ರಚಿಸಲಾಯಿತು. ಇದು ಮಸೂದೆಯ ಕರಡನ್ನು ೨೦೦೫ ರಲ್ಲಿ ತಯಾರಿಸಿತು.

### ೩.೩.೨. ಅರಣ್ಯ ಹಕ್ಕುಗಳ ಮಸೂದೆ ೨೦೦೫

ಜಂಟೀ ಸಂಸದೀಯ ಸಮಿತಿ ಆದಿವಾಸಿ ಅರಣ್ಯ ಹಕ್ಕುಗಳ ಮಸೂದೆ ೨೦೦೫ ನ್ನು ಸಂಸತ್ತಿನಲ್ಲಿ ೨೩ ಮೇ ೨೦೦೬ ರಂದು ಪ್ರಸ್ತುತ ಪಡಿಸಿತು. ಸಮಿತಿಯು ತಿದ್ದುಪಡಿ ಮಾಡಿದ ಮಸೂದೆ ವಿಸ್ತೃತ ವ್ಯಾಪ್ತಿಯನ್ನು ಹೊಂದಿದೆ ಎಂದು ಹೇಳಿತು. ಅದರಂತೆ ಈ ಮಸೂದೆಯ ಹೆಸರನ್ನು ಪರಿಶಿಷ್ಟ ಪಂಗಡ ಮತ್ತು ಇತರೇ ಪಾರಂಪರಿಕ ಅರಣ್ಯವಾಸಿಗಳ (ಅರಣ್ಯ ಹಕ್ಕುಗಳನ್ನು ಗುರುತಿಸುವ) ತಿದ್ದುಪಡಿ ಮಸೂದೆ ೨೦೦೬ ಎಂದು ಹೆಸರಿಸಲಾಯಿತು. (Amended Bill of 2006) ಇದು ಆದಿವಾಸಿ ಹಕ್ಕುಗಳು ಮತ್ತು ಅರಣ್ಯ ಸಂರಕ್ಷಣೆ ಬಗ್ಗೆ ತೀಕ್ಷ್ಣವಾದ ವಾದ ಮಂಡಿಸಿತ್ತು. ಚಲನಚಿತ್ರ ನಿರ್ಮಾಪಕ ಮತ್ತು ಅರಣ್ಯ ಸಂರಕ್ಷಣವಾದಿ ಮೈಕ್ ಪಾಂಡೆ "ಒಂದು ವೇಳೆ ಈ ಮಸೂದೆ ಕಾಯಿದೆಯಾದರೆ ನಾವು ಅರಣ್ಯವನ್ನು ಮರೆಯಬೇಕು ಮತ್ತು ಸಂರಕ್ಷಣೆ ಬಗ್ಗೆ ಹಂಬಲಿಸುವುದನ್ನು ಬಿಡಬೇಕು" ಎಂದು ಹೇಳಿದ್ದರು. ಆದರೆ ಮಸೂದೆಯ ಪರವಾಗಿರುವವರು ಇದೊಂದು 'ಉತ್ಕೃಷ್ಟ ಮತ್ತು ಐತಿಹಾಸಿಕ ವರದಿ' ಹಾಗಾಗಿ ಇದು "ಐತಿಹಾಸಿಕ ಅನ್ಯಾಯವನ್ನು" ಸರಿಪಡಿಸುತ್ತದೆ ಎಂಬ ಹೇಳಿಕೆ ಕೊಟ್ಟರು. (For example see the statement released by Campaign for Survival and Dignity on 24 May,

2006 on the Forest Rights Update web group.) ವನ್ಯಜೀವಿ ಸಂರಕ್ಷಣಾ ಪರವಾದ ವಾದಿಗಳು ಇದನ್ನು ತೀವ್ರವಾಗಿ ವಿರೋಧಿಸಿದರು.

ಅರಣ್ಯ ಹಕ್ಕುಗಳ ಮಸೂದೆ ಮೇಲೆ ಚರ್ಚೆ ನಡೆಯುತ್ತಿರುವ ಸಂದರ್ಭದಲ್ಲಿ ಅರಣ್ಯ ಸಂರಕ್ಷಣೆಗೆ ಉತ್ತಮ ವಿಧಾನ ಯಾವುದು ಎಂಬುದನ್ನು ಪುನರ್‌ಪರಿಶೀಲಿಸಲು ಒತ್ತಾಯಿಸಲಾಯಿತು. ಈ ಮಸೂದೆಯ ಪರವಾಗಿ ಸಮುದಾಯ ಅರಣ್ಯ ಆಡಳಿತ ವ್ಯವಸ್ಥೆಯನ್ನು ಪುನರ್ ಸಂಘಟಿಸಬೇಕು. ಅರಣ್ಯ ಭೂಮಿ ಮತ್ತು ಆದಿವಾಸಿ ಜನರ ನಡುವೆ ಸಂಪರ್ಕವನ್ನು ಗುರುತಿಸುವುದು ಅವಶ್ಯಕವಾಗಿದೆ ಎಂದು ಸಾಧಿಸಲಾಯಿತು. ಈ ನಿಟ್ಟಿನಲ್ಲಿ ಆಲೋಚಿಸಿದಾಗ ಈ ಮಸೂದೆ ನಿಜವಾದ ಸ್ವಾತಂತ್ರ್ಯ ನೀಡಿ, ಅರಣ್ಯದ ಮೇಲೆ ಆದಿವಾಸಿಗಳಿಗೆ ಹಕ್ಕು ನೀಡುತ್ತದೆ. ಇದರಿಂದಾಗಿ ಐತಿಹಾಸಿಕ ಅನ್ಯಾಯವನ್ನು ಸರಿಪಡಿಸಿದಂತಾಗುತ್ತದೆ. ಪರಿಣಾಮವಾಗಿ ಆದಿವಾಸಿಗಳ ಉಳಿಯುವಿಕೆ ಮತ್ತು ಅವರ ಗೌರವ ಹೆಚ್ಚಾಗುತ್ತದೆ. ಹೀಗೆ ಸಂಸತ್ತಿನಲ್ಲಿ ಮಂಡಿಸಿದ ಮಸೂದೆಯ ಪರ ಪ್ರಚಾರ ಮಾಡಲಾಯಿತು. ಇದರಿಂದಾಗಿ ವಿವಿಧ ರಾಜಕೀಯ ಪಕ್ಷಗಳಿಂದ ನಿರ್ಣಾಯಕ ಬೆಂಬಲ ಪಡೆಯಲಾಯಿತು. ಆದರೆ ಇದರ ವಿರುದ್ಧವಾಗಿ ಬಹಳ ತೀಕ್ಷಣವಾಗಿ ಪ್ರಚಾರವನ್ನು ಮಾಡಲಾಯಿತು. ಇಲ್ಲಿ ಪರಿಸರ ಸಂರಕ್ಷಣೆಯ ನೈತಿಕತೆಯನ್ನು ಎತ್ತಿ ಹಿಡಿಯಲಾಗಿತ್ತು. ಈ ಮಸೂದೆಯಿಂದ ಅರಣ್ಯ ಸಂರಕ್ಷಣೆ ಕೊನೆಗೊಂಡಂತೆ ಎಂದು ಬಿಂಬಿಸಲಾಯಿತು. ಹೀಗಾಗಿ ಈಗಲೂ ಈ ಮಸೂದೆಯ ಅವಶ್ಯಕತೆ ಇಲ್ಲ. ಈಗಾಗಲೇ ಇರುವ ಕಾನೂನುಗಳೆ ಸಾಕಷ್ಟು ವ್ಯಾಪ್ತಿಯನ್ನು ಹೊಂದಿದ್ದು ಅವುಗಳೇ ಅರಣ್ಯ ವಾಸಿಗಳ ಹಕ್ಕುಗಳನ್ನು ಕೊಡಮಾಡುತ್ತವೆ ಎಂಬ ವಾದ ಮಾಡಲಾಯಿತು.

ಆದಿವಾಸಿ ಹಕ್ಕು ಮತ್ತು ಪರಿಸರ ವಾದಿಗಳು ವಾದಿಸುವ ಪ್ರಕಾರ ಅರಣ್ಯ ಹಕ್ಕು ಮಸೂದೆ ಕೇವಲ ಆದಿವಾಸಿಗಳ ಕಾನೂನಾತ್ಮಕ ಹಕ್ಕುಗಳನ್ನು ಮಾತ್ರ ಕೊಡಮಾಡದೆ ಸಮುದಾಯ ಆಧಾರಿತ ಅರಣ್ಯ ಸಂರಕ್ಷಣೆ ಮಾಡುತ್ತದೆ. ಈ ಗ್ರಹಿಕೆಯ ಆಧಾರದ ಮೇಲೆಯೇ ಹಲವು ಅಂತರಾಷ್ಟ್ರೀಯ ದತ್ತಿ ಸಂಸ್ಥೆಗಳು ಸಾಂಪ್ರದಾಯಿಕ ಗೇಣಿ ಮತ್ತು ಅರಣ್ಯ ಸಂರಕ್ಷಣೆ ತತ್ವಗಳಿಗೆ ಮಹತ್ವ ನೀಡುತ್ತವೆ ಎಂಬ ವಾದ ಬೇರೆ ಹುಟ್ಟಿಕೊಂಡಿತು.

ಅದು ಏನೇ ಇರಲಿ ಸಂಸತ್ತು ೨೦೦೫ ರ ಮಸೂದೆಯ ಪ್ರಸ್ತಾವನೆಯಲ್ಲಿ ಹೀಗೆ ವಾದಿಸಿದೆ. ದೀರ್ಘಾವಧಿಯಲ್ಲಿ ಅರಣ್ಯ ನಿರ್ವಹಣೆ ಮತ್ತು ಅರಣ್ಯ ಸಂರಕ್ಷಣೆಯ ಮೇಲೆ ಪ್ರಭಾವ ಬೀರಬಹುದಾದ ಅಂಶಗಳನ್ನು ತಿಳಿಸಿತು. ವಸಹಾತುಶಾಹಿ ಅರಣ್ಯ ನಿರ್ವಹಣೆ ವ್ಯವಸ್ಥೆಯಿಂದಾಗಿ ಜನರು ತಮ್ಮ ಹಕ್ಕಿನಿಂದ ವಂಚಿತರಾಗಿದ್ದಾರೆ. ಹಾಗಾಗಿ ಬಹುಕಾಲದವರೆಗೆ ಬಾಕಿ ಇದ್ದ ಹಕ್ಕುಗಳನ್ನು ಆದಿವಾಸಿಗಳು ಪಡೆಯಲು ಇದೊಂದು ಸುವರ್ಣ ಅವಕಾಶ. ಸಂಸದೀಯ ಜಂಟೀ ಸಮಿತಿಯು ತನ್ನ ನಡಾವಳಿಯಲ್ಲಿ ಹೇಳಿರುವಂತೆ ಮತ್ತು ಅರಣ್ಯ ಹಕ್ಕುಗಳ ಹೋರಾಟಗಾರರು ಹೇಳುವಂತೆ ಈ

ಪ್ರಕ್ರಿಯೆಯು ಬಹಳಷ್ಟು ಅರಣ್ಯ ಅವಲಂಭಿತರಿಗೆ ಸಹಾಯವಾಗುತ್ತದೆ. ಇದು ಬಹಳ ಮಹತ್ವವಾದದ್ದು ಏಕೆಂದರೆ ಆದಿವಾಸಿ ಪ್ರದೇಶದ ಬಳಿ ಇರುವ ಬಹಳಷ್ಟು ಕೃಷಿ ಕಾರ್ಮಿಕರು ತಮ್ಮ ಜೀವನೋಪಾಯಕ್ಕಾಗಿ ಅರಣ್ಯವನ್ನು ಅವಲಂಬಿಸಿದ್ದಾರೆ. ಇದಕ್ಕೆ ಕಾರಣ ಕೃಷಿಯಲ್ಲಿನ ಆಪತ್ತುಗಳು.

ಗಣಿಗಾರಿಕೆಗೆ ೫೦ ಹೆಕ್ಟೇರ್‌ವರೆಗೆ ಅವಕಾಶ ನೀಡಿದೆ. ಕಟ್ಟಡ ನಿರ್ಮಾಣದ ಉದ್ದೇಶಕ್ಕಾಗಿ ಒಂದು ಲಕ್ಷ ಹೆಕ್ಟೇರ್ ವರೆಗೆ ತಮ್ಮ ಕಾರ್ಯ ಪ್ರಾರಂಬಿಸುವವರಿಗೆ ಪರಿಸರ ಇಲಾಖೆಯ ಅನುಮತಿ ಪಡೆಯುವುದರಿಂದ ವಿನಾಯಿತಿ ನೀಡಲಾಗಿದೆ. ಇದು ಇತರೆ ಭೂಮಿಯನ್ನು ಖಾಸಗೀಕರಣ ಮಾಡುವ ಸ್ಪಷ್ಟ ಚಿಹ್ನೆಯಾಗಿದೆ. ಈ ನಿಟ್ಟಿನಲ್ಲಿ ಭಾರತ ಸರ್ಕಾರದ ನಿಜವಾದ ಉದ್ಧೇಶವೇನು? ಮತ್ತು ಏಕೆ ಈ ಮಸೂದೆಯನ್ನು ಪರಿಚಯಿಸುತ್ತದೆ ಎಂಬ ಪ್ರಶ್ನೆಗಳನ್ನು ಎತ್ತಲಾಯಿತು. ಈ ರೀತಿಯ ಪರಸ್ಪರ ವಿರುದ್ಧ ವಾದದ ಸನ್ನಿವೇಶದ ಹಿನ್ನೆಲೆಯಲ್ಲಿಯೇ ಮಸೂದೆಯು ಮಂಡಿಸಲ್ಪಟ್ಟಿತು.

**೩. ೩. ೩. ಮಸೂದೆಯ ವ್ಯಾಪ್ತಿ ಮತ್ತು ಸ್ವರೂಪ**

ಜನ ಸಂಘಟನೆಗಳಿಂದ ಮುಖ್ಯವಾಗಿ ಎತ್ತಲ್ಪಟ್ಟ ವಿಷಯವೆಂದರೆ ಅಂತಿಮ ದಿನಾಂಕ ನಿಗದಿ ಕುರಿತುದ್ದಾಗಿದೆ. ಈ ಮಸೂದೆಯ ಪ್ರಕಾರ ಯಾರು ೨೫ ಅಕ್ಟೋಬರ್ ೧೯೮೦ ಕ್ಕಿಂತ ಪೂರ್ವದಲ್ಲಿ ಅರಣ್ಯಕ್ಕೆ ಬಂದು ಅರಣ್ಯವನ್ನು ಆಕ್ರಮಿಸಿರುತ್ತಾರೋ ಅಂತಹವರ ಹಕ್ಕುಗಳನ್ನು ಮಾತ್ರ ಪರಿಗಣಿಸುವುದೆಂದು ಹೇಳಲಾಗಿದೆ. ಈ ದಿನಾಂಕವು ಅರಣ್ಯ ಸಂರಕ್ಷಣಾ ಕಾಯಿದೆ ೧೯೮೦ ಪ್ರಕಟಣೆಯಾದ ದಿನಾಂಕವಾಗಿದೆ. ಆದರೆ ಇದು ಎಲ್ಲಿಯೂ ಕಾಯಿದೆಯಾಗಿ ಬಂದಿರಲಿಲ್ಲ. ಮೇ ೨೦೦೨ ರಲ್ಲಿ ಸರ್ಕಾರದ ಮೇಲೆ ಒತ್ತಡ ತಂದು ಫೆಬ್ರವರಿ ೫ ೨೦೦೪ ರಲ್ಲಿ ಅರಣ್ಯವಾಸಿಗಳ ಹಕ್ಕುಗಳನ್ನು ೩೧ ಡಿಸೆಂಬರ್ ೧೯೯೩ ರವರೆಗೂ ವಿಸ್ತರಿಸಲಾಯಿತು. ಆದರೆ ಇದು ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ರದ್ದಾಯಿತು. ಅಲ್ಲದೆ ಅರಣ್ಯ ಮತ್ತು ಪರಿಸರ ಮಂತ್ರಾಲಯವೂ ಕೂಡ ಇದನ್ನು ರದ್ದು ಪಡಿಸುವಂತೆ ಜುಲೈ ೨೦೦೪ ರಲ್ಲಿ ಅರ್ಜಿ ಸಲ್ಲಿಸಿತು. ಹೀಗಾಗಿ ಈ ವಿಷಯ ನ್ಯಾಯಾಲಯದಲ್ಲಿ ಪರಿಹಾರವಾಗದೇ ಇದೆ. ಜಂಟೀ ಸಂಸದೀಯ ಸಮಿತಿ ಮತ್ತು ಆದಿವಾಸಿ ಹಕ್ಕು ಚಳುವಳಿಗಳು, ಪ್ರಜಾಪ್ರಭುತ್ವ ಸಂಘಟನೆಗಳು ೨೫ ಅಕ್ಟೋಬರ್ ೧೯೮೦ ದಿನಾಂಕವು ಆದಿವಾಸಿಗಳಿಗೆ ಸಾಕಷ್ಟು ಅನ್ಯಾಯವಾಗುತ್ತದೆ ಎಂದು ಒತ್ತಾಯ ಮಾಡಿದವು. ಜಂಟೀ ಸಂಸದೀಯ ಸಮಿತಿ ಏಕಾಏಕಿ ಈ ದಿನಾಂಕವನ್ನು ೧೩ ಡಿಸೆಂಬರ್ ೨೦೦೫ ಕ್ಕೆ ನಿಗದಿಪಡಿಸಿತು. ಹೀಗಾಗಿ ಜಂಟೀ ಸಂಸದೀಯ ಸಮಿತಿ ಕೇವಲ ಸಾಮೂಹಿಕ ಹೆದರಿಕೆಯನ್ನು ನಿವಾರಿಸಲಿಲ್ಲ, ಜೊತೆಗೆ ಪ್ರಗತಿಪರ ಕಾನೂನಾತ್ಮಕ ಮತ್ತು ಜನಪರ ಪ್ರಜಾಪ್ರಭುತ್ವ ಬೇಡಿಕೆಗೆ ಸ್ಪಂದಿಸಿತು ಎಂದು ಬಿಂಬಿಸಲಾಯಿತು.

ಈ ಮಸೂದೆಯಲ್ಲಿದ್ದ ಮತ್ತೊಂದು ತಕರಾರಿನ ಅಥವಾ ವಾದದ ವಿಷಯವೆಂದರೆ, ಇತರೆ ಪಾರಂಪರಿಕ ಅರಣ್ಯ ಅವಲಂಭಿತರನ್ನು ಮಸೂದೆಯಲ್ಲಿ ಸೇರ್ಪಡೆಗೊಳಿಸುವುದು. ೨೦೦೫ ರ ಮಸೂದೆ ಕೇವಲ ಅರಣ್ಯವಾಸಿ ಆದಿವಾಸಿಗಳನ್ನು ಮಾತ್ರ ಒಳಗೊಂಡಿತ್ತು. ಅದರಲ್ಲಿ ಇತರೆ ಅರಣ್ಯ ಅವಲಂಭಿತ ಸಮುದಾಯವನ್ನು ಪರಿಗಣಿಸಿರಲಿಲ್ಲ. ಮಸೂದೆಯ ವಿರೋಧಿಗಳು ಇದನ್ನು ಒಂದು ಅಸ್ತ್ರವಾಗಿ ಬಳಸಿಕೊಂಡು ಇದು ಆದಿವಾಸಿಗಳನ್ನು ಪಾರುಮಾಡುತ್ತಾ ಸಾಮಾಜಿಕ ಒತ್ತಡವನ್ನು ನಿರ್ಮಾಣ ಮಾಡುತ್ತದೆ ಎಂದು ಬಿಂಬಿಸಲಾರಂಭಿಸಿದರು. ಇದೇ ವೇಳೆಗೆ ರೈತರು ಅಂದರೆ 'ನ್ಯಾಷನಲ್ ಪೋರಂ ಆಫ್ ಫಾರೆಸ್ಟ್ ಪೀಪಲ್ ಆ್ಯಂಡ್ ಫಾರೆಸ್ಟ್ ವರ್ಕರ್ಸ್' ಇವರು ಅರಣ್ಯ ಹಕ್ಕು ಮಸೂದೆಯ ಸೀಮಿತ ವ್ಯಾಪ್ತಿಯನ್ನು ಎತ್ತಿತೋರಿಸಿದರು. ಮತ್ತು ಆದಿವಾಸಿಯೇತರ ಅರಣ್ಯವಾಸಿಗಳು ಮತ್ತು ಅಲ್ಪಸಂಖ್ಯಾತ ಆದಿವಾಸಿಗಳು ತಮಗೂ ಅವಕಾಶ ಕೊಡಿ ಎಂಬ ಬೇಡಿಕೆ ಇಟ್ಟರು. ಸಮುದಾಯ ಸಂಘಟಕರು ಮತ್ತು ಎಡಪಂಥೀಯರು ಇದೊಂದು ಮುಖ್ಯ ಸಂಗತಿಯಾಗಿದ್ದು ರಾಷ್ಟ್ರ ನಿರ್ಮಾಣದಲ್ಲಿ ಆದಿವಾಸಿ ಮತ್ತು ಆದಿವಾಸಿಯೇತರರೆಲ್ಲರೂ ಬಹಳ ಮುಖ್ಯ ಎಂಬ ಅಂಶವನ್ನು ಒತ್ತಿ ಹೇಳುತ್ತಾ ಬಂದರು. ಹಾಗೆಯೇ 'ಆಂತ್ರೋಫಲಜಿಕಲ್ ಸರ್ವೆ ಆಫ್ ಇಂಡಿಯಾ' ವು ಔದ್ಯೋಗಿಕ ವಿಶ್ಲೇಷಣೆ ಮಾಡುತ್ತಾ ಬಹಳಷ್ಟು ಪರಿಶಿಷ್ಟ ಜಾತಿಯವರು ಮತ್ತು ಭೂರಹಿತ ಕಾರ್ಮಿಕರು ಅರಣ್ಯವನ್ನು ತಮ್ಮ ಜೀವನೋಪಾಯಕ್ಕಾಗಿ ಅವಲಂಬಿಸಿದ್ದಾರೆ, ಈ ಅರಣ್ಯಗಳೇ ಇತರೆ ಉದ್ಯೋಗಗಳನ್ನು ನೀಡುವಲ್ಲಿ ಸಹಕಾರಿಯಾಗಿವೆ ಎಂಬುದನ್ನು ಮನದಟ್ಟು ಮಾಡಿತು. ಹೀಗಾಗಿ ಎರೆಡೂ ಕಡೆಯ ಚರ್ಚೆ, ವಾದ ವಿವಾದಗಳಿಂದಾಗಿ ೨೦೦೫ ರ ಅರಣ್ಯ ಹಕ್ಕುಗಳ ಮಸೂದೆಯ ಕರಡು ತನ್ನ ವ್ಯಾಪ್ತಿಯಲ್ಲಿ ಹಕ್ಕುಗಳನ್ನು ವ್ಯವಸ್ಥೆಗೊಳಿಸುವಾಗ ಹೊಸ ಸಂಘರ್ಷಗಳನ್ನು ಸೃಷ್ಟಿಸಿತು. ಹಕ್ಕುಗಳನ್ನು ಕೊಡಮಾಡುವಲ್ಲಿ ಸುಗಮಗೊಳಿಸುವ ದಾರಿಗಳಲ್ಲಿ ಅನಾಮದೇಯ ರೂಪಾಂತರಗಳು, ಯಾರು ಅರ್ಹ ಹಕ್ಕುದಾರರು ಮತ್ತು ಯಾರು ಅರಣ್ಯ ಅವಲಂಭಿತರು, ಯಾರು ಅರಣ್ಯ ಹಕ್ಕಿಗೆ ಅರ್ಹರಲ್ಲದವರು ಎಂಬುದನ್ನು ತೀರ್ಮಾನಿಸುವುದು ಕಷ್ಟಕರವಾಯಿತು. ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡ ಜಂಟೀ ಸಂಸದೀಯ ಸಮಿತಿಯು "ಸಾಂಪ್ರದಾಯಿಕ ಅರಣ್ಯ ವಾಸಿಗಳು" ಎಂಬುದನ್ನು ಸೇರ್ಪಡೆಗೊಳಿಸಲು ಶಿಫಾರಸ್ಸು ಮಾಡಿತು. ಆದರೆ ಮೂಲ ಕರಡಿನಲ್ಲಿ ಯಾವುದೇ ಬದಲಾವಣೆ ಮಾಡದಂತೆ ಸೂಚಿಸಿತು. ಹೀಗಾಗಿ ಇದು ಪರಿಶಿಷ್ಟ ಪಂಗಡ ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಮಸೂದೆ ೨೦೦೬ ಎಂದಾಯಿತು.

"ಪಾರಂಪರಿಕ ಅರಣ್ಯ ವಾಸಿಗಳು" ಎಂಬ ಪದವು ಸೂಚಿಸುವಂತೆ ಇದರ ಅರ್ಥ ಯಾರು ಕನಿಷ್ಟ ಮೂರು ತಲೆಮಾರುಗಳಿಂದ ಅರಣ್ಯದಲ್ಲಿ ವಾಸಮಾಡುತ್ತಿದ್ದಾರೋ ಅವರು ಎಂದಾಗುತ್ತದೆ. ಇದು ಬೇನಾಮಿ ವರ್ಗಾವಣೆದಾರರು ಮತ್ತು ಭೂಗಳ್ಳರನ್ನು ತಡೆಯಲು ಸಹಕಾರಿಯಾಗುತ್ತದೆ. ಆದರೆ ಪ್ರಸ್ತುತ ಅರ್ಥದಲ್ಲಿ ಪಾರಂಪರಿಕ

ಅರಣ್ಯವಾಸಿಗಳು ಎಂಬುದು ಯಾರು ಪುನರ್ವಸತಿಗೊಂಡಿದ್ದಾರೋ ಮತ್ತು ಸ್ಥಳಾಂತರಗೊಂಡಿದ್ದಾರೋ ಅವರು ಅರಣ್ಯದ ಮೇಲೆ ಅವಲಂಭಿತರಾಗಿದ್ದರೆ ಅವರನ್ನೂ ಒಳಗೊಂಡಿದೆ. ಇದು ಪ್ರಗತಿದಾಯಕ ಹೆಜ್ಜೆ ಏಕೆಂದರೆ ಆದಿವಾಸಿಗಳು ಜೀವಿಸುವ ಪ್ರಮಾಣ ಮತ್ತು ಆಧುನಿಕ ಕೈಗಾರಿಕರಣದಿಂದಾಗಿರುವ ಋಣಾತ್ಮಕ ಪರಿಣಾಮವನ್ನು ಇದು ಗುರುತಿಸುತ್ತದೆ. ಆದರೆ ಇದನ್ನು ಪಡೆಯುವ ಕಠಿಣ ದಾರಿಯಲ್ಲಿ ಯಾವುದೇ ಅರ್ಹರಿಗೂ ಅನ್ಯಾಯವಾಗಬಾರದು. ಅದಕ್ಕಾಗಿ ಅರಣ್ಯ ಹಕ್ಕುಗಳನ್ನು ಗುರುತಿಸುವ ಹಕ್ಕನ್ನು ಗ್ರಾಮ ಸಭೆಗೆ ನೀಡಲಾಗಿದೆ.

### ೩.೩.೩.೧. ರಕ್ಷಿತ ಪ್ರದೇಶದಲ್ಲಿ ಪರಿಸರ ರಕ್ಷಣೆ ಮತ್ತು ಗೇಣಿದಾರರ ರಕ್ಷಣೆ

೨೦೦೫ ರ ಕರಡು ಪ್ರತಿಯಲ್ಲಿನ ಒಂದು ಬದಲಾದ ಅಂಶವೆಂದರೆ ಇದು ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಧಾಮಗಳಲ್ಲಿ ವಾಸಿಸುವ ಜನರನ್ನು ಒಳಗೊಂಡಿತ್ತು. ಆದರೆ ಈ ಹಕ್ಕುಗಳಿಗೆ ಇನ್ನೂ ಹೆಚ್ಚಿನ ಭದ್ರತೆ ಮತ್ತು ಬಲದ ಅವಶ್ಯಕತೆ ಇದೆ. ಪ್ರಸ್ತುತ ಈ ಒಂದು ವನ್ಯಜೀವಿ (ರಕ್ಷಣೆ) ತಿದ್ದುಪಡಿ ಕಾಯಿದೆ ೨೦೦೨ ರಂತೆ ಆಡಳಿತಕ್ಕೊಳಪಟ್ಟಿದೆ. ಇದರ ಪ್ರಕಾರ ರಾಷ್ಟ್ರೀಯ ಉದ್ಯಾನವನದಲ್ಲಿ ಜೀವಿಸುವವರಿಗೆ ಯಾವುದೇ ಹಕ್ಕುಗಳನ್ನು ನೀಡಲಾಗದು. ಮತ್ತು ವನ್ಯ ಜೀವಿ ಧಾಮಗಳಲ್ಲಿ ಸೀಮಿತ ಹಕ್ಕುಗಳನ್ನು ಕೊಡಮಾಡಲಾಗಿದೆ. ಅರಣ್ಯ ಭೂಮಿ ಎಂದರೆ ಯಾವುದೇ ಅರಣ್ಯ ಪ್ರದೇಶ, ಅವಿಭಾಗಿತ ಅರಣ್ಯಗಳು, ಪ್ರಚಲಿತ ಮತ್ತು ಯೋಜಿತ ಅರಣ್ಯಗಳು, ರಕ್ಷಿತಾರಣ್ಯಗಳು, ಕಾಯ್ದಿಟ್ಟ ಅರಣ್ಯಗಳು, ವನ್ಯಮೃಗ ಧಾಮಗಳು ಮತ್ತು ರಾಷ್ಟ್ರೀಯ ಉದ್ಯಾನವನಗಳು, ಎಂಬುದನ್ನು ಕರಡು ಮಸೂದೆಯ ೨ (ಡಿ) ಯಲ್ಲಿ ನಮೂದಿಸಿ ಇದನ್ನು ಸಂಸತ್ತಿನಲ್ಲಿ ಮಂಡಿಸುವ ಪೂರ್ವದಲ್ಲಿ ಎಲ್ಲರಿಗೂ ವಿವರಿಸಲಾಗಿತ್ತು.

ರಕ್ಷಿತಾರಣ್ಯ ಪ್ರದೇಶದ ಮೇಲಿನ ಹಕ್ಕುಗಳನ್ನು ಕುರಿತು ಹೇಳುವ ವಿಧಿಗಳು ಅರಣ್ಯ ಮತ್ತು ಪರಿಸರ ಸಂರಕ್ಷಣಾ ಮಂತ್ರಾಲಯ ಹಾಗೂ ಪರಿಶಿಷ್ಟ ಪಂಗಡ ಮಂತ್ರಾಲಯದ ನಡುವೆ ಬಹಳಷ್ಟು ವೈರುಧ್ಯಗಳು ಏರ್ಪಟ್ಟವು. ವಾದ ವಿವಾದದ ತದನಂತರ ಪ್ರಧಾನಮಂತ್ರಿಗಳ ಕಛೇರಿಯಲ್ಲಿ ಇದಕ್ಕೆ ಪರಿಹಾರವನ್ನು ಕಂಡುಕೊಂಡು ೪(೧) (ಪ್ಯಾರಾ ೧ ಮತ್ತು ೩) ನ್ನು ಸೇರಿಸಲಾಯಿತು. ಇದರಂತೆ ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿಧಾಮಗಳ ಆರೈಕೆ ವರದಿಯಲ್ಲಿ ೫ ವರ್ಷಗಳ ಗಡುವನ್ನು ನೀಡಲಾಯಿತು. ಈ ವೇಳೆಯಲ್ಲಿ ಅರಣ್ಯ ಮತ್ತು ಪರಿಸರ ಸಂರಕ್ಷಣಾ ಮಂತ್ರಾಲಯವು ಸೂಕ್ತ ಪರಿಹಾರ ನೀಡಿ ಅಲ್ಲಿನ ಜನರನ್ನು ಸ್ಥಳಾಂತರಿಸಬೇಕು ಎಂಬುದಾಗಿ ಸೇರಿಸಲಾಯಿತು. ಈ ಅವಧಿಯಲ್ಲಿ ಪುನರ್ವಸತಿಗೊಳ್ಳದಿದ್ದವರೆಲ್ಲರೂ ಆ ಪ್ರದೇಶದ ಹಕ್ಕುದಾರರು ಅವರ ಹಕ್ಕುಗಳು ಶಾಶ್ವತವಾಗುತ್ತವೆ ಎಂಬುದಾಗಿದೆ.

ಈ ಮೇಲಿನ ಚರ್ಚೆಯಲ್ಲಿ ಪುನರ್ವಸತಿ ಮತ್ತು ಸ್ಥಳಾಂತರ ರಕ್ಷಿತಾರಣ್ಯ ಪ್ರದೇಶದಲ್ಲಿಯೇ ಆಗಿರಬೇಕು ಎಂಬುದನ್ನು ಅರಣ್ಯ ಮತ್ತು ಪರಿಸರ ಮಂತ್ರಾಲಯವು ಸರಿಯಾಗಿ ದಾಖಲೆ ಮಾಡಲಿಲ್ಲ.

**೩.೩.೩.೨. ಆದಿವಾಸಿಗಳು ಮತ್ತು ಭೂಮಿ**

ಆದಿವಾಸಿಗಳು ಹಲವು ಸಮಸ್ಯೆಗಳನ್ನು ಹೊಂದಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ಒಂದನೆಯದು ಭೂಮಿ ಸಮಸ್ಯೆ. ಎರಡನೆಯದು ಅರಣ್ಯದಲ್ಲಿನ ವಾಸ್ತವ್ಯದ ಸಮಸ್ಯೆ. ಸಾವಿರಾರು ವರ್ಷಗಳಿಂದ ಯಾವುದೇ ಖಾತೆ, ಕಂದಾಯ, ಪಟ್ಟಾ, ಪಹಣಿಯ ಗೊಂದಲ ಗೋಜು ಇಲ್ಲದೆ ನಿಸರ್ಗ ಸಹಜವಾಗಿ ಬದುಕುತ್ತಿದ್ದರು. ಸ್ವಚ್ಛಂದವಾಗಿ ನಿರ್ಭಿಡೆಯಿಂದ ಇಡೀ ಅರಣ್ಯ ಭೂಮಿಗೆ ಯಾರೂ ಅಧಿಪತಿಗಳಿಲ್ಲ ಎಂದು ನಂಬಿದ್ದರು. ಬೇಟೆಗಾರಿಕೆಯನ್ನೋ, ಕುಮರಿ ಬೇಸಾಯವನ್ನೋ ಮಾಡಿಕೊಂಡು ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹಿಸಿಕೊಂಡು ಆದಿವಾಸಿ ಸಮುದಾಯಗಳು ನೆಮ್ಮದಿಯ ಬದುಕು ಕಟ್ಟಿಕೊಂಡಿದ್ದರು. ಆದರೆ ಆಧುನಿಕ ವ್ಯವಸ್ಥೆ ಅವರನ್ನು ತ್ರಿಶಂಕುಗಳನ್ನಾಗಿ ಮಾಡಿಬಿಟ್ಟಿತು. ರಾಜಪ್ರಭುಗಳ ಆಳ್ವಿಕೆಯಲ್ಲಿ ಹಾಗೂ ಬ್ರಿಟಿಷ್ ವಸಾಹತು ಸಂದರ್ಭದಲ್ಲಿ ಇಡೀ ಭೂಮಿಯನ್ನು ಅಲ್ಪಸಂಖ್ಯಾತ ಮೇಲ್ವರ್ಗದ ಜನರ ಆಸ್ತಿಯನ್ನಾಗಿ ಪರಿವರ್ತಿಸಲಾಯಿತು. ಅರಣ್ಯದ ಇಡೀ ಕೃಷಿ ಯೋಗ್ಯ ಭೂಮಿ ಬ್ರಿಟಿಷರ ಕಾಲದಲ್ಲಿ ಸಾಂಬಾರು ಪದಾರ್ಥಗಳನ್ನು ಮತ್ತು ಕಾಫಿ, ಕೋಕೋ, ನೀಲಿ, ಚಹಾ ಇತ್ಯಾದಿ ವಾಣಿಜ್ಯ ಬೆಳೆಗಳನ್ನು ಬೆಳೆಯುವ ತೋಟಗಳಾಗಿ ಪರಿವರ್ತಿತವಾದವು. ಅವುಗಳ ಮಾಲೀಕತ್ವ ಉಳ್ಳವರ ಪಾಲಾಯಿತು. ಉಳಿದ ಅರಣ್ಯ ಭೂಮಿ ಬ್ರಿಟಿಷರು ರಚಿಸಿದ ಅರಣ್ಯ ಇಲಾಖೆ ಅಧೀನಕ್ಕೆ ಒಳಪಟ್ಟಿತು. ಅದುವರೆಗೆ ಅರಣ್ಯಭೂಮಿಗೆ ಯಾರೂ ಅಧಿಪತಿಗಳಿಲ್ಲ ಎಂಬ ಆದಿವಾಸಿಗಳ ವಿಶ್ವಾಸ ಕುಂದಿಹೋಯಿತು. ಅವರೆಲ್ಲ ಭೂಮಾಲೀಕರ ಮತ್ತು ಅರಣ್ಯ ಇಲಾಖೆಯ ಕೈಕೆಳಗಿನ ಕೂಲಿಕಾರರಾಗಿ ಅಥವಾ ಅವರ ಜೀತದಾಳುಗಳಾಗಿ ಪರಿವರ್ತಿತವಾದರು. ಇದು ದುರಂತವೇ ಸರಿ.

ಈ ಹಿನ್ನೆಲೆಯಲ್ಲಿ ೨೦೦೬ರ ಅರಣ್ಯ ಹಕ್ಕುಗಳ ಮಾನ್ಯ ಮಾಡುವ ಮಸೂದೆಯ ಮೇಲಿನ ಚರ್ಚೆಯು ಕೇಂದ್ರೀಕರಿಸಲ್ಪಟ್ಟಿರುವುದು ಅರಣ್ಯ ಪ್ರದೇಶದಲ್ಲಿ ಎಷ್ಟು ಭೂಮಿ ಸಾಗುವಳಿಗೆ ಒಳಪಟ್ಟಿದೆ ಎಂಬುದಾಗಿದೆ. ಒಂದು ಆದಿವಾಸಿ ಕುಟುಂಬದ ಜೀವನ ನಿರ್ವಹಣೆಗೆ ಎಷ್ಟು ಭೂಮಿ ಬೇಕು ಅಥವಾ ಎಷ್ಟು ಭೂಮಿ ಇದೆ ಎಂಬುದನ್ನು ಮೊದಲು ನಿರ್ಧರಿಸಬೇಕಾಗಿದೆ. ಏಕೆಂದರೆ "ಆದಿವಾಸಿಗಳ ಭೂ ಹಿಡುವಳಿಗಳನ್ನು ನೋಡಿದಾಗ ೨ ಹೆಕ್ಟೇರ್‌ಗಿಂತ ಕಡಿಮೆ ಇರುವುದು ಕಂಡು ಬರುತ್ತದೆ. ೨೧.೧ ಪ್ರತಿಶತ ಭೂರಹಿತರಿದ್ದರೆ, ೪೬.೦ % ಒಂದು ಹೆಕ್ಟೇರ್ ಭೂಮಿ ಉಳ್ಳವರಾಗಿದ್ದಾರೆ, ೧೭.೭% ೨ ರಿಂದ ೩ ಹೆಕ್ಟೇರ್ ಹೊಂದಿದ್ದರೆ, ೯.೭% ಜನರು ೪ ರಿಂದ ೫ ಹೆಕ್ಟೇರ್ ಹೊಂದಿದ್ದಾರೆ,

೫.೭% ಜನರು ೬ ರಿಂದ ೧೦ ಹೆಕ್ಟೇರ್ ಭೂಮಿ ಹೊಂದಿದ್ದಾರೆ, ೧.೪% ಜನರು ೧೦ ಹೆಕ್ಟೇರ್ ಗಿಂತ ಹೆಚ್ಚು ಭೂಮಿ ಹೊಂದಿದ್ದಾರೆ."[೧]

ಇವುಗಳ ಆಧಾರದ ಮೇಲೆ ಕರಡು ಮಸೂದೆ ೨೦೦೫ ರಲ್ಲಿ ೨.೫ ಹೆಕ್ಟೇರ್ ಭೂಮಿಯನ್ನು ಪ್ರತಿಯೊಂದು ಆದಿವಾಸಿ ಕುಟುಂಬಕ್ಕೆ ಮಿತಿ ಗೊಳಿಸಿತ್ತು. ಆದರೆ ಇದು ಭೂಮಿಯ ಫಲವತ್ತತೆಯನ್ನು ಆಧರಿಸಿರುವುದರಿಂದ ಕೆಲವರು ಫಲವತ್ತಲ್ಲದ ಭೂಮಿಯನ್ನು ಹೆಚ್ಚು ಅವಲಂಭಿಸಿರುತ್ತಾರೆ ಆದುದರಿಂದ ಭೂ ಮಿತಿಯನ್ನು ತೆಗೆದು ಹಾಕಿ ನಿಜವಾಗಿ ಎಷ್ಟು ಉಳಿಮೆ ಮಾಡುತ್ತಿರುತ್ತಾರೋ ಅಷ್ಟನ್ನೂ ಕೊಡುವುದಕ್ಕೆ ಜಂಟೀ ಸಂಸದೀಯ ಸಮಿತಿ ಶಿಫಾರಸ್ಸು ಮಾಡಿದೆ.

**೩.೩.೩.೩. ಆದಿವಾಸಿ ಹಕ್ಕುಗಳು ಮತ್ತು ಸಾಂಪ್ರದಾಯಿಕತೆ ಪ್ರಶ್ನೆಗಳು**

ಸಾಂಪ್ರದಾಯಿಕ ಹಕ್ಕುಗಳು ಆದಿವಾಸಿ ಹಕ್ಕುಗಳಲ್ಲಿ ಪ್ರಮುಖವಾದವು. ಮತ್ತು ಭಾರತೀಯ ಪರಿಸರ ಚಳುವಳಿಗಳಲ್ಲಿ ಹೆಚ್ಚು ಚರ್ಚೆಗೆ ಒಳಪಟ್ಟಿವೆ. ಅತೀ ಹೆಚ್ಚು ಸಂಘಟನೆಗಳು ಹೇಳುವುದೇನೆಂದರೆ ಸಾಂಪ್ರದಾಯಿಕ ಪರಿಸ್ಥಿತಿಯು ಹೆಚ್ಚು ಆಧಾರಯುಕ್ತ ಮತ್ತು ಸಮಾನತಾ ಪ್ರತಿಪಾದಕವಾಗಿವೆ. ಇವು ನಿಜವಾಗಿಯೂ ಅರಣ್ಯ ಸಂರಕ್ಷಣೆಗೆ ಸಹಾಯಕವಾಗುತ್ತವೆ.

ಜಂಟೀ ಸಂಸದೀಯ ಸಮಿತಿಯ ತಿದ್ದುಪಡಿ ಮಸೂದೆಯಲ್ಲಿಯೂ 'ವಾಣಿಜ್ಯ ಬಳಕೆ' ಮತ್ತು 'ಸಾಂಪ್ರದಾಯಿಕ ಅರಣ್ಯ ಬಳಕೆ' ಮಧ್ಯ ವ್ಯತ್ಯಾಸ ಗುರುತಿಸಲಾಯಿತು. ವಿಶೇಷವಾಗಿ ಅರಣ್ಯ ಮತ್ತು ಅರಣ್ಯದಂಚಿನ ಹಳ್ಳಿಗಳ ಗಡಿ ಪ್ರದೇಶದ ಅರಣ್ಯ ಕಿರು ಉತ್ಪನ್ನಗಳ ಬಳಕೆ ಮುಂದುವರೆಸಿ ಮಸೂದೆಯಲ್ಲಿ ಸಮುದಾಯ ಹಕ್ಕುಗಳು ಮತ್ತು ಅಧಿಕಾರ ಎರೆಡನ್ನೂ ಕೊಡಲಾಯಿತು. ಇದು ಸಾಂಪ್ರದಾಯಿಕ ವಿಧಾನದ ಅರಣ್ಯ ಸಂರಕ್ಷಣೆ ಮತ್ತು ಪುನರ್‌ರಚನೆ. ಇದರ ಜೊತೆಗೆ ಸಾಂಪ್ರದಾಯಿಕ ಅಧಿಕಾರ ಸಂಸ್ಥೆಗಳನ್ನು ಗುರುತಿಸಲಾಗಿದೆ. ಮತ್ತು ಇತರೆ ಯಾವುದೇ ಸಾಂಪ್ರದಾಯಿಕ ಹಕ್ಕುಗಳನ್ನು ಅನುಭವಿಸುವ ಅಧಿಕಾರವನ್ನು ಅರಣ್ಯವಾಸಿಗಳು ಹೊಂದಿದ್ದಾರೆ. ಅಲ್ಲದೇ ರಾಜ್ಯದ ಇತರೆ ಯಾವುದೇ ಕಾನೂನು ಕೊಡಮಾಡಿದ ಹಕ್ಕುಗಳು, ಜಿಲ್ಲಾ ಸ್ವಾಯತ್ತ ಪರಿಷತ್ತು ನಿಗದಿಪಡಿಸಿದ ಹಕ್ಕುಗಳು, ಮಹಿಳೆಯು ಕುಟುಂಬದ ಮುಖ್ಯಸ್ಥಳಾಗಿರುವ ಕುಟುಂಬ ನಿಗದಿ ಪಡಿಸಿದ ಹಕ್ಕುಗಳನ್ನು ಈ ಮಸೂದೆಯಲ್ಲಿ ಕೊಡಮಾಡಲಾಗಿತ್ತು. ಆದರೆ ಸಾಂಪ್ರದಾಯಿಕ ಸಂಸ್ಥೆಗಳು ನಿಗದಿಪಡಿಸಿದ ಸಾಂಪ್ರದಾಯಿಕ ಹಕ್ಕುಗಳ ಬಗ್ಗೆ ವಿಮರ್ಶೆ ಮಾಡಲಾಯಿತು. ವಾಡಿಕೆಯ ಮತ್ತು ಸಾಂಪ್ರದಾಯಿಕ ಸಂಸ್ಥೆಗಳು ಊಳಿಗಮಾನ್ಯ ಪದ್ಧತಿಯಾಗುವ ಸಂದರ್ಭ ಹೊಂದಿರುತ್ತವೆ ಎಂದು ವಾದ ಮಾಡಲಾಯಿತು.

### ೩.೩.೩.೪. ಅರಣ್ಯ ನಿರ್ವಹಣೆಯ ಪ್ರಜಾ ಪ್ರಭುತ್ವೀಕರಣ

ಈ ಮಸೂದೆಯ ಒಂದು ಅತ್ಯಂತ ಪ್ರಮುಖ ಕೊಡುಗೆಯೆಂದರೆ ಅರಣ್ಯ ನಿರ್ವಹಣೆಯಲ್ಲಿ ಪ್ರಜಾಪ್ರಭುತ್ವವನ್ನು ಅಳವಡಿಸಿಕೊಂಡಿರುವುದು ಮತ್ತು ಸ್ಥಳೀಯ ಸಂಸ್ಥೆಗಳೊಂದಿಗೆ ಅಧಿಕಾರಗಳನ್ನು ಹಂಚಿರುವುದು. ಮೇಲಿಂದ ಮೇಲೆ ಆದಿವಾಸಿ ಸಮುದಾಯದ ಹಕ್ಕುಗಳಿಗಾಗಿ ಚಳುವಳಿಗಳು ನಡೆಯುತ್ತಿದ್ದು ಇವುಗಳನ್ನು ಪ್ರತಿನಿಧಿಸಲು ಗ್ರಾಮ ಮಟ್ಟದ ಸಂಸ್ಥೆಗಳು ಸೂಕ್ತ ಏಕೆಂದರೆ ಸ್ಥಳಿಯ ಆದಿವಾಸಿ ಸಮುದಾಯದ ಆಸಕ್ತಿಗಳು ಇವುಗಳಿಗೆ ಗೊತ್ತಿರುತ್ತದೆ. ೨೦೦೫ರ ಕರಡು ಮಸೂದೆಯಲ್ಲಿ ಸ್ಪಷ್ಟವಾಗಿ ಹೇಳಿರುವುದೆಂದರೆ ಗ್ರಾಮ ಸಭೆಯು ತನ್ನ ನಿರ್ದಿಷ್ಟ ಅಧಿಕಾರ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸಲು ಅಧಿಕಾರ ಹೊಂದಿದೆ.

ಜಂಟೀ ಸಂಸದೀಯ ಸಮಿತಿಯು ಗ್ರಾಮ ಸಭೆಯನ್ನು ಅಧಿಕಾರಯುತಗೊಳಿಸುವ ಮುಖಾಂತರ ಆದಿವಾಸಿ ಚಟುವಟಿಕೆಗಳು ಮತ್ತು ಭಾವನೆಗಳನ್ನು ಗೌರವಿಸಿದೆ. ಹಕ್ಕುಗಳನ್ನು ಗುರುತಿಸುವುದು ಮತ್ತು ನಿರ್ಧರಿಸುವಲ್ಲಿ ಗ್ರಾಮ ಸಭೆಯು ಪ್ರಾಥಮಿಕ ಅಧಿಕಾರವನ್ನು ಹೊಂದಿದೆ.

ಮೇಲ್ಮಟ್ಟದ ಸಮಿತಿಗಳು ಗ್ರಾಮ ಸಭೆಗೆ ತಾಂತ್ರಿಕ ಮತ್ತು ಮೇಲ್ವಿಚಾರಣೆ ಬೆಂಬಲವನ್ನು ನೀಡುತ್ತಿವೆ. ಪಂಚಾಯಿತಿಯ ವಿವಿಧ ಸದಸ್ಯರ ನಡುವೆ ಉದ್ಭವಿಸುವ ಎಲ್ಲೆ (ಗಡಿ) ಮತ್ತು ಹಕ್ಕುಗಳಿಗೆ ಸಂಬಂಧಿಸಿದ ಬಿಕ್ಕಟ್ಟುಗಳನ್ನು ಬಗೆ ಹರಿಸಲು ಸಹಾಯ ಮಾಡುತ್ತವೆ.

### ೩. ೪. ೨೦೦೬ ರ ಅರಣ್ಯ ಹಕ್ಕುಗಳ ಕಾಯಿದೆ ಉದ್ದೇಶಗಳು ಮತ್ತು ಸ್ವರೂಪ

ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ ಮಸೂದೆಯ ಮೇಲೆ ಹಲವು ಚರ್ಚೆಗಳು ಏರ್ಪಟ್ಟವು. ವಾದ ಪ್ರತಿವಾದ ಆಲಿಸಲಾಯಿತು. ಅಂತಿಮವಾಗಿ ೨೦೦೬ ರಲ್ಲಿ ಈ ಮಸೂದೆಯನ್ನು ಸಂಸತ್ತಿನಲ್ಲಿ ಅಂಗೀಕರಿಸಿ ಕಾಯಿದೆ ರೂಪ ನೀಡಲಾಯಿತು. ಇದರ ಮುಖ್ಯ ಉದ್ದೇಶ ಆದಿವಾಸಿ ಮತ್ತು ಅರಣ್ಯವಾಸಿಗಳಿಗೆ ಆಗಿರುವ ಐತಿಹಾಸಿಕ ಅನ್ಯಾಯವನ್ನು ಸರಿಪಡಿಸುವುದರಲ್ಲಿ ಹೆಚ್ಚು ಗಮನ ಹರಿಸಿರುವುದೆಂದರೆ ಅರಣ್ಯವಾಸಿಗಳು, ಅರಣ್ಯ ಅವಲಂಭಿತ ಆದಿವಾಸಿಗಳು ಮತ್ತು ಇತರೆ ಸಮುದಾಯಗಳ ಗ್ರಾಹಕ ಹಕ್ಕುಗಳನ್ನು ಪರಿಗಣಿಸುವುದು. ಜೊತೆಗೆ ವನ್ಯಪ್ರಾಣಿ, ಪರಿಸರ ವ್ಯವಸ್ಥೆ ಮತ್ತು ಅರಣ್ಯವನ್ನು ಅವರ ಸುಪರ್ಧಿನಲ್ಲಿ ಸಂರಕ್ಷಿಸುವುದು. ಮತ್ತು ಅಭಿವೃದ್ಧಿ ಪಡಿಸುವುದು.

ಈ ಕಾಯಿದೆಯ ಪೂರ್ವ ಪೀಠಿಕೆಯಲ್ಲಿ ಹೇಳಿರುವಂತೆ. ತಲೆತಲಾಂತರಗಳಿಂದಲೂ ಅರಣ್ಯದಲ್ಲಿ ಬದುಕುತ್ತಿರುವ ಆದಿವಾಸಿಗಳು ಮತ್ತು ಇತರೆ ಸಾಂಪ್ರದಾಯಿಕ ಅರಣ್ಯ

ಅವಲಂಭಿತರು ತಾವು ಉಪಭೋಗಿಸುತ್ತಿದ್ದ ಅರಣ್ಯ ಭೂಮಿ ತಮ್ಮ ಸ್ವಂತದ್ದೆಂದು ಪ್ರತಿಪಾದಿಸಿಲ್ಲ. ಹಾಗಂತ ಅವರು ಇದರ ಫಲಾನುಭವಿಗಳಲ್ಲ ಎಂದು ತಿರಸ್ಕರಿಸುವಂತಿಲ್ಲ. ಆದರೆ ಇವರೆಲ್ಲರನ್ನೂ ಒಂದು ಚೌಕಟ್ಟಿಗೆ ಒಳಪಡಿಸಿ ಅವರಿಗೆ ಭೂಮಿ ನೀಡುವ ಜರೂರತ್ತು ಇದೆ ಎಂಬ ಭರವಸೆ ನೀಡಿತು. ಈ ಕಾಯಿದೆ ಅರಣ್ಯ ಬಳಕೆಯು ಅರಣ್ಯ ಸಂರಕ್ಷಣೆಯ ನಿಟ್ಟಿನಲ್ಲಿರಬೇಕೆಂದು ವಿಚಾರಮಾಡಿತು. ಜೀವವೈವಿಧ್ಯ ಸಂರಕ್ಷಣೆ ಮತ್ತು ನಿರ್ವಹಣೆಯಿಂದ ಪರಿಸರ ವ್ಯವಸ್ಥೆ ಸರಿದೂಗುತ್ತದೆ. ಮತ್ತು ಬಲವಾಗುತ್ತದೆ. ಜೊತೆಗೆ ಪಾರಂಪರಿಕ ಅರಣ್ಯವಾಸಿ ಮತ್ತು ಅರಣ್ಯ ಅವಲಂಬಿಗಳಿಗೆ ತಮ್ಮ ದೈನಂದಿನ ಜೀವನಾಧರಕ್ಕೆ ಒತ್ತಾಸೆಯಾಗಿರುತ್ತದೆ. ಮತ್ತು ಅವರ ಆಹಾರ ಭದ್ರತೆಗೆ ಬುನಾದಿಯಾಗಬಲ್ಲದು ಎಂಬ ಆಶಯ ಹೊಂದಿದೆ.

ಈ ಹಿನ್ನೆಲೆಯಲ್ಲಿ "ಅನುಸೂಚಿತ ಪ್ರದೇಶಗಳಲ್ಲಿ ಸಾಂಪ್ರದಾಯಿಕವಾಗಿ ವಾಸಿಸುತ್ತಾ ಬಂದ ಪರಿಶಿಷ್ಟ ಪಂಗಡ ಮತ್ತು ಅರಣ್ಯ ವಾಸಿಗಳು ತಮ್ಮ ನೆಲದ ಜತೆ ಭಾವನಾತ್ಮಕ ಸಂಬಂಧವನ್ನು ಮುಂದುವರೆಸಿಕೊಂಡು ಹೋಗುವ ಎಲ್ಲಾ ಹಕ್ಕುಗಳನ್ನು ಪಡೆದಿದ್ದಾರೆ. ಕೃಷಿಯ ಜತೆಗೆ ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ಮಾರಾಟ ಮಾಡಿಕೊಂಡು ಜೀವನ ನಿರ್ವಹಣೆ ಮಾಡುವ ಹಕ್ಕನ್ನೂ ಹೊಂದಿದ್ದಾರೆ. ಅರಣ್ಯ ಉತ್ಪನ್ನಗಳ ಬಳಕೆ ಮತ್ತು ಅರಣ್ಯ ಭೂಮಿಯಲ್ಲಿ ಬೇಸಾಯ ಮಾಡುವ ಅರಣ್ಯ ವಾಸಿಗಳ ಸಾಂಪ್ರದಾಯಿಕ ಹಕ್ಕನ್ನು ರಕ್ಷಿಸುವ ಉದ್ದೇಶದ ಅರಣ್ಯ ಹಕ್ಕುಗಳ ಕಾಯಿದೆ ಸೂಕ್ತವಾಗಿದೆ."[೨] ಮತ್ತು "ಅರಣ್ಯವಾಸಿಗಳಿಂದಲೇ ಅರಣ್ಯ ಸಂರಕ್ಷಣೆಯಾಗುತ್ತದೆ ಮತ್ತು ಅಭಿವೃದ್ಧಿ ಹೊಂದುತ್ತದೆ ಎಂಬುದನ್ನು ನಾವು ತಡವಾಗಿಯಾದರೂ ಅರ್ಥ ಮಾಡಿಕೊಂಡಿದ್ದೇವೆ. ಅರಣ್ಯ ಹಕ್ಕುಗಳ ಕಾಯಿದೆ ಸಹ ಬುಡಕಟ್ಟು ಜನರ ದೀರ್ಘ ಕಾಲದ ಬೇಡಿಕೆಯನ್ನು ಈಡೇರಿಸುವುದರಲ್ಲಿ ಸಫಲವಾಗಿದೆ"[೩] ಎಂದು ಅಭಿಪ್ರಾಯ ಪಟ್ಟಿರುವುದು ಮಹತ್ವವಾಗಿದೆ.

ಪ್ರಸ್ತುತ ೨೦೦೬ರ ರಾಷ್ಟ್ರೀಯ ಆದಿವಾಸಿ ನೀತಿಯಲ್ಲಿ ಹಲವು ವಿಭಾಗಗಳನ್ನು ಮಾಡಿದೆ. ಮುಖ್ಯವಾಗಿ ೧) ಸಾಮಾನ್ಯ ಶಿಕ್ಷಣ ೨) ಪಾರಂಪರಿಕ ಜ್ಞಾನ ೩) ಆರೋಗ್ಯ ೪) ಸ್ಥಳಾಂತರ ಮತ್ತು ಪುನರ್ವಸತಿ ೫) ಅರಣ್ಯ ಗ್ರಾಮಗಳು ೬) ಚಲನಾತ್ಮಕ ಬೇಸಾಯ ಪದ್ಧತಿ ೭) ಭೂ ಪರಾಧೀನತೆ ಕೊನೆಗೊಳಿಸುವುದು ೮) ಭಾವನಾತ್ಮಕ ಆಸ್ತಿ ಹಕ್ಕುಗಳು ೯) ಭಾಷೆ ೧೦) ಪುರಾತನ ಬುಡಕಟ್ಟು ಗುಂಪುಗಳು ೧೧) ಪರಿಶಿಷ್ಟ ಪಂಗಡಗಳು ಮತ್ತು ಪ್ರದೇಶಗಳು ೧೨) ಆಡಳಿತ ಮತ್ತು ಸಂಶೋಧನೆ. ಹೀಗೆ ಇದರ ಮುಖಾಂತರ ಬುಡಕಟ್ಟು ಸಮುದಾಯಗಳ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸುವುದನ್ನು ತನ್ನ ಉದ್ಧೇಶವನ್ನಾಗಿಸಿಕೊಂಡಿದೆ.

## ೩.೫. ಅರಣ್ಯ ಹಕ್ಕುಗಳ ಕಾಯಿದೆ ಹಾಗೂ ಸಾರ್ವಜನಿಕ ಚರ್ಚೆ

ಐತಿಹಾಸಿಕ 'ಪರಿಶಿಷ್ಟ ಪಂಗಡ ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳ ಕಾಯಿದೆ ೨೦೦೬' ಇದನ್ನು 'ಅರಣ್ಯ ಹಕ್ಕುಗಳ ಕಾಯಿದೆ' ಎಂದೂ ಕರೆಯಲಾಗಿದೆ. ಅರಣ್ಯ ಮತ್ತು ಅರಣ್ಯದ ಅಂಚಿನಲ್ಲಿ ಅದರ ಉಪ ಉತ್ಪನ್ನಗಳನ್ನು ಅವಲಂಬಿಸಿ ಜೀವನ ನಡೆಸುತ್ತಿರುವ ಜನರ ಮತ್ತು ಅರಣ್ಯದ ನಡುವಿನ ಬಾಂಧವ್ಯವನ್ನು ಅರ್ಥೈಸಿಕೊಳ್ಳುವುದು ಅತೀ ಅವಶ್ಯಕವಾಗಿದೆ. ಒಂದೆಡೆ ಅರಣ್ಯದಲ್ಲಿಯೇ ವಾಸಮಾಡುತ್ತಿರುವ ಆದಿವಾಸಿಗಳನ್ನು ಅರ್ಥೈಸಿಕೊಳ್ಳಬೇಕಿದೆ. ಹಾಗೆಯೇ ಮತ್ತೊಂದೆಡೆ ಇತರೆ ಪಾರಂಪರಿಕ ಅರಣ್ಯ ಅವಲಂಬಿತರು ಮತ್ತು ಅರಣ್ಯದ ಮೇಲಿನ ಅವರ ಅವಲಂಬನೆಯನ್ನು ನೋಡುವುದು ಅತೀ ಅವಶ್ಯಕವಾಗಿದೆ. ಏಕೆಂದರೆ ಕಳೆದ ಹಲವು ವರ್ಷಗಳಿಂದ ಈ ಸಂಬಂಧಗಳಲ್ಲಿ ಹಲವು ಬದಲಾವಣೆಗಳಾಗಿವೆ. ಅಲ್ಲದೆ ಈ ಕಾಯಿದೆಯಿಂದ ಹಲವು ಬದಲಾವಣೆಗಳು ಆಗಬಹುದಾಗಿದೆ. ಏನೇ ಆದರೂ ಅರಣ್ಯದ ಮೇಲೆ ಅವರಿಗೆ ಸಂಪೂರ್ಣ ಅಧಿಕಾರ ಬೇಕಾಗಿದೆ. ಏಕೆಂದರೆ "ಕಾಡಿನ ಮೇಲೆ ಅಧಿಕಾರ ಸಿಕ್ಕಾಗಲೇ ಆದಿವಾಸಿಗಳು ಅರಣ್ಯ ಮಾತೆಯ ಮಡಿಲಲ್ಲಿ ಮತ್ತೆ ಹಾಯಾಗಿ ಜೀವಿಸಬಲ್ಲರು"[೪]

ಅರಣ್ಯವಾಸಿಗಳು, ಜೊತೆಗೆ ಹೆಚ್ಚಿನ ಸಂಖ್ಯೆಯಲ್ಲಿರುವ ಆದಿವಾಸಿಗಳು, ಸಮಾಜದಲ್ಲಿ ಕಡು ಬಡತನ ಮತ್ತು ಅಂಚಿಗೆ ತಳ್ಳಲ್ಪಟ್ಟ ಸಮುದಾಯಗಳಿಗೆ ಅರಣ್ಯ ಅತೀ ಮುಖ್ಯ ಆಶ್ರಯ ತಾಣ. ಸ್ವತಂತ್ರ ಭಾರತದಲ್ಲಿ ಭೂಪರಾಧಿನತೆ, ಭೂ ಋಣಭಾರ, ಅರಣ್ಯ ಗುತ್ತಿಗೆ ನೀತಿ, ಅಭಿವೃದ್ಧಿ ಹೆಸರಿನಲ್ಲಿ ಒತ್ತಾಯ ಪೂರ್ವಕ ಸ್ಥಳಾಂತರ ಮುಂತಾದ ಎಲ್ಲಾ ಸಮಸ್ಯೆಗಳನ್ನು ಇವರು ಎದುರಿಸುತ್ತಲೇ ಇದ್ದಾರೆ. "ದೇಶದ ಅಭಿವೃದ್ಧಿಗಾಗಿ ಭಯಾನಕ ಡ್ಯಾಮುಗಳನ್ನು ಕಟ್ಟುವಾಗ ಎಂತಹುದ್ದೋ ಕಾರ್ಖಾನೆಯೊಂದು ತಲೆ ಎತ್ತುವಾಗ ಸರ್ಕಾರ ಸುಲಭವಾಗಿ ಬಲಿಕೊಡುವ ಪ್ರದೇಶಗಳು ಬಹುತೇಕ ಆದಿವಾಸಿಗಳು ದಟ್ಟವಾಗಿ ವಾಸಿಸುವ ಪ್ರದೇಶಗಳೇ ಆಗಿರುತ್ತದೆ. ಆದಿವಾಸಿ ಸಮುದಾಯಗಳ ಉತ್ಪಾದನಾ ಚಟುವಟಿಕೆಗಳು ಬಹುತೇಕ ಭೂಮಿಯನ್ನೇ ನೆಚ್ಚಿಕೊಂಡಿರುವ ಕಾರಣಕ್ಕಾಗಿ, ಭೂಮಿಯನ್ನು ಉಳಿಸಿಕೊಳ್ಳುವ ಮತ್ತು ಕಳೆದುಕೊಳ್ಳುವ ಅವರ ಎಲ್ಲ ಪ್ರಯತ್ನಗಳು ಜೀವನ್ಮರಣದ ಪ್ರಶ್ನೆಗಳಾಗಿಯೇ ಎದುರು ನಿಲ್ಲುತ್ತವೆ."[೫] ಪರಿಸ್ಥಿತಿ ಹೀಗಿರುವಾಗ ಒಂದು ದಶಕಕ್ಕಿಂತಲೂ ಹೆಚ್ಚಿನ ಸಮಯದ ಅರಣ್ಯ ಸಂರಕ್ಷಣಾ ವಾದಿಗಳು ಮತ್ತು ಆದಿವಾಸಿ ಹಕ್ಕುಗಳ ಹೋರಾಟಗಾರರ ಪ್ರತಿದ್ವಂದ್ವಿ ಹೋರಾಟದ ನಂತರ ಪರಿಶಿಷ್ಟ ಪಂಗಡ ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಕಾಯಿದೆ ೨೦೦೬, ಡಿಸೆಂಬರ್ ೩೧ ೨೦೦೭ ರಲ್ಲಿ ಜಾರಿಗೆ ಬಂದಿದೆ. ಇದರ ಮುಖ್ಯ ಧ್ಯೇಯ ಅರಣ್ಯ ಹಕ್ಕುಗಳನ್ನು ಅರಣ್ಯ ಅವಲಂಭಿತರಿಗೆ ಬಿಟ್ಟುಕೊಡುವುದು. ಮತ್ತು ಈ ಮುಖಾಂತರ ಸಮುದಾಯ ಭಾಗಿಯೊಂದಿಗೆ ಹೊಸ ರೀತಿ ಮತ್ತು ಮಾದರಿಯಲ್ಲಿ ಅರಣ್ಯ ಸಂರಕ್ಷಣೆ ಮಾಡುವುದು.

ಭಾರತೀಯ ಆದಿವಾಸಿಗಳು ತಲೆತಲಾಂತರದಿಂದ ಕುಮ್ರಿ ಬೇಸಾಯ/ಸ್ಥಳಾಂತರ ಬೇಸಾಯ ಮಾಡುತ್ತಾ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುತ್ತಾ ಅರಣ್ಯದಲ್ಲಿ ವಾಸಿಸುತ್ತಾ ಬಂದಿದ್ದಾರೆ. ಅವರ ಪಾರಂಪರಿಕ ಹಕ್ಕುಗಳು ಇಲ್ಲಿಯವರೆಗೆ ಯಾವುದೇ ರೀತಿಯಲ್ಲಿ ಗುರುತಿಸಿಲ್ಲ. ಮತ್ತು ದಾಖಲಿಸಿಲ್ಲ. ಈ ಕಾಯಿದೆ ಇದನ್ನು ಗುರುತಿಸಿ ಕಾನೂನಾತ್ಮಕವಾಗಿ ಹಕ್ಕುಗಳನ್ನು ದೊರಕಿಸಿಕೊಡುವ ನಿಟ್ಟಿನಲ್ಲಿ ರಚಿಸಲಾಗಿದೆ. ಏಕೆಂದರೆ, "ಕೇವಲ ಬರೀ ಹೊರಗಿನ ಆಕ್ರಮಣಕಾರರು ಮಾತ್ರವಲ್ಲ. ಪ್ರಜೆಗಳಿಗಾಗಿ, ಪ್ರಜೆಗಳಿಗೋಸ್ಕರವೆಂದು ಹೇಳಿಕೊಂಡು ಬಂದ ವ್ಯವಸ್ಥೆಯು ಆದಿವಾಸಿಗಳನ್ನು ಪ್ರಾಣಿಗಳಿಗೂ ಕಡೆಯಾಗಿ ಒಕ್ಕಲೆಬ್ಬಿಸಿ ಅವರ ಭೂಮಿಗಳನ್ನು ಆಕ್ರಮಿಸಿಕೊಂಡಿದೆ."[೬] ಇಂತಹ ಹಿನ್ನೆಲೆಯಲ್ಲಿ ಆದಿವಾಸಿ ಹಕ್ಕುಗಳ ಹೋರಾಟಗಾರರು, ಆದಿವಾಸಿಗಳಿಗಾಗಿರುವ ಐತಿಹಾಸಿಕ ಅನ್ಯಾಯವನ್ನು ಸರಿಪಡಿಸುವ ಒಂದು ಅಸ್ತ್ರ ಎಂದೆ ಅಭಿಪ್ರಾಯಪಟ್ಟಿದ್ದಾರೆ. ಆದರೆ ಇನ್ನೊಂದೆಡೆ ಪರಿಸರವಾದಿಗಳು ಈ ಯೋಜನೆ ಪರಿಸರ ವ್ಯವಸ್ಥೆಗೆ ತೊಂದರೆದಾಯಕ ಎಂಬ ವಾದ ಮಂಡಿಸುತ್ತಾರೆ. ಇವರ ವಾದ ಭೂಮಿಯ ಹಕ್ಕು ನೀಡುವಲ್ಲಿ ಮಿತಿ ಮೀರಿದ ಅರಣ್ಯ ಬಳಕೆಯಾಗುತ್ತದೆ. ಹಾಗೂ ಇದು ನಿಸರ್ಗದ ಮೇಲೆ ಪ್ರತಿಕೂಲ ಪರಿಣಾಮ ಉಂಟು ಮಾಡುತ್ತದೆ ಎಂಬುದಾಗಿದೆ. ಆದರೆ ಆದಿವಾಸಿಗಳ ಕಲ್ಯಾಣ ಮತ್ತು ಅರಣ್ಯ ಸಂರಕ್ಷಣೆ ಬೇರೆ ಬೇರೆ ಎಂದು ತಿಳಿಯುವುದಾಗಲಿ ಅಥವಾ ಅವೆರಡೂ ವಿರುದ್ಧ ಗುರಿಗಳು ಎಂದು ತೀರ್ಮಾನಿಸುವಂತಿಲ್ಲ.

**೩.೫.೧. ಕಾಯಿದೆಯ ಬಗೆಗಿನ ಸಾಮಾಜಿಕ ಮತ್ತು ಪರಿಸರ ವಾದ ಸರಣಿ**

ಅರಣ್ಯ ಹಕ್ಕುಗಳ ಕಾಯಿದೆ ಕುರಿತು ಹಲವು ವಾದ ಸರಣಿಗಳು ಹುಟ್ಟಿಕೊಂಡವು. ಇಂತಹ ಪರ ವಿರೋಧಗಳನ್ನು ಇಲ್ಲಿ ಚರ್ಚಿಸಲಾಗಿದೆ.

**೩.೫.೧.೧. ಐತಿಹಾಸಿಕ ಅನ್ಯಾಯ ಸರಿಪಡಿಸುವುಕೆ**

ತಲೆ ತಲಾಂತರದಿಂದ ಆದಿವಾಸಿಗಳು ಅರಣ್ಯವನ್ನು ತಮ್ಮ ವಾಸಸ್ಥಾನ ಮಾಡಿಕೊಂಡಿದ್ದಾರೆ. ಕುಮ್ರಿ ಬೇಸಾಯ ಮತ್ತು ಅರಣ್ಯ ಉಪ ಉತ್ಪನ್ನಗಳನ್ನು ಸಂಗ್ರಹಿಸುತ್ತಾ ಬಂದಿದ್ದಾರೆ. ಈ ಜೀವನ ಪದ್ಧತಿಯಲ್ಲಿ ಜೈವಿಕ ಸಂಪನ್ಮೂಲ ಮತ್ತು ಅರಣ್ಯವಾಸಿಗಳ ನಡುವೆ ಒಂದು ಅವಿನಾಭಾವ ಸಂಬಂಧ ಬೆಳೆದಿದೆ. ಅವರನ್ನು ಅದರಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಅರಣ್ಯ ಪರಿಸರ ವ್ಯವಸ್ಥೆಯ ಉಳಿವು ಮತ್ತು ನಿರಂತರತೆಯಲ್ಲಿ ಆದಿವಾಸಿಗಳ ಪಾತ್ರ ಹಾಸುಹೊಕ್ಕಾಗಿದೆ. ಅವರಿಬ್ಬರೂ ಪರಸ್ಪರ ಬಿಟ್ಟು ಒಂಟಿಯಾಗಿ ಬದುಕುಳಿಯುವುದು ಸಾಧ್ಯವಿಲ್ಲ.

ಪರಿಸ್ಥಿತಿ ಹೀಗಿರುವಾಗ "ಆದಿವಾಸಿಗಳು ನಾವು ಇದರ ಸಾಂಪ್ರದಾಯಿಕ ಒಡೆಯರು ಎಂದು ಹೇಳಲು ಅವರ ಬಳಿ ಯಾವುದೇ ದಾಖಲೆಗಳಿರಲಿಲ್ಲ. ಇದು ರಾಜ್ಯದ ಕಣ್ಣಿಗೆ

ಇವರು ಅರಣ್ಯವನ್ನು ಅತಿಕ್ರಮಣ ಮಾಡಿದ್ದಾರೆ ಅಥವಾ ಕಾನೂನು ಬಾಹಿರ ಭೂ ಒಡೆಯರಾಗಿದ್ದಾರೆ ಎಂದು ತೀರ್ಮಾನಿಸಲು ಕಾರಣವಾಯಿತು. ಅಪಾರ ಸಂಖ್ಯೆಯ ಆದಿವಾಸಿಗಳು ಕಾನೂನಾತ್ಮಕ ದಾಖಲೆಗಳು ಇಲ್ಲದ ಒಂದೇ ಕಾರಣಕ್ಕಾಗಿ ತಮ್ಮದೇ ಆದ ಸಾಂಪ್ರದಾಯಿಕ ಹಕ್ಕುಳ್ಳ ಜಮೀನು ಮತ್ತು ಮನೆ ಬಿಟ್ಟು ಹೊರ ನಡೆಯ ಬೇಕಾಯಿತು. ಅವರ ಪೂರ್ವಜರ ಭೂಮಿಯನ್ನು ಹಲವಾರು ರೀತಿಯ ಅನ್ಯಾಯದ ಕಾನೂನು ಬಾಹಿರ ಕ್ರಮಗಳನ್ನು ಅನುಸರಿಸಿ ಕಿತ್ತುಕೊಳ್ಳಲಾಯಿತು."[೭] "ಅನಂತರ ಅವರು ನೆಲೆಯಿಲ್ಲದಂತಾದರು ಜೀವನಾಧಾರಕ್ಕೆ ಇತರೆ ಅವಲಂಬನೆ ಅನಿವಾರ್ಯವಾಯಿತು. ಅಭಿವೃದ್ಧಿ ಯೋಜನೆಗಳಿಂದಾಗಿ ನಿರಂತರ ಸ್ಥಳಾಂತರ ಮಾಡುತ್ತಾ ಯಾವುದೇ ಒಂದು ವ್ಯವಸ್ಥಿತ ಪುನರ್ವಸತಿ ಅಥವಾ ಜೀವನಾಧಾರ ಕಲ್ಪಿಸಿಕೊಡದೆ ಇದ್ದುದರಿಂದ ಅವರು ಕ್ಷೀಣಿಸುತ್ತಾ ಬಂದರು. ಅರಣ್ಯ ಉತ್ಪನ್ನಗಳ ಉಪಯೋಗದ ಅನಿಶ್ಚಿತತೆ ಅವರನ್ನು ಸಂಹರಿಸಿತು."[೮] "ಈ ಎಲ್ಲ ಅಂಶಗಳ ಮೇಲೆ ಬೆಳಕು ಚೆಲ್ಲಿದ್ದರಿಂದ ಕಾನೂನಾತ್ಮಕ, ನೈತಿಕ ನೆಲೆಯಲ್ಲಿ ಆದಿವಾಸಿಗಳು, ಪರಿಶಿಷ್ಟ ವರ್ಗದ ಭೂಮಿಯ ಹಕ್ಕುಗಳನ್ನು ಸಂರಕ್ಷಿಸಲು ಒಂದು ಬಲ ಬೇಕಾಗಿತ್ತು. ಅರಣ್ಯ ಹಕ್ಕುಗಳ ಮಾನ್ಯ ಮಾಡುವ ಕಾಯ್ದೆ – ೨೦೦೬. ಐತಿಹಾಸಿಕ ಅನ್ಯಾಯವನ್ನು ಸರಿಪಡಿಸುವ ಒಂದು ಮೆಟ್ಟಿಲಾಗಿ ಕಾಣುತ್ತದೆ. ಈ ಕಾಯ್ದೆ ಆದಿವಾಸಿಗಳಿಗೆ ಕಾನೂನಾತ್ಮಕ ಹಕ್ಕು ನೀಡುತ್ತದೆ ಎಂಬ ಭರವಸೆ ಇದೆ. ಇದರಿಂದ ಅವರು ಅರಣ್ಯ ಉಪ ಉತ್ಪನ್ನಗಳನ್ನು ಸಂಗ್ರಹಿಸುವ, ಹೊಂದುವ, ಉಪಯೋಗಿಸುವ ಮತ್ತು ಮಾರಾಟ ಮಾಡುವ ಹಕ್ಕನ್ನು ಪಡೆಯುತ್ತಾರೆ. ಹಾಗಾಗಿ ಅರಣ್ಯ ಇಲಾಖೆಯವರ ದೈಹಿಕ ಮತ್ತು ಮಾನಸಿಕ ಹಿಡಿತದಿಂದ ಬಿಡಿಸಿಕೊಂಡು ಐತಿಹಾಸಿಕ ನ್ಯಾಯ ಹೊಂದುವ ಅವಕಾಶ ಇದೆ."[೯] ಅದಕ್ಕಿಂತಲೂ ಮುಖ್ಯವಾಗಿ ಆರ್ಥಿಕ ಪ್ರಗತಿಯ ಹಾದಿಯಲ್ಲಿ ಭಾರತವು ಸ್ವಾತಂತ್ರ್ಯ ನಂತರ ಸಾಕಷ್ಟು ಹಾದಿ ಸವೆಸಿದೆ. ಮತ್ತು ಈಗ ವಿಶ್ವದ ಆರ್ಥಿಕ ಪ್ರಬಲ ರಾಷ್ಟ್ರಗಳಲ್ಲಿ ಭಾರತ ಕೂಡ ಒಂದು ಎಂದು ಬಿಂಬಿಸಲಾಗುತ್ತಿದೆ. ಇದು ಸಮಾಜದ ಎಲ್ಲಾ ಸ್ಥರದ ಜನರ ನಡುವೆ ಆದಾಯ ಹಂಚಿ ಹೋಗುವುದರಿಂದ ಕೆಲವೇ ಜನರ ಅಭಿವೃದ್ಧಿಯಾದರೆ ಸಾಲದು ಮತ್ತು ಕೆಲವೇ ಕ್ಷೇತ್ರಗಳಲ್ಲಿ ಅಭಿವೃದ್ಧಿ ಕಂಡರೆ ಸಾಲದು. ಕೃಷಿ, ಕೈಗಾರಿಕೆ, ಸೇವಾ ವಲಯ, ತಾಂತ್ರಿಕತೆ ಮತ್ತು ಮಾಹಿತಿ ತಂತ್ರಜ್ಞಾನಗಳಲ್ಲಿ ಅಭಿವೃದ್ಧಿ ಸಾದಿಸಿದರೆ ಸಾಲದು. ಪರಿಸರ ಸಮತೋಲನ ಕೂಡ ಬಹಳ ಮುಖ್ಯವಾಗಿದೆ. ಇದನ್ನು ಸರಿಪಡಿಸಲು ಆದಿವಾಸಿಗಳ ಬೆಂಬಲ ಅವಶ್ಯಕ ಈ ನಿಟ್ಟಿನಲ್ಲಿ ಈ ಕಾಯಿದೆ ಮುಖಾಂತರ ಅದನ್ನು ಸಾಧಿಸಲು ಹೊರಟಿದೆ ಎಂಬ ವಾದ ಮಂಡಿಸಲಾಗಿದೆ.

### ೩.೫.೧.೨. ಪರಿಸರ ಅಪಕರ್ಷ/ಹಾನಿ

ಅರಣ್ಯ ಹಕ್ಕುಗಳ ಕಾಯಿದೆ ಪ್ರತಿವಾದಿಗಳು ಎರೆಡು ಹಂತದಲ್ಲಿ ತಮ್ಮ ವಾದ ಸರಣಿ ಮಂಡಿಸುತ್ತಾರೆ. ಅರಣ್ಯದಿಂದ ಪರಿಸರಕ್ಕೆ ಆಗುವ ಅನುಕೂಲಗಳ ಕುರಿತು

ಪರಿಶೋಧಿಸುತ್ತಾರೆ. "ನಿಜವಾಗಿಯೂ ಅರಣ್ಯ ಕಾಯ್ದೆಗಳು ವಾತಾವರಣದ ಶಾಕ್-ಅಬ್ಸರ್‌ವರ್ಸ್. ಶಕ್ತಿಯುತ ಮಾನ್‌ಸೂನ್ ಮಾರುತಗಳನ್ನು ಶಾಂತಗೊಳಿಸುವಲ್ಲಿ ಮಹತ್ವದ ಪಾತ್ರವಹಿಸುತ್ತದೆ. ಭೂಮಿಯ ಮೆಲ್ಮೈಯನ್ನು ಎಲೆಗಳ ಹಾಸಿಗೆಯಿಂದ ಮುಚ್ಚಿ ಭೂಮಿ ಮೆತ್ತಗಿರುವಂತೆ ನೋಡಿಕೊಂಡು ಅದರ ಮುಖಾಂತರ ನೀರು ಹಿಂಗುವಂತೆ ಮಾಡುತ್ತದೆ. ಅರಣ್ಯದ ಅನುಪಸ್ಥಿತಿಯಲ್ಲಿ ವಿವಿಧ ರೀತಿಯ ಜಲ ಪ್ರಳಯವಾಗಬಹುದು. ಎರಡನೆಯದಾಗಿ ಅರಣ್ಯ ಭೂಮಿಯ ಮೆಲ್ಮೈ ಮಣ್ಣು ಕೊಚ್ಚಿಕೊಂಡು ಹೋಗಿ ಮಡ್ಡಿಯಾಗಬಹುದು. ಅರಣ್ಯಗಳು ಕಾರ್ಬನ್‌ಡೈಆಕ್ಸೈಡ್‌ನ್ನು ಹೀರಿಕೊಂಡು ಆಮ್ಲಜನಕವನ್ನು ಬಿಡುತ್ತಾ ಹಸಿರು ಮನೆ ಪರಿಣಾಮ ತಡೆಗಟ್ಟುತ್ತಿವೆ. ಇದರ ಮೇಲೆ ಪ್ರಭಾವ ಬೀರಬಹುದಾಗಿದೆ."[೧೦] "ಎರಡನೆಯ ವಾದ: ಅರಣ್ಯಗಳು ಮಾನವ ಜನಾಂಗದ ನಿರಂತರ ಬೆಳವಣಿಗೆಗೆ ಮೂಲಭೂತವಾಗಿದ್ದು. ಈ ಕಾಯಿದೆ ತತ್ಫಲವಾಗಿ ಅರಣ್ಯ ಅನಾಹುತಕ್ಕೆ ಒಳಗಾಗುತ್ತದೆ. ಮತ್ತು ಇದು ರಾಷ್ಟ್ರೀಯ ಹಿತಾಸಕ್ತಿ ವಿರುದ್ಧವಾಗಿದೆ. ಆದಿವಾಸಿಗಳ ಆಕ್ರಮಣದಿಂದಲೇ ಅರಣ್ಯ ಭೂಮಿ ಅವನತಿ ಹೊಂದಲು ಮುಖ್ಯ ಕಾರಣ."[೧೧] ಇದರ ಜೊತೆಗೆ "ಅರಣ್ಯ ಹಕ್ಕುಗಳ ಕಾಯಿದೆ ಪ್ರತಿವಾದಿಗಳ ಮತ್ತೊಂದು ವಾದ ಸರಣಿಯೆಂದರೆ ವನ್ಯಪ್ರಾಣಿಗಳು ವಾಸಿಸಲು ಅನಿರ್ಬಂಧಿತ ವಿಸ್ತಾರವಾದ ಆವಾಸಸ್ಥಾನ ಬೇಕು ಎನ್ನುವುದು. ಇಂತಹ ಪ್ರದೇಶಗಳು ತಪ್ಪಾಗಿ ಬೇರೆ ಯೋಜನೆಗಳಿಗೆ ಆಯ್ಕೆಯಾದರೆ ಅಂತಹ ಕಡೆ ಶಾಂತಿಯುತವಾಗಿ ವನ್ಯಪ್ರಾಣಿಗಳು ಬದುಕಲಾರವು. ಬಹಳಷ್ಟು ಜನಸಂಖ್ಯೆ ಇರವ ಕಡೆ ಗರ್ಭಧಾರಣೆ ತೊಂದರೆ ಲಕ್ಷಣ ಕಂಡುಬರುವುದು."[೧೨] ಎಂದೂ ವಾದಿಸುತ್ತಾರೆ ಜೊತೆಗೆ "ಕೆಲವು ಅರಣ್ಯ ಸಂರಕ್ಷಣಾ ತೀವ್ರವಾದಿಗಳು ಇದು ವನ್ಯಪ್ರಾಣಿ ಸಂರಕ್ಷಣಾ ಪ್ರದೇಶದಲ್ಲಿ ನಕಾರಾತ್ಮಕ ಪರಿಣಾಮ ಬೀರುತ್ತದೆ. ಏಕೆಂದರೆ ಆದಿವಾಸಿಗಳು ಅರಣ್ಯದ ಮೇಲೆ ಹಕ್ಕುಗಳನ್ನು ಪಡೆಯುತ್ತಾರೆ. ಅನಂತರ ಅದನ್ನು ಮೇಲ್ವಿಚಾರಣೆ ಮಾಡುವುದು ಕಷ್ಟ ಅಥವಾ ಸುಲಭವಾದುದಲ್ಲ."[೧೩] ಹೀಗೆ ಏನೇ ವಾದ-ವಿವಾದಗಳಿದ್ದರೂ "ಇಂತಹ ಎಲ್ಲ ವಾದಗಳನ್ನು ಬದಿಗೊತ್ತಿ. ಈ ಸಮುದಾಯದ ಜ್ಞಾನ ಮತ್ತು ಅನುಭವ ಮತ್ತು ಬೆಂಬಲ ವನ್ಯಪ್ರಾಣಿ ಸಂರಕ್ಷಣೆಯಲ್ಲಿ ಅತೀ ಮಹತ್ವ"[೧೪] ಎಂಬುದು ಉದಾರವಾದಿಗಳ ಅಂಬೋಣ.

### ೩.೫.೧.೩. ಆದಿವಾಸಿ ಉರುಲು (ಬಲೆ) ವಾದ

"ರಾಷ್ಟ್ರಾದ್ಯಾಂತ ಹಲವಾರು ಆದಿವಾಸಿ ಸಮುದಾಯದಲ್ಲಿರುವ ಒಂದು ನಂಬಿಕೆ ಎಂದರೆ ಯಾವುದೇ ಬದಲಾವಣೆ ಇರಲಿ ಅದು ಆದಿವಾಸಿಗಳ ಮೇಲೆ ಪರಿಣಾಮ ಬೀರುವಂತಹದ್ದಾಗಿರುತ್ತದೆ. ಇದು ಆದಿವಾಸಿಗಳ ವಾದ. ಆದಿವಾಸಿಗಳ ಪರಿಸ್ಥಿತಿ ಸುದಾರಿಸುವ ಉದ್ದೇಶ ಹೊಂದಿದ್ದರೂ ಕೂಡ ಸಾರ್ವಭೌಮ ಅಧಿಕಾರದಿಂದಾಗಿ ಆದಿವಾಸಿಗಳಿಗೆ ಸಂಬಂಧಿಸದ್ದಲ್ಲದ ರೀತಿಯಲ್ಲಿ ಇತರೆ ಜನರ ಸ್ವಾರ್ಥಕ್ಕಾಗಿ ಆದಿವಾಸಿ ಕಲ್ಯಾಣ ಮಾಡಲಾಗುತ್ತಿದೆ. ಉದಾಹರಣೆಗಾಗಿ; ವಿದೇಶಿ ರಾಯಭಾರಿ ತುರ್ತು ಅವಶ್ಯಕತೆ

ಅಥವಾ ಭಾರಿ ಕೈಗಾರಿಕೋದ್ಯಮಿಗಳ ಆಸಕ್ತಿ ಪ್ರಭಾವ. ಸಮಾಜವು ಬಹುಸಂಸ್ಕೃತಿಯುಳ್ಳದ್ದಾಗಿದೆ. ಪ್ರತಿಯೊಂದು ಸಮುದಾಯವು ತನ್ನದೇ ಆದ ಸಂಸ್ಕೃತಿ ಹೊಂದಿದೆ. ಆದರೆ ಕಾನೂನು ಸಾಂಸ್ಕೃತಿಕ ವೈವಿಧ್ಯತೆಯನ್ನು ಪ್ರತಿನಿಧಿಸದು. ಬದಲಾಗಿ ಯಾವ ಸಮುದಾಯ ಪ್ರಭಾವಶಾಲಿಯಾಗಿದೆಯೋ ಅಂತಹ ಸಮುದಾಯದ ಸಂಸ್ಕೃತಿಯೊಂದಿಗೆ ಮಿಳಿತಗೊಳಿಸುವ ಅಥವಾ ಸಾರ್ವತ್ರಿಕರಿಸುವ ಕೆಲಸ ಮಾಡಲಾಗುತ್ತಿದೆ."[೧೫] ಎಂಬ ವಾದ ಕೂಡ ಬಹಳಷ್ಟು ಚರ್ಚೆಗೆ ಗ್ರಾಸವಾಗಿದೆ. ಹಾಗೆಯೇ "ಅರಣ್ಯ ಹಕ್ಕುಗಳ ಕಾಯಿದೆಯ ಪ್ರತಿವಾದಿಗಳ ವಾದ ಆದಿವಾಸಿಗಳು ಮತ್ತು ಇತರೆ ಅರಣ್ಯವಾಸಿಗಳು ಇದರ ಪ್ರಕಾರ ಹಕ್ಕು ಹೊಂದಿದರೆ ಸಾಮಾಜಿಕ ಮತ್ತು ಆರ್ಥಿಕ ಉಚ್ಛ್ರಾಯ ಸ್ಥಿತಿ ಹೊಂದುವ ಬದಲಾಗಿ ಈಗಿರುವ ರೈತರ ಬಡತನಕ್ಕೆ ಉರಲಾಗುತ್ತದೆ. ಬದುಕಲು ಇರುವ ಎಲ್ಲಾ ದಾರಿಗಳನ್ನು ಮುಚ್ಚಿ ಹಾಕಲಾಗುತ್ತದೆ."[೧೬] ಎಂಬುದಾಗಿದೆ. ಜೊತೆಗೆ ಕೆಲವು ವಿಚಾರವಾದಿಗಳು ಆದಿವಾಸಿಗಳನ್ನು ಮತ್ತಷ್ಟು ಅಂಚಿಗೆ ತಳ್ಳುವ ವ್ಯವಸ್ಥಿತ ಸಂಚು ಎಂದು ವಾದ ಮಂಡಿಸುತ್ತಾರೆ. "ಆದಿವಾಸಿಗಳನ್ನು ಮತ್ತು ಅರಣ್ಯವಾಸಿಗಳನ್ನು ಸಂತುಷ್ಟಗೊಳಿಸುವ ಕ್ರಮ ಇದಾಗಿದೆ. ಪ್ರಗತಿ ಮತ್ತು ಅಭಿವೃದ್ಧಿಯತ್ತ ಸಾಗಿ ಅವುಗಳನ್ನು ನೀಡುವ ಬದಲಾಗಿ ಮತ್ತೆ ಅವರನ್ನು ಅರಣ್ಯಕ್ಕೆ ವಾಪಸ್ಸು ತಳ್ಳಲಾಗುತ್ತಿದೆ. ಭಾರತ ಆರ್ಥಿಕ ಪ್ರಗತಿ ಹೊಂದಿದ ಪ್ರತಿಫಲ ಅನುಭವಿಸುವುದನ್ನು ಪಕ್ಷಪಾತದಿಂದ ಕಸಿದು ಕೊಳ್ಳಲಾಗುತ್ತಿದೆ. ಅರಣ್ಯ ಹಕ್ಕುಗಳ ಕಾಯಿದೆಯು ಅದರ ರಮ್ಯತೆಯಿಂದ ಬಳಲುತ್ತಿದೆ. ಸತ್ಯಕ್ಕೆ ದೂರವಾದ ತತ್ವ ಸಾರಲಾಗುತ್ತಿದೆ. ಭಾರತೀಯ ಆದಿವಾಸಿಗಳು ತಮ್ಮ ಪೂರ್ವಜರು ಬದುಕುತ್ತಿದ್ದ ದಟ್ಟದರಿದ್ರ್ಯ, ಕಡುಬಡತನ ಮತ್ತು ನಷ್ಟದ ಜೀವನ ಬಯಸುತ್ತಿದ್ದಾರೆ."[೧೭] ಅಲ್ಲದೆ "ಅರಣ್ಯ ಹಕ್ಕುಗಳ ಕಾಯಿದೆ ಒಂದೇ ಇದಕ್ಕೆ ಔಷಧಿಯಲ್ಲ. ಏಕೆಂದರೆ ಇದನ್ನು ಕ್ಲೇಮು ಮಾಡಿದರೆ ಆದಿವಾಸಿಗಳ ಬಡತನ ಮತ್ತು ಒಂಟಿತನ ಮುಂದುವರೆಯುತ್ತದೆ."[೧೮] ಹಾಗಾಗಿ "ಈ ಕ್ಲೇಮು ಅಸಮರ್ಥನೀಯ, ಅರಣ್ಯ ಹಕ್ಕುಗಳ ಕಾಯಿದೆ ನಿರ್ಧಿಷ್ಟ ಮಾನ ಹೊಂದಿಲ್ಲ, ಆದಿವಾಸಿಗಳಿಗೆ ಅರಣ್ಯದಲ್ಲಿ ವಾಸಿಸಲು ಬಲವಂತ ಮಾಡಲಾಗುತ್ತಿದೆ. ಮತ್ತು ಪುರಾತನ ಕಾಲಕ್ಕೆ ಸೇರಿಸಲಾಗುತ್ತಿದೆ. ಕಾನೂನು ಜನರ ಹಕ್ಕುಗಳನ್ನು ಗುರುತಿಸುತ್ತದೆ. ಆದಿವಾಸಿ ಮತ್ತು ಇತರೆ ಪಾರಂಪರಿಕ ಅರಣ್ಯವಾಸಿಗಳ ನಿಜವಾದ ಸ್ವಾತಂತ್ರ್ಯ ಮತ್ತು ಜೀವನಾಧಾರಗಳನ್ನು ಬಿಟ್ಟು ಬಿಡಲಾಗಿದೆ."[೧೯] ಇಂತಹ ವಿಭಿನ್ನ ವಾದ ಸರಣಿಗಳು ಆದಿವಾಸಿಗಳನ್ನು ಮತ್ತಷ್ಟು ಗೊಂದಲಕ್ಕೆ ಸಿಕ್ಕಿಸುತ್ತಿವೆ. ಏನೇ ಆದಾಗ್ಯೂ ಕಾಯಿದೆ ಅವರ ಜಮೀನಿನ ಹಕ್ಕುಗಳ ಅಧಿಕಾರ ಗುರುತಿಸಿ ಅವರನ್ನು ಸಬಲೀಕರಣಗೊಳಿಸುತ್ತದೆ ಎಂಬುದರಲ್ಲಿ ಸತ್ಯವಿಲ್ಲದಿಲ್ಲ.

### ೩.೫.೧.೪. ಭೂಮಿ ಪಡೆದುಕೊಳ್ಳಲು ಸಂಘಟನೆ

ಅರಣ್ಯ ಹಕ್ಕುಗಳ ಕಾಯಿದೆ ಜಾರಿಗೊಂಡಿದೆ. ಆದರೆ "ಅರಣ್ಯ ಹಕ್ಕುಗಳ ಕಾಯಿದೆ ಮುಖಾಂತರ ಭೂಮಿ ಪಡೆದುಕೊಳ್ಳುವ ಭರಾಟೆಯಲ್ಲಿ ಆದಿವಾಸಿಗಳಿಗಿಂತ ಇತರೆ

ಶ್ರೀಮಂತ ಆದಿವಾಸಿಯೇತರ ಜನರು ಮುಂದಿದ್ದಾರೆ ಮತ್ತು ವಾಣಿಜ್ಯ ಆಸಕ್ತಿ ಇದರಲ್ಲಿ ಹೆಚ್ಚು ಅಡಗಿದೆ. ಯಾರು ಕಾಯಿದೆಯನ್ನು ಬೆಂಬಲಿಸುತ್ತಾ ಕೂಗಾಡುವ ಮೂಲಕ ಅರಣ್ಯವನ್ನು ರಕ್ಷಿಸುತ್ತಿದ್ದರೋ ಅದೇ ಖಾಸಗಿ ಆಸ್ತಿಯ ಬಾಹ್ಯರೂಪ. ಒಂದು ವೇಳೆ ಕಾಯಿದೆ ಜಾರಿಗೆ ಬಂದರೆ ಅದನ್ನು ಪಡೆದುಕೊಳ್ಳಲು ಅಂತಹ ಭೂಮಿ ಇರದು."[೨೦] ಇದನ್ನು ನಿಜವಾಗಿಯೂ ಸೂಕ್ಷ್ಮವಾಗಿ ಗಮನಿಸಿದರೆ. "ಹಕ್ಕು ಮತ್ತು ಹಿಡುವಳಿಗೆ ಸಂಬಂಧಪಟ್ಟಂತೆ ನೀಡಿದ ಅಧಿಕೃತ ದಾಖಲೆಗಳು ನ್ಯೂನತೆಯಿಂದ ಕೂಡಿರುವ ಆರೋಪವಿದೆ. ಇದು ಖಂಡಿತಾ ಸಾಧ್ಯವಿದೆ. ಏಕೆಂದರೆ ನೈಸರ್ಗಿಕವಾಗಿ ಬಡಜನರು ನಿಜವಾಗಿ ಅವರು ಹೊಂದಿರುವ, ಆಕ್ರಮಿಸಿಕೊಂಡಿರುವ ಭೂಮಿಗಿಂತ ಹೆಚ್ಚು ಭೂಮಿಗೆ ಅವರು ಅರ್ಹರು. ಮೂರು ಹಂತದ ಪ್ರಕ್ರಿಯ ಕ್ರಮ ಭೂಮಿ ಪಡೆಯುವಲ್ಲಿ ದೊಡ್ಡಮಟ್ಟದ ದುರುಪಯೋಗವಾಗುತ್ತಿದೆ."[೨೧]

ಇಂತಹ ಆಲೋಚನೆಗಳು ದುರುದ್ದೇಶದಿಂದ ಹುಟ್ಟಿಕೊಂಡಂತವುಗಳಾಗಿಲ್ಲ. ಅಥವಾ, "ಸ್ಥಳ ಜ್ಞಾನದ ಅಭಾವ ಅಥವಾ ರಚ್ಚೆಯಾದ ನಕಾಶೆಯಿಂದಾಗಿ ಈ ಆರೋಪ ಮಾಡುತ್ತಿಲ್ಲ ಕಾಯಿದೆಯ ಉದಾತ್ತ ಭಾವನೆಯಿಂದ ಆದಿವಾಸಿಗಳನ್ನು ಉದ್ದರಿಸುವ ವಿಚಾರಮಾಡಿ ಈ ಕ್ರಮ ಕೈಗೊಳ್ಳಲಾಗಿದ್ದರೂ ರಾಜಕಾರಣಿಗಳು ಮತ್ತು ಮೇಲ್ವರ್ಗದ ಹಿತಾಸಕ್ತಿ ಗುಂಪುಗಳು ನಿರಂತರವಾಗಿ ಅಪಹರಿಸುತ್ತಿದೆ."[೨೨] ಇಂತಹವರು ತಮ್ಮ ಮತ ರಾಜಕಾರಣಕ್ಕೆ ಒತ್ತು ನೀಡುವವರಾಗಿದ್ದಾರೆ. ಅಲ್ಲದೆ, "ಹೊಸ ಕಾಯಿದೆ ಮತ್ತು ಹಕ್ಕುಗಳು ಈಗಾಗಲೇ ಇರುವ ತಪ್ಪುಗಳಿಗೆ ಬದಲಾಗಿ ಹೊಸ ರೀತಿಯ ಮತ್ತು ಸಂಕೀರ್ಣತೆಯಿಂದ ಕೂಡಿದ ತೊಂದರೆಗಳು ಉದ್ಭವಿಸದಂತೆ ಮಾಡುತ್ತದೆ ಹೊರತು ರಚನಾತ್ಮಕ ಸಲಹೆಗಳಿಗೆ ಅವಕಶವಿಲ್ಲದಾಗಿದೆ."[೨೩] ಇಂತಹ ವಾದ ಸರಣಿಗಳು ಕಾಯಿದೆ ಅನುಷ್ಠಾನಕ್ಕೆ ಮತ್ತಷ್ಟು ವಿಳಂಬಕಾರಿಯಾಗುವ ಎಲ್ಲಾ ಸಾಧ್ಯತೆಗಳನ್ನು ಯಾರೂ ಕೂಡ ತಳ್ಳಿ ಹಾಕುವಂತಿಲ್ಲ.

**೩.೫.೧.೫. ಖಾಸಗಿ ಹಕ್ಕಿಗಾಗಿ ಆರ್ಥಿಕ ವಾದ**

ನಾಗರೀಕ ಜಗತ್ತಿನಲ್ಲಿ ಖಾಸಗಿ ಆಸ್ತಿಗಾಗಿ ಬಹಳಷ್ಟು ಪೈಪೋಟಿ ಯಾವತ್ತೂ ಇದೆ. ಆದರೆ "ನೈಸರ್ಗಿಕ ಸಂಪನ್ಮೂಲಗಳ ಕುರಿತು ವಿದ್ವಾಂಸರಲ್ಲಿ, ಕಸುಬುದಾರರಲ್ಲಿ ಜಾಗೃತಿ ಬೆಳೆಯುವ ಪೂರ್ವದಲ್ಲಿ ನೈಸರ್ಗಿಕ ಸಂಪನ್ಮೂಲ ನಿರ್ವಹಣೆಯ ಯೋಜನೆಗಳ ಯಶಸ್ಸು ಅಥವಾ ಸೋಲಿಗೆ ಸ್ಥಳೀಯ ಜನರ ಪಾತ್ರ ಮಹತ್ವದ್ದಾಗಿರುತ್ತದೆ."[೨೪] ಹಾಗಾಗಿ "ಸ್ಥಳೀಯ ಜನರ ಆಡಳಿತ ವ್ಯವಸ್ಥೆ ಇಂದಿಗೂ ಮತ್ತು ಎಂದೆಂದಿಗೂ ನಿಶ್ಚಿತವಾಗಿತ್ತು. ಆದರೆ ಈಚಿನ ದಿನಗಳಲ್ಲಿ ಸ್ಥಳೀಯ ಸಮುದಾಯ ಅಲ್ಲಿರುವ ಉಪ ಉತ್ಪನ್ನದ ಪ್ರಾಥಮಿಕ ಬಳಕೆದಾರರು ಮತ್ತು ಸ್ಥಳೀಯ ಕಾನೂನುಗಳನ್ನು ರಚಿಸಿ ಅರಣ್ಯ ಸಂರಕ್ಷಿಸುತ್ತಿದ್ದರು. ಹಾಗಾಗಿ ಅವರ ನಿಯಮಗಳನ್ನು ಅರಣ್ಯ ನಿರ್ವಹಣೆ ಯೋಜನೆಯಲ್ಲಿ ಸೇರ್ಪಡೆಗೊಳಿಸುವುದು ಅವಶ್ಯಕ."[೨೫] ಎಂಬ ವಾದ ಕೂಡ

ತೀವ್ರವಾಗಿದೆ. ಅರಣ್ಯ ಇಲಾಖೆಯು ಅಧಿಕಾರಿ ಶಾಹಿಯಲ್ಲಿ ಆಳವಾಗಿ ಬೇರೂರಿರುವ ಭ್ರಷ್ಟಾಚಾರದ ನಿರ್ಮೂಲನೆಗೆ ಕ್ರಮಕೈಗೊಳ್ಳಬೇಕಿದೆ. ಇದಕ್ಕಾಗಿ ಸ್ಥಳೀಯ ಸಮುದಾಯ ಬಳಸಿಕೊಂಡು ಇದನ್ನು ಕಿತ್ತೊಗೆಯುವ ಮೂಲಕ ಸೊರಗುತ್ತಿರುವ ಅರಣ್ಯ ಸಂಪತ್ತನ್ನು ತಡೆಗಟ್ಟುವ ಅವಶ್ಯಕತೆ ಇದೆ. ಅದಕ್ಕಾಗಿ ಆಡಳಿತ ವಿಸ್ತರಣೆ ಅಗತ್ಯ. "ದೇಶೀಯ ಸಮುದಾಯದ ಹಕ್ಕು ಬಾಧ್ಯತೆಗಳನ್ನು ಗೌರವಿಸಲು ಮತ್ತು ರಕ್ಷಿಸಲು ಸ್ಥಳೀಯ ಜನರು ಸಂಪೂರ್ಣ ಬಾಗಿಯಾಗಿ ೨೦೦೮ ರೊಳಗಾಗಿ ಅರಣ್ಯ ಅಭಿವೃದ್ಧಿ ಮಾಡಬೇಕು ಎಂಬುದನ್ನು ೧೧ ನೇ ಪಂಚವಾರ್ಷಿಕ ಯೋಜನೆಯಲ್ಲಿ ಹಾಕಿಕೊಳ್ಳಲಾಗಿತ್ತು. ಮತ್ತು ರಕ್ಷಿತಾರಣ್ಯ ಪ್ರದೇಶಗಳಲ್ಲಿ ಈಗಾಗಲೇ ಇರುವ ಅರಣ್ಯದ ನಿರ್ವಹಣೆ ಮತ್ತು ಅರಣ್ಯ ಇಲ್ಲದ ಕಡೆ ಅರಣ್ಯ ನಿರ್ಮಾಣದ ನಿರ್ವಹಣೆ ಜವಾಬ್ದಾರಿಯನ್ನು ಗುರುತಿಸಬೇಕಾಗಿದೆ."[೨೬] ಇವೆಲ್ಲವುಗಳ ಜೊತೆಗೆ "ಈ ಉದ್ದೇಶಗಳು ಅವರಿಗಾಗಿಯೇ ಇದೆ ಎಂಬುದರಲ್ಲಿ ಯಾವುದೇ ಪ್ರಶ್ನೆಗಳಿಲ್ಲ. ಆದಿವಾಸಿಗಳು ಅನಿಶ್ಚಿತತೆ ಬದುಕು ಬದುಕುತ್ತಾ ಬಂದಿದ್ದಾರೆ. ಇದು ನಿರಂತರ ಹೊರತಳ್ಳಲ್ಪಡುವಿಕೆಯಾಗಿದೆ. ಅವರ ಸಂಪೂರ್ಣ ಜೀವನ 'ಕಾನೂನು ಮುಸ್ಸಂಜೆ ವಲಯ' ಆಗಿದೆ."[೨೭] ಹಾಗಾಗಿ "ಆದಿವಾಸಿಗಳಿಗೆ ಕೊಡಮಾಡಲಾಗುತ್ತಿರುವ ಹಕ್ಕು ಬಾಧ್ಯತೆಗಳು ಅವಿಚ್ಛಿನ್ನವಾದವು ಮತ್ತು ಅವುಗಳನ್ನು ಪುನಃ ಅವರಿಂದ ಕಿತ್ತುಕೊಳ್ಳಲಾಗದು ಎಂಬ ಆತ್ಮ ವಿಶ್ವಾಸವನ್ನು ನಿಧಾನವಾಗಿ ಅವರ ಮನಸ್ಸಿನಲ್ಲಿ ನೆಡಬೇಕು."[೨೮] ಇದು ನಿಜವಾಗಿಯೂ ಕಾಯಿದೆ ನಿರೀಕ್ಷಿಸಿರುವ ಮತ್ತು ಹೊಂದಿರುವ ಉದ್ದೇಶವಾಗಿದೆ. ಹೀಗಾದಾಗ ಮಾತ್ರ ಆರ್ಥಿಕ ಸಬಲತೆ ಕಂಡುಬರಲು ಸಾಧ್ಯವಾಗುತ್ತದೆ.

### ೩.೫.೧.೬. ವಸ್ತುಗಳ ವಿಧಗಳು

ಸಮುದಾಯ ಹಕ್ಕುಗಳನ್ನು ಕೊಡ ಮಾಡುವ ಪೂರ್ವದಲ್ಲಿ "ಸಾರ್ವಜನಿಕ ಮತ್ತು ಖಾಸಗಿ ವಸ್ತುಗಳ ವಿಧಗಳಲ್ಲಿ ಭಿನ್ನತೆಯನ್ನು ಕೇವಲ ತಾತ್ವಿಕ/ಉಹಾತ್ಮಕವಾಗಿ ನೋಡಲಾಗದು. ಇದು ನಿರ್ಧಾರವಾಗುವುದು ಒಟ್ಟು ಅರಣ್ಯ ಭೂಮಿ ಮತ್ತು ಅರಣ್ಯ ಸಂಪನ್ಮೂಲದ ಹಂಚಿಕೆಯ ಮೇಲೆ ಪ್ರಭಾವ ಬೀರುತ್ತದೆ. ವಸ್ತುಗಳ ವಿಧಗಳನ್ನು ತಪ್ಪು ತಪ್ಪಾಗಿ ಅರ್ಥೈಸಿಕೊಳ್ಳುವ ಸಾಧ್ಯತೆ ಇದೆ. ಇದರಿಂದ ಇರುವ ಸಂಪನ್ಮೂಲದ ಹಕ್ಕುಗಳನ್ನು ಸರಿಯಾಗಿ ವ್ಯವಸ್ಥೆಗೊಳಿಸಲು ಸಾಧ್ಯವಾಗದು. ಇದು ಪೋಷಣೆಯುಕ್ತ ಬಳಕೆಗೆ ಬದಲಾಗಿ ಘೋರ ಸಂಪೂರ್ಣ ಭೋಳಿಸುವ ಕಡೆ ತಿರುಗಬಹುದು."[೨೯] ಈ ಹಿನ್ನೆಲೆಯಲ್ಲಿ ವಿವಿಧ ವಸ್ತುಗಳ ವಿಧಗಳು, ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಅರ್ಥೈಸಿಕೊಳ್ಳುವ ಅವಶ್ಯಕತೆ ಇದೆ. ಆಸ್ತಿಯ ಹಕ್ಕು ಮತ್ತು ಮಾಲೀಕರೊಂದಿಗಿನ ಹೊಂದಾಣಿಕೆ ಇಳುವಳಿಕೆ ಬೇಕಾಗಿದೆ. ಹಾಗೆಯೇ ಆದಿವಾಸಿಗಳು ಮತ್ತು ಅರಣ್ಯವನ್ನು ಅರ್ಥೈಸಿಕೊಳ್ಳುವುದು ಕೂಡ ಪ್ರಸ್ತುತ ಪರಿಸ್ಥಿತಿಯಲ್ಲಿ ಮಹತ್ವದ್ದಾಗಿದೆ.

ಹಲವು ವಾದ ಪ್ರತಿ ವಾದಗಳ ಮಧ್ಯೆಯೂ ತಡವಾಗಿಯಾದರೂ ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ ಕಾಯಿದೆ ರಚಿಸಲ್ಪಟ್ಟಿದೆ. ಭಾರತ ಸರ್ಕಾರ ಅರಣ್ಯ ಆಡಳಿತ ಮತ್ತು ನಿರ್ವಹಣೆಯಲ್ಲಿ ಪ್ರಜಾಪ್ರಭುತ್ವವನ್ನು ಪ್ರತಿನಿಧಿಸುವ ನಿಟ್ಟಿನಲ್ಲಿ ಒಂದು ದಿಟ್ಟ ಹೆಜ್ಜೆಯನ್ನಿಟ್ಟಿದೆ. ಇದರಿಂದಾಗಿ ಅರಣ್ಯ ಅವಲಂಬಿತರು ತಾವು ಅರಣ್ಯದಲ್ಲಿ ವಾಸಿಸುವ ಮತ್ತು ಅದರ ಉಪ ಉತ್ಪನ್ನಗಳನ್ನು ಬಳಸುವ ಹಕ್ಕುಗಳ ಜೊತೆಗೆ ಅರಣ್ಯ ಆಡಳಿತ ಮತ್ತು ನಿರ್ವಹಣೆಯ ಜವಾಬ್ದಾರಿಯನ್ನು ಮತ್ತು ಅಧಿಕಾರವನ್ನೂ ಪಡೆದಿವೆ. ಇದು ಕಾಯಿದೆ ಅನುಷ್ಠಾನಗೊಳಿಸಬೇಕಾದ ಅಧಿಕಾರಿವರ್ಗಕ್ಕೆ ಸವಾಲಾಗಿದೆ.

### ೩.೬. ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನಕ್ಕೆ ಕರ್ನಾಟಕ ಸರ್ಕಾರದ ಕ್ರಮ

ಇಡೀ ದೇಶಕ್ಕೆ ಕಾಯಿದೆ ರಚಿಸಲಾಗಿದೆ. ಆದರೆ ಅದರ ಅನುಷ್ಠಾನ ಆಯಾ ರಾಜ್ಯ ಸರ್ಕಾರದ ವಿವೇಚನೆ ಮತ್ತು ಸ್ಥಳೀಯ ಅಧಿಕಾರಿಶಾಹಿಯ ಮನಸ್ಥಿತಿಯನ್ನು ಅವಲಂಬಿಸಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾಕ್ಕೆ ಅನುಸರಿಸಿರುವ ಕ್ರಮಗಳನ್ನು ತಿಳಿದುಕೊಳ್ಳುವುದು ಮಹತ್ವದ್ದಾಗಿದೆ.

#### ೩.೬.೧. ಸರ್ಕಾರಿ ಆದೇಶ

ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯ ವಾಸಿಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅಧಿನಿಯಮ. ೨೦೦೬ (೨೦೦೭ ರ ೨) ಮತ್ತು ನಿಯಮಗಳು ೨೦೦೮ ಮತ್ತು ತಿದ್ದುಪಡಿ ನಿಯಮಗಳು ೨೦೧೨ ನ್ನು ಅನುಷ್ಠಾನಗೊಳಿಸುವ ಕುರಿತು ಸರ್ಕಾರೇತರ ಸಂಸ್ಥೆಗಳ ಪ್ರತಿನಿಧಿಗಳೊಂದಿಗೆ, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ ೨೪.೦೩.೨೦೧೪ ರಂದು ಸಭೆ ನಡೆಸಲಾಯಿತು. ಈ ಸಭೆಯ ನಡಾವಳಿಯ ತೀರ್ಮಾನದ ಹಿನ್ನೆಲೆಯಲ್ಲಿ ಪ್ರಸ್ತುತ ಕಾಯಿದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಮತ್ತು ಸಮಸ್ಯೆಗಳನ್ನು ಬಗೆಹರಿಸಲು ಅರಣ್ಯ, ಪರಿಸರ ಮತ್ತು ಜೀವಶಾಸ್ತ್ರ ಇಲಾಖೆಯ ಮಾನ್ಯ ಸಚಿವರ ಅಧ್ಯಕ್ಷತೆಯಲ್ಲಿ ಸಚಿವ ಸಂಪುಟ ಉಪ ಸಮಿತಿಯನ್ನು ರಚಿಸಲಾಗಿತ್ತು. ಮತ್ತು ಅದರ ಉಪ ಸಮಿತಿ ದಿನಾಂಕ ೨೬.೦೨.೨೦೧೪ ರಂದು ಸಭೆ ನಡೆಸಿ ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯವಾಸಿಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅಧಿನಿಯಮ. ೨೦೦೬ (೨೦೦೭ ರ ೨) ಮತ್ತು ನಿಯಮಗಳು ೨೦೦೮ ಮತ್ತು ತಿದ್ದುಪಡಿ ನಿಯಮಗಳು ೨೦೧೨ ಗಳ ಬಗ್ಗೆ ಮತ್ತು ಇವುಗಳನ್ನು ಅನುಷ್ಠಾನಗೊಳಿಸುವ ಬಗ್ಗೆ ವಿವರವಾಗಿ ಚರ್ಚಿಸಿ ಕೆಲವು ಸೂಕ್ತ ಶಿಫಾರಸ್ಸುಗಳನ್ನು ಮಾಡಿತು. ಸದರಿ ಶಿಫಾರಸ್ಸುಗಳನ್ನು ಸಚಿವ ಸಂಪುಟಕ್ಕೆ ದಿನಾಂಕ ೦೩.೦೩.೨೦೧೪ ರಂದು ಸಲ್ಲಿಸಿ ಅನುಮೋದನೆ ಪಡೆಯಿತು. ಅದರಂತೆ ಸರ್ಕಾರ ಒಂದು ಆದೇಶ ಹೊರಡಿಸಿ ಗ್ರಾಮ

ಮಟ್ಟದ ಅರಣ್ಯ ಹಕ್ಕುಗಳ ಸಮಿತಿ, ಉಪ ವಿಭಾಗ ಮಟ್ಟದ ಮತ್ತು ಜಿಲ್ಲಾ ಮಟ್ಟದ ಸಮಿತಿಗಳು ಪ್ರಸ್ತುತ ಅಧಿನಿಯಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ದಿಟ್ಟ ಕ್ರಮ ವಹಿಸಲು ಆದೇಶಿಸಿತು.[೩೦]

### ೩.೭. ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದ ಸ್ಥಿತಿ

ಅರಣ್ಯ ಹಕ್ಕು ಕಾಯಿದೆ ಅನುಷ್ಠಾನದಲ್ಲಿ ಹಲವು ಸಮಸ್ಯೆಗಳು ತಲೆದೋರುತ್ತಿವೆ. ಈ ಹಿನ್ನೆಲೆಯಲ್ಲಿ ಪರಿಸರ ಮತ್ತು ಅರಣ್ಯ ವ್ಯವಹಾರಗಳ ಮಂತ್ರಾಲಯ ಮತ್ತು ಬುಡಕಟ್ಟು ವ್ಯವಹಾರಗಳ ಮಂತ್ರಾಲಯ ಸೇರಿ ಏಪ್ರಿಲ್ ೨೦೧೦ ರಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದ ನೈಜತೆ ಅರಿಯಲು ಜಂಟೀ ಸಮಿತಿ ರಚಿಸಿತು. ಇದು ನೀಡಿದ ವರದಿ ಪ್ರಸ್ತುತ ಕಾಯಿದೆ ಅನುಷ್ಠಾನ ಬಹಳ ಮಂದಗತಿಯಲ್ಲಿ ಸಾಗುತ್ತಿದೆ ಎಂಬುದು. ಹೀಗಾಗಿ ಜೀವನಾವಶ್ಯಕ ಭದ್ರತೆ ಮತ್ತು ಅರಣ್ಯ ಆಡಳಿತದಲ್ಲಿ ಬದಲಾವಣೆ ತರಲು ನಿರ್ಧರಿಸಿತು ಮತ್ತು ಅರಣ್ಯ ಸಂರಕ್ಷಣೆಯನ್ನು ಬಲಗೊಳಿಸಲು ಇದರಿಂದ ಮಾತ್ರ ಸಾಧ್ಯ ಎಂಬುದನ್ನು ಮನಗಂಡಿತು. ಈ ನಿಟ್ಟಿನಲ್ಲಿ ಸಮಿತಿಯು ಅರಣ್ಯ ಹಕ್ಕುಗಳ ಕಾಯಿದೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲು ತಾನು ಕಂಡುಕೊಂಡ ಅಂಶಗಳನ್ನು ಬೇರೆ ಬೇರೆ ತಲೆಬರಹದಡಿ ವಿಂಗಡಿಸಿತು. (ಅಡಿಟಿಪ್ಪಣಿ ೩೧ ರಲ್ಲಿ ವಿಂಗಡಣೆಗಳನ್ನು ಗಮನಿಸಬಹುದು)[೩೧]

### ೩.೮. ಅಧ್ಯಯನ ಕ್ಷೇತ್ರದ ವ್ಯಾಪ್ತಿಯಲ್ಲಿ ಕಾಯಿದೆ ಅನುಷ್ಠಾನ

ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ವೈಯಕ್ತಿಕ ಭೂಮಿ ಹಕ್ಕಿನ ವಿತರಣೆ ಮತ್ತು ಸಮುದಾಯ ಹಕ್ಕುಗಳ ಅನುಷ್ಠಾನ ಕುರಿತು ಸಂಗ್ರಹಿಸಿದ ಮಾಹಿತಿಯನ್ನು ಕ್ಷೇತ್ರ ಅಧ್ಯಯನದೊಂದಿಗೆ ತಾಳೆ ನೋಡಿ ಇಲ್ಲಿ ಪ್ರಸ್ತುತ ಪಡಿಸಲಾಗಿದೆ.

#### ೩.೮.೧. ಮೈಸೂರು ಜಿಲ್ಲೆಯಲ್ಲಿ ತಾಲ್ಲೂಕುವಾರು ವೈಯಕ್ತಿಕ ಭೂಮಿ ಹಕ್ಕು ಪಡೆದಿರುವುದು

ಅರಣ್ಯ ಹಕ್ಕುಗಳ ಕಾಯಿದೆ ಅರಣ್ಯ ಅವಲಂಬಿತರಿಗೆ ವೈಯಕ್ತಿಕ ಭೂಮಿ ಹಕ್ಕು ಪಡೆಯಲು ಅವಕಾಶ ನೀಡಿದೆ. ಅದರಂತೆ ಮೈಸೂರು ಜಿಲ್ಲೆಯ ಐದು ತಾಲ್ಲೂಕುಗಳಲ್ಲಿ ಒಟ್ಟು ೫೫೮ ಕುಟುಂಬಗಳಿಗೆ ವೈಯಕ್ತಿಕ ಭೂಮಿ ನೀಡಲಾಗಿದೆ. ಇದನ್ನು ಕೋಷ್ಟಕ ೩.೧ರಲ್ಲಿ ವಿಂಗಡಿಸಿ ಹೇಳಲಾಗಿದೆ.

**ಕೋಷ್ಟಕ:೩.೧:ಮೈಸೂರು ಜಿಲ್ಲೆಯಲ್ಲಿ ತಾಲ್ಲೂಕುವಾರು ವೈಯಕ್ತಿಕ ಭೂಮಿ ಹಕ್ಕು ಪಡೆದಿರುವ ವಿವರ**

| ಕ್ರ.ಸಂ | ತಾಲ್ಲೂಕು | ಗ್ರಾಮಅರಣ್ಯಹಕ್ಕು ಸಮಿತಿಯಿಂದ ಬಂದಿರುವ ಅರ್ಜಿಗಳು | ಮಾನ್ಯ ಮಾಡಿದ ಅರ್ಜಿಗಳು | ತಿರಸ್ಕೃತ ಅರ್ಜಿಗಳು | ಅರ್ಜಿ ತಿರಸ್ಕೃತಕ್ಕೆ ನೀಡಿರುವ ಕಾರಣ |
|---|---|---|---|---|---|
| ೦೧ | ಮೈಸೂರು | ೦ | ೦ | ೦ | |
| ೦೨ | ಹೆಚ್.ಡಿ.ಕೋಟೆ | ೩೬೯೧ | ೩೯೬ | ೩೨೯೫ | ಅರ್ಜಿ ನಮೂನೆಯ ಅಪೂರ್ಣ ಭರ್ತಿ |
| ೦೩ | ಹುಣಸೂರು | ೧೩೪೧ | ೦ | ೧೩೪೧ | |
| ೦೪ | ನಂಜನಗೂಡು | ೨೭೧ | ೦ | ೨೭೧ | |
| ೦೫ | ಪಿರಿಯಾಪಟ್ಟಣ | ೧೯೪ | ೧೬೨ | ೩೨ | |
| **ಒಟ್ಟು** | | **೫೪೯೭** | **೫೫೮** | **೪೯೩೯** | |

(ಮೂಲ: ಯೋಜನಾ ಸಮನ್ವಯಾಧಿಕಾರಿಗಳ ಕಛೇರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಮೈಸೂರು.)

ಕೋಷ್ಟಕ ೩.೧ ಮೈಸೂರು ಜಿಲ್ಲೆಯಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ಅಡಿ ವೈಯಕ್ತಿಕ ಭೂಮಿ ಹಕ್ಕು ಪಡೆದಿರುವವರ ಕ್ರೂಡೀಕೃತ ಮಾಹಿತಿ ನೀಡುತ್ತದೆ. ಮೈಸೂರು ತಾಲ್ಲೂಕಿನಲ್ಲಿ ವೈಯಕ್ತಿಕ ಭೂಮಿ ಹಕ್ಕಿಗಾಗಿ ಅರ್ಜಿ ಸಲ್ಲಿಸಿಲ್ಲ. ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿ ೩೬೯೧ ಅರ್ಜಿಗಳನ್ನು ಸಲ್ಲಿಸಿದ್ದಾರೆ. ಇವುಗಳಲ್ಲಿ ಮಾನ್ಯ ಮಾಡಿ ಭೂಮಿ ವಿತರಿಸಲು ಕ್ರಮ ಕೈಗೊಂಡಿರುವ ಅರ್ಜಿಗಳ ಸಂಖ್ಯೆ ೩೯೬. ಅಂದರೆ ಶೇಕಡಾ ೧೦.೭೨. ಉಳಿದ ಶೇಕಡಾ ೮೭.೨೭ ಅರ್ಜಿಗಳು ತಿರಸ್ಕರಿಸಲ್ಪಟ್ಟಿವೆ. ಹುಣಸೂರು ತಾಲ್ಲೂಕಿನ ೧೩೪೧ ಅರ್ಜಿಗಳು ಮತ್ತು ನಂಜನಗೂಡು ತಾಲ್ಲೂಕಿನ ೨೭೧ ಅರ್ಜಿಗಳು ತಿರಸ್ಕರಿಸಲ್ಪಟ್ಟಿವೆ. ಅಂದರೆ ಶೇಕಡಾ ೧೦೦ ರಷ್ಟು ಅರ್ಜಿಗಳು ತಿರಸ್ಕರಿಸಲ್ಪಟ್ಟಿವೆ. ಪಿರಿಯಾಪಟ್ಟಣ ತಾಲ್ಲೂಕಿನಲ್ಲಿ ೧೯೪ ಅರ್ಜಿಗಳಲ್ಲಿ ಮಾನ್ಯ ಮಾಡಿದ ಅರ್ಜಿಗಳ ೧೬೨ ಅಂದರೆ ಶೇಕಡಾ ೮೩.೫೦. ಶೇಕಡಾ ೧೬.೫೦ ಅರ್ಜಿಗಳು ತಿರಸ್ಕರಿಸಲ್ಪಟ್ಟಿವೆ. ಮೈಸೂರು ಜಿಲ್ಲೆಯಲ್ಲಿ ಒಟ್ಟು ೫೪೯೭ ಅರ್ಜಿಗಳಲ್ಲಿ ೫೫೮ ಅಂದರೆ ಶೇಕಡಾ ೧೦.೧೫ ಅರ್ಜಿಗಳನ್ನು ಮಾನ್ಯ ಮಾಡಲಾಗಿದೆ. ಶೇಕಡಾ ೮೯.೮೪ ಅರ್ಜಿಗಳನ್ನು ತಿರಸ್ಕರಿಸಲಾಗಿದೆ. ಅರ್ಜಿ ನಮೂನೆ ಭರ್ತಿ ಮಾಡಿರುವುದು ಸರಿಯಾಗಿರುವುದಿಲ್ಲ ಎಂಬ ಆಧಾರದ ಮೇಲೆ ಅರ್ಜಿಗಳನ್ನು ತಿರಸ್ಕರಿಸಲಾಗಿದೆ. ಇಲ್ಲಿ ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ತಿಳಿದು ಬಂದಿರುವ ಅಂಶವೆಂದರೆ ಹಲವು ಹಾಡಿಗಳ ಆದಿವಾಸಿಗಳ ಭೂಮಿಯ ಹಕ್ಕು ಪತ್ರಗಳನ್ನು ವಲಯ ಅರಣ್ಯಾಧಿಕಾರಿಗಳು ತಮ್ಮ ಕಛೇರಿಯಲ್ಲಿ ಇಟ್ಟುಕೊಂಡಿರುವುದು. ಇದು ಅವರಲ್ಲಿ ಆತಂಕಕ್ಕೆ ಎಡೆ ಮಾಡಿಕೊಟ್ಟಿದೆ.

### ೩.೮.೨.ಹೆಗ್ಗಡದೇವನ ಕೋಟೆ ಮತ್ತು ಪಿರಿಯಾಪಟ್ಟಣ ತಾಲ್ಲೂಕಿನಲ್ಲಿ ಹಾಡಿ/ಪೋಡುವಾರು ವೈಯಕ್ತಿಕ ಭೂಮಿ ಹಕ್ಕು ಪಡೆದಿರುವುದು

ಮೈಸೂರು ಜಿಲ್ಲೆಯಲ್ಲಿ ಹೆಗ್ಗಡದೇವನಕೋಟೆ ಮತ್ತು ಪಿರಿಯಾಪಟ್ಟಣ ತಾಲ್ಲೂಕಿನ ೨೧ ಹಾಡಿ/ಪೋಡುಗಳಲ್ಲಿ ಮಾತ್ರ ವೈಯಕ್ತಿಕ ಭೂಮಿ ಹಕ್ಕು ನೀಡಲಾಗಿದೆ. ಪ್ರತೀ ಹಾಡಿ/ಪೋಡುಗಳಲ್ಲಿ ಎಷ್ಟು ಕುಟುಂಬಗಳಿಗೆ ಭೂಮಿ ನೀಡಲಾಗಿದೆ ಎಂಬುದನ್ನು ಕೋಷ್ಟಕ ೩.೨ರಲ್ಲಿ ನೀಡಲಾಗಿದೆ.

**ಕೋಷ್ಟಕ:೩.೨: ಹಾಡಿ/ಪೋಡುವಾರು ವೈಯಕ್ತಿಕ ಭೂಮಿ ಹಕ್ಕು ಪಡೆದ ವಿವರ**

| ಕ್ರ.ಸಂ | ೧ | ೨ | ೩ | ೪ | ೫ | ೬ | ೭ |
|---|---|---|---|---|---|---|---|
| ೦೧ | ೧ | ಸೇಬಿನಕೊಲ್ಲಿ ಹಾಡಿ | ೫ | ೮೨ | ೧ | ೫೦ | ೧.೦೯ |
| ೦೨ | ೧ | ಹೊಸೂರು ಹಾಡಿ | ೪ | ೧೦೨ | ೧ | ೪೦ | ೦.೨೦ |
| ೦೩ | ೧ | ಮೂಲೆಯೂರು ಹಾಡಿ | ೧೦ | ೧೪೨ | ೧&೩ | ೧೦೦ | ೩.೦೫.೫ |
| ೦೪ | ೧ | ಮಚ್ಚೂರು ಹಾಡಿ | ೧೮ | ೧೨೬ | ೩ | ೧೮೦ | ೫.೧೨ |
| ೦೫ | ೧ | ತಿಮ್ಮನ ಹೊಸಹಳ್ಳಿ | ೧೩ | ೨೨೧ | ೨ | ೧೩೦ | ೪.೩೦ |
| ೦೬ | ೧ | ಪ್ರಭಾನಗರ | ೨೩ | ೨೬೦ | ೧ | ೨೩೦ | ೨೨.೨೧ |
| ೦೭ | ೧ | ಡಿ.ಬಿ.ಕುಪ್ಪೆ | ೧೧ | ೧೩೦ | ೨ | ೧೧೦ | ೩.೩೨ |
| ೦೮ | ೧ | ಮಚ್ಚೂರು ಕೆರೆ ಹಾಡಿ | ೧೪ | ೨೬೨ | ೧ | ೧೪೦ | ೭.೭೨ |
| ೦೯ | ೧ | ಮಾನಿಮೂಲೆ ಹಾಡಿ | ೧೯ | ೭೯ | ೧ | ೧೯೦ | ೫.೧೭ |
| ೧೦ | ೧ | ಮಾಳದ ಹಾಡಿ | ೬೮ | ೨೪೭ | ೧ | ೬೮೦ | ೪.೩೧ |
| ೧೧ | ೧ | ಬಳ್ಳೇ ಹಾಡಿ | ೩೫ | ೩೨೯ | ೧ | ೩೫೦ | ೧೧.೨೨ |
| ೧೨ | ೧ | ಉದ್ದೂರು ಕೆರೆ ಹಾಡಿ | ೧೫ | ೧೬೨ | ೧ | ೧೫೦ | ೧.೧೫ |
| ೧೩ | ೧ | ಬಾವಲಿ&ಕೆರೆಗದ್ದೆ ಹಾಡಿ | ೨೯ | ೧೧೪ | ೧&೩ | ೨೯೦ | ೯.೨೨ |
| ೧೪ | ೧ | ಗೋಳೂರು ಹಾಡಿ | ೫೧ | ೩೭೦ | ೧ | ೫೧೦ | ೧೬.೦೪ |
| ೧೫ | ೧ | ಆನೆಮಾಳ | ೫೪ | ೧೬೨ | ೧ | ೫೪೦ | ೧೫.೧೮ |
| ೧೬ | ೧ | ಬೋಗಾಪುರ | ೨೭ | ೧೭೬ | ೧ | ೨೭೦ | ೩.೦೭ |
| ೧೭ | ೨ | ಮರಳಕಟ್ಟೆ ಎ | ೨೪ | ೩೨೬ | ೧ | ೨೪೦ | ೪.೨೭ |
| ೧೮ | ೨ | ಮರಳಕಟ್ಟೆ ಬಿ | ೪೦ | ೩೧೯ | ೧ | ೪೦೦ | ೫.೧೩ |
| ೧೯ | ೨ | ಮನಗನಕೆರೆ ಹಾಡಿ | ೨೪ | ೧೬೯ | ೧&೪ | ೨೪೦ | ೮.೦೧ |
| ೨೦ | ೨ | ಹಳೆಕೆರೆ ಹಾಡಿ | ೩೮ | ೩೦೭ | ೧ | ೩೮೦ | ೯.೨೭ |
| ೨೧ | ೨ | ಕೋಗಿಲವಾಡಿ ವರ್ತಿ | ೩೬ | ೧೩೬ | ೧ | ೩೬೦ | ೪೭.೦೨ |
| | | ಒಟ್ಟು | ೫೫೮ | ೪೨೨೧ | | ೫೫೮೦ | ೧೯೧.೦೫ |

(ಮೂಲ: ಯೋಜನಾ ಸಮನ್ವಯಾಧಿಕಾರಿಗಳ ಕಛೇರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಮೈಸೂರು.)

**ತಲೆ ಬರಹಗಳ ಸಂಕೇತಗಳ ವಿವರ:** ೧- ತಾಲ್ಲೂಕು, ೨-ಪೋಡು/ ಹಾಡಿ/ ಕಾಲೊನಿ ಹೆಸರು, ೩- ಒಟ್ಟು ಕುಟುಂಬಗಳು, ೪- ಕುಟುಂಬಗಳ ಒಟ್ಟು ಜನಸಂಖ್ಯೆ, ೫- ಆದಿವಾಸಿ ಪಂಗಡದ ಹೆಸರು, ೬- ವೈಯಕ್ತಿಕ ಹಕ್ಕಿಗಾಗಿ ಕುಟುಂಬಗಳು ಒಟ್ಟು ಭೂಮಿಗೆ ಅರ್ಜಿ ಸಲ್ಲಿಸಿತ್ತು (ಎಕರೆಗಳಲ್ಲಿ), ೭-೨೦೦೬ ಅರಣ್ಯ ಹಕ್ಕು ಕಾಯಿದೆ ಅಡಿ ಎಷ್ಟು ಭೂಮಿ ನೀಡಲಾಗಿದೆ. **ತಾಲ್ಲೂಕು ಸಂಕೇತಗಳು:** ೧-ಹೆಗ್ಗಡದೇವನಕೋಟೆ, ೨-ಪಿರಿಯಾಪಟ್ಟಣ. **ಆದಿವಾಸಿಗಳ ಸಂಕೇತಗಳು:** ೧-ಜೇನುಕುರುಬರು, ೨-ಬೆಟ್ಟಕುರುಬರು, ೩-ಯರವರು, ೪-ಸೋಲಿಗರು.

ಕೋಷ್ಟಕ ೩.೨ ವೈಯಕ್ತಿಕ ಭೂಮಿ ಹಕ್ಕು ಪಡೆದಿರುವವರ ವಿವರ ನೀಡುತ್ತದೆ. ಹೆಗ್ಗಡದೇವನಕೋಟೆ ತಾಲ್ಲೂಕಿನ ೧೬ ಮತ್ತು ಪಿರಿಯಾಪಟ್ಟಣ ತಾಲ್ಲೂಕಿನ ೦೫ ಹಾಡಿ/ಪೋಡುಗಳಲ್ಲಿ ಮಾತ್ರ ವೈಯಕ್ತಿಕ ಹಕ್ಕನ್ನು ವಿತರಿಸಲಾಗಿದೆ. ಒಟ್ಟು ೫೫೮ ಕುಟುಂಬಗಳ ೪೨೨೧ ಜನರಿಗೆ ೧೯೧.೦೫ ಎಕರೆ ಭೂಮಿ ವಿತರಿಸಲಾಗಿದೆ. ಸರಾಸರಿ ನೋಡಿದರೆ ಒಂದು ಕುಟುಂಬಕ್ಕೆ ೧೩.೬೯ ಗುಂಟೆ ಭೂಮಿ ವಿತರಿಸಲಾಗಿದೆ. ಕುಟುಂಬಗಳ ಸರಾಸರಿ ಜನಸಂಖ್ಯೆ ೭.೫೬. ಅಂದರೆ ಒಬ್ಬರಿಗೆ ೧.೮೧ ಗುಂಟೆ ಭೂಮಿ ವಿತರಿಸಲಾಗಿದೆ. ಆದರೆ ಅವರ ಸರಾಸರಿ ಬೇಡಿಕೆ ಇರುವುದು ೭೨ ಗುಂಟೆ.

ಮೇಲಿನ ಅಂಕಿ ಅಂಶಗಳನ್ನು ಗಮನಿಸಿದಾಗ ವೈಯಕ್ತಿಕ ಭೂಮಿ ಹಕ್ಕು ವಿತರಣೆಯ ಅನುಷ್ಠಾನ ಪರಿಣಾಮಕಾರಿಯಾಗಿಲ್ಲ, ಆದಿವಾಸಿಗಳ ಬೇಡಿಕೆಯನ್ನು ಮನ್ನಿಸಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಹಕ್ಕು ಪತ್ರ ವಿತರಿಸಿರುವ ಭೂಮಿಯು ಎಲ್ಲಿದೆ ಎಂಬುದು ಕೆಲವರಿಗೆ ಗೊತ್ತೇ ಇಲ್ಲ. ನೀಡಿರುವ ಭೂಮಿಯಲ್ಲಿ ಮನೆ ನಿರ್ಮಿಸಬಹುದೆ ವಿನಃ ಬೆಳೆ ಬೆಳೆಯಲು ಸಾಕಾಗುತ್ತಿಲ್ಲ ಎಂಬುದು ಆದಿವಾಸಿಗಳ ಅಳಲು. ಕಾಯಿದೆ ಒಂದು ಕುಟುಂಬಕ್ಕೆ ೨.೫ ಹೆಕ್ಟೇರ್‌ನಷ್ಟು ಭೂಮಿ ವಿತರಿಸಬಹುದು ಎಂದು ಹೇಳಿದೆ. ಈ ನಿಯಮವನ್ನು ಯಾಕೆ ಅನುಸರಿಸಿಲ್ಲ. ಆದಿವಾಸಿಗಳ ಕುಟುಂಬ ದೊಡ್ಡದಾದಾಗ ಅವರ ವಾಸ ಹೇಗೆ? ಹೀಗೆ ಹಲವು ಪ್ರಶ್ನೆಗಳು ಉದ್ಭವಿಸುತ್ತವೆ.

### ೩.೮.೩. ಹೆಗ್ಗಡದೇವನ ಕೋಟೆ ಮತ್ತು ಪಿರಿಯಾಪಟ್ಟಣ ತಾಲ್ಲೂಕಿನಲ್ಲಿ ವೈಯಕ್ತಿಕ ಭೂಮಿ ಹಕ್ಕು ಪಡೆದ ಕುಟುಂಬಗಳ ಭೂ ವಿಸ್ತೀರ್ಣದ ಮಾಹಿತಿ

ಮೇಲೆ ಹೇಳಿದ ತಾಲ್ಲೂಕುಗಲ್ಲಿ ಪ್ರತೀ ಕುಟುಂಬ ಪಡೆದಿರುವ ಭೂ ವಿಸ್ತೀರ್ಣದ ಮಾಹಿತಿಯನ್ನು ಕೋಷ್ಟಕ ೩.೩ ರಲ್ಲಿ ೧೦ ವಿಭಾಗದಲ್ಲಿ ವಿಂಗಡಿಸಿ ನೀಡಲಾಗಿದೆ.

## ಕೋಷ್ಟಕ :೩.೩: ವೈಯಕ್ತಿಕ ಭೂಮಿ ಹಕ್ಕು ಪಡೆದ ಕುಟುಂಬಗಳ ಭೂ ವಿಸ್ತೀರ್ಣದ ವಿವರ

| ಕ್ರಸ | ತಾಲ್ಲೂಕು | ಪೋಡು/ಹಾಡಿ /ಕಾಲೊನಿ ಹೆಸರು | ಆದಿವಾಸಿ | ವೈಯಕ್ತಿಕ ಭೂಮಿ ಹಕ್ಕು ಪಡೆದಿರುವ ಕುಟುಂಬಗಳು | | | | | | | | | | |
|---|---|---|---|---|---|---|---|---|---|---|---|---|---|---|
| | | | | 1 | 2 | 3 | 4 | 5 | 6 | 7 | 8 | 9 | 10 | ಒಟ್ಟು |
| ೦೧ | ೧ | ಸೇಬಿನಕೊಲ್ಲಿ ಹಾಡಿ | ೧ | ೦೦ | ೦೩ | ೦೨ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೦೫ |
| ೦೨ | ೧ | ಹೊಸೂರು ಹಾಡಿ | ೧ | ೦೨ | ೦೨ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೦೪ |
| ೦೩ | ೧ | ಮೂಲೆಯೂರು ಹಾಡಿ | ೧ | ೦೪ | ೦೧ | ೦೩ | ೦೧ | ೦೦ | ೦೦ | ೦೦ | ೦೦ | ೦೦ | ೦೦ | ೦೯ |
| | | | ೩ | ೦೦ | ೦೦ | ೦೦ | ೦೧ | ೦೦ | ೦೦ | ೦೦ | ೦೦ | ೦೦ | ೦೦ | ೦೧ |
| ೦೪ | ೧ | ಮಚ್ಚೂರು ಹಾಡಿ | ೩ | ೦೭ | ೦೧ | ೦೯ | ೦೦ | ೦೧ | ೦೦ | ೦೦ | ೦೦ | ೦೦ | ೦೦ | ೧೮ |
| ೦೫ | ೧ | ತಿಮ್ಮನ ಹೊಸಹಳ್ಳಿ | ೨ | ೦೧ | ೦೩ | ೦೭ | ೦೨ | ೦೦ | ೦೦ | ೦೦ | ೦೦ | ೦೦ | ೦೦ | ೧೩ |
| ೦೬ | ೧ | ಪ್ರಭಾನಗರ | ೧ | ೦೦ | ೦೦ | ೦೧ | ೦೩ | ೦೩ | ೦೫ | ೦೫ | ೦೪ | ೦೨ | ೦೦ | ೨೩ |
| ೦೭ | ೧ | ಡಿ.ಬಿ.ಕುಪ್ಪೆ | ೨ | ೦೧ | ೦೪ | ೦೬ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೧೧ |
| ೦೮ | ೧ | ಮಚ್ಚೂರು ಕೆರೆ ಹಾಡಿ | ೧ | ೦೨ | ೦೧ | ೦೬ | ೦೩ | ೦೦ | ೦೦ | ೦೦ | ೦೨ | ೦೦ | ೦೦ | ೧೪ |
| ೦೯ | ೧ | ಮಾನಿಮೂಲೆ ಹಾಡಿ | ೧ | ೦೬ | ೦೩ | ೦೮ | ೦೨ | ೦೦ | ೦೦ | ೦೦ | ೦೦ | ೦೦ | ೦೦ | ೧೯ |
| ೧೦ | ೧ | ಮಾಳದ ಹಾಡಿ | ೧ | ೬೪ | ೦೪ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೬೮ |
| ೧೧ | ೧ | ಬಳ್ಳೇ ಹಾಡಿ | ೧ | ೧೨ | ೦೮ | ೦೭ | ೦೪ | ೦೩ | ೦೦ | ೦೦ | ೦೦ | ೦೦ | ೦೧ | ೩೫ |
| ೧೨ | ೧ | ಉದ್ಬೂರು ಕೆರೆ ಹಾಡಿ | ೧ | ೧೪ | ೦೦ | ೦೧ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೧೫ |
| ೧೩ | ೧ | ಬಾವಲಿ& ಕೆರೆಗದ್ದೆಹಾಡಿ | ೧ | ೦೧ | ೦೪ | ೦೧ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೦೬ |
| | | | ೩ | ೦೬ | ೦೭ | ೦೭ | ೦೦ | ೦೧ | ೦೨ | ೦೦ | ೦೦ | ೦೦ | ೦೦ | ೨೩ |
| ೧೪ | ೧ | ಗೋಳೂರು ಹಾಡಿ | ೧ | ೧೪ | ೧೩ | ೧೫ | ೦೬ | ೦೩ | ೦೦ | ೦೦ | ೦೦ | ೦೦ | ೦೦ | ೫೧ |
| ೧೫ | ೧ | ಆನೆಮಾಳ | ೧ | ೨೧ | ೧೧ | ೧೫ | ೦೩ | ೦೪ | ೦೦ | ೦೦ | ೦೦ | ೦೦ | ೦೦ | ೫೪ |
| ೧೬ | ೧ | ಬೋಗಾಪುರ | ೧ | ೧೭ | ೦೮ | ೦೧ | ೦೦ | ೦೦ | ೦೦ | ೦೦ | ೦೦ | ೦೧ | ೦೦ | ೨೭ |
| ೧೭ | ೨ | ಮರಳಕಟ್ಟೆ ಎ | ೧ | ೧೬ | ೦೪ | ೦೨ | ೦೧ | ೦೦ | ೦೦ | ೦೦ | ೦೦ | ೦೦ | ೦೦ | ೨೪ |
| ೧೮ | ೨ | ಮರಳಕಟ್ಟೆ ಬಿ | ೧ | ೨೮ | ೦೪ | ೦೮ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೪೦ |
| ೧೯ | ೨ | ಮನಗನಕೆರೆ ಹಾಡಿ | ೧ | ೦೦ | ೧೫ | ೦೬ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೨೧ |
| ೨೦ | ೨ | | ೪ | ೦೦ | ೦೦ | ೦೦ | ೦೩ | ೦೦ | ೦೦ | ೦೦ | ೦೦ | ೦೦ | ೦೦ | ೦೩ |
| ೨೧ | ೨ | ಹಳೆಕೆರೆ ಹಾಡಿ | ೧ | ೧೩ | ೧೫ | ೦೭ | ೦೧ | ೦೨ | ೦೦ | ೦೦ | ೦೦ | ೦೦ | ೦೦ | ೩೮ |
| ೨೨ | ೨ | ಕೋಗಿಲವಾಡಿ ವರ್ತಿ | ೧ | ೦೪ | ೦೪ | ೦೧ | ೦೭ | ೦೪ | ೦೩ | ೦೩ | ೦೩ | ೦೪ | ೦೩ | ೩೬ |
| | | ಒಟ್ಟು | | ೨೩೩ | ೧೧೫ | ೧೧೩ | ೩೭ | ೨೧ | ೧೦ | ೦೮ | ೦೯ | ೦೭ | ೦೪ | ೫೫೮ |

(ಮೂಲ: ಯೋಜನಾ ಸಮನ್ವಯಾಧಿಕಾರಿಗಳ ಕಛೇರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಮೈಸೂರು.)

**ತಾಲ್ಲೂಕು ಸಂಕೇತಗಳು:** ೧–ಹೆಗ್ಗಡದೇವನಕೋಟೆ, ೨–ಪಿರಿಯಾಪಟ್ಟಣ. **ಆದಿವಾಸಿ ಪಂಗಡಗಳ ಸಂಕೇತಗಳು:** ೧–ಜೇನು ಕುರುಬ, ೨–ಬೆಟ್ಟ ಕುರುಬ, ೩–ಯರವ, ೪–ಸೋಲಿಗ.

**ಭೂ ವಿಸ್ತೀರ್ಣದ ಸಂಕೇತಗಳು:** 1) ೦೧-೦೫ಗುಂಟೆ. 2) ೦೬-೧೦ ಗುಂಟೆ. 3) ೧೧-೨೦ ಗುಂಟೆ. 4) ೨೧-೩೦ ಗುಂಟೆ. 5) ೩೧-೪೦ ಗುಂಟೆ. 6) ೧.೦೧-೧.೧೦ ಎಕರೆ. 7) ೧.೧೧- ೧.೨೦ ಎಕರೆ. 8) ೧.೨೧- ೨.೦೦ ಎಕರೆ. 9) ೨.೦೧- ೩.೦೦ ಎಕರೆ. 10) ೩ ಎಕರೆಗಿಂತ ಹೆಚ್ಚು.

ಕೋಷ್ಟಕ ೩.೩ ಅರಣ್ಯ ಹಕ್ಕುಗಳ ಕಾಯಿದೆ ಅಡಿ ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ ಮತ್ತು ಪಿರಿಯಾಪಟ್ಟಣ ತಾಲ್ಲೂಕಿನಲ್ಲಿ ವೈಯಕ್ತಿಕ ಭೂಮಿ ಹಕ್ಕಿನಡಿ ಪಡೆದಿರುವ ಭೂ ವಿಸ್ತೀರ್ಣದ ಕುಟುಂಬವಾರು ವಿವರ ನೀಡುತ್ತದೆ. ೦೧-೦೫ ಗುಂಟೆ ಭೂಮಿ ಪಡೆದಿರುವ ಕುಟುಂಬಗಳ ಸಂಖ್ಯೆ ೨೩೩. ೦೬-೧೦ ಗುಂಟೆ ಭೂಮಿಯನ್ನು ೧೧೫ ಕುಟುಂಬಗಳು ಪಡೆದಿವೆ. ೧೧೩ ಕುಟಂಬಗಳು ೧೧-೨೦ ಗುಂಟೆಯಷ್ಟು ಭೂಮಿ ಪಡೆದಿವೆ. ೨೧-೩೦ ಗುಂಟೆ ಭೂಮಿಯನ್ನು ಪಡೆದಿರುವ ಕುಟುಂಬಗಳ ಸಂಖ್ಯೆ ೩೭. ೩೧-೪೦ ಗುಂಟೆ ಭೂಮಿ ಪಡೆದಿರುವ ಕುಟುಂಬಗಳ ಸಂಖ್ಯೆ ೨೧. ೧.೦೧-೧.೧೦ ಎಕರೆ ಭೂಮಿ ಪಡೆದಿರುವ ಕುಟುಂಬಗಳು ೧೦. ೧.೧೧-೧.೨೦ ಎಕರೆ ಭೂಮಿ ಪಡೆದಿರುವ ಕುಟುಂಬಗಳು ೦೮. ೧.೨೧-೨ ಎಕರೆ ಭೂಮಿ ಪಡೆದ ಕುಟುಂಬಗಳು ೦೯. ೨.೦೧-೩ ಎಕರೆ ಪಡೆದ ಕುಟುಂಬಗಳು ೦೭. ಮೂರು ಎಕರೆಗಿಂತ ಹೆಚ್ಚು ಭೂಮಿ ಪಡೆದ ಕುಟುಂಬಗಳ ಸಂಖ್ಯೆ ೦೪.

ಮೇಲಿನ ಅಂಕಿ ಸಂಖ್ಯೆಗಳನ್ನು ಗಮನಿಸಿದರೆ ಹೆಚ್ಚಿನ ಕುಟುಂಬಗಳು ಕಡಿಮೆ ಭೂಮಿ ಪಡೆದಿವೆ. ಅದು ಕೇವಲ ಅವರ ವಾಸಕ್ಕೆ ಮನೆ ಕಟ್ಟಿಕೊಳ್ಳಲೂ ಸಾಧ್ಯವಾಗದಷ್ಟು ಇರುವುದನ್ನು ಗಮನಿಸಬಹುದು. ಹೆಚ್ಚು ಭೂಮಿ ಪಡೆದಿರುವ ಕುಟುಂಬಗಳ ಸಂಖ್ಯೆ ಕೇವಲ ಬೆರಳೆಣಿಕೆಯಷ್ಟು ಮಾತ್ರ. ಹೆಚ್ಚಿನ ಭೂಮಿ ಪಡೆದಿರುವ ಫಲಾನುಭವಿಗಳು ಪಿರಿಯಾಪಟ್ಟಣ ತಾಲ್ಲೂಕಿನ ಕೋಗಿಲವಾಡಿ ವರ್ತಿ ಹಾಡಿಯ ಕುಟುಂಬಗಳಾಗಿವೆ. ಹೆಚ್ಚಿನ ಭೂಮಿ ಎಂದರೆ ೩ ಎಕರೆ ಪಡೆದಿರುವ ಕೆಲವೇ ಕುಟುಂಬಗಳಿವೆ. ಭೂಮಿ ಪಡೆದಿರುವ ಕುಟುಂಬಗಳೂ ನೆರೆ ಗ್ರಾಮದ ಜನರ ಕಿರುಕುಳದಿಂದ ಬೆಳೆ ಬೆಳೆಯಲು ಸಾಧ್ಯವಾಗುತ್ತಿಲ್ಲ. ಜೊತೆಗೆ ಕಾಡು ಪ್ರಾಣಿಗಳ ಕಾಟ ಇದೆ. ನೀರಾವರಿ ಸೌಲಭ್ಯವಿಲ್ಲ. ನೀಡಿರುವ ಜಮೀನುಗಳಿಗೆ ರಸ್ತೆ ಇಲ್ಲ. ಅಲ್ಲದೆ ಅರಣ್ಯ ಇಲಾಖೆಯವರು ತೋಟಗಾರಿಕೆಯನ್ನೇ ಮಾಡಬೇಕು ಎಂದು ಒತ್ತಾಯಿಸುತ್ತಿದ್ದಾರೆ. ಇಂತಹ ನೂರಾರು ಸಮಸ್ಯೆಗಳನ್ನು ಇಲ್ಲಿ ಗಮನಿಸಲಾಗಿದೆ.

### ೩.೮.೪. ಮೈಸೂರು ಜಿಲ್ಲೆಯಲ್ಲಿ ಸಮುದಾಯ ಹಕ್ಕು ಪಡೆದಿರುವುದು

ಅರಣ್ಯ ಹಕ್ಕುಗಳ ಕಾಯಿದೆ ಕೊಡಮಾಡಿರುವ ಮತ್ತೊಂದು ಹಕ್ಕು 'ಸಮುದಾಯ ಹಕ್ಕು'. ಅಂದರೆ ಅರಣ್ಯವಾಸಿಗಳು ಮತ್ತು ಪಾರಂಪರಿಕ ಅರಣ್ಯ ಅವಲಂಭಿತರು ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹಿಸುವ ಮತ್ತು ಮಾರಾಟ ಮಾಡುವ ಅಧಿಕೃತ ಹಕ್ಕು.

ಇದನ್ನು ಮೈಸೂರು ಜಿಲ್ಲೆಯಲ್ಲಿ ಎಷ್ಟು ಹಾಡಿ/ಪೋಡುಗಳಿಗೆ ನೀಡಲಾಗಿದೆ ಎಂಬುದರ ವಿವರವನ್ನು ಕೋಷ್ಟಕ ೩.೪ ರಲ್ಲಿ ವಿಂಗಡಿಸಲಾಗಿದೆ.

**ಕೋಷ್ಟಕ :೩.೪: ಮೈಸೂರು ಜಿಲ್ಲೆಯಲ್ಲಿ ತಾಲ್ಲೂಕುವಾರು ಸಮುದಾಯ ಹಕ್ಕು ಪಡೆದಿರುವ ವಿವರ**

| ೧ | ೨ | ೩ | ೪ | ೫ | ೬ |
|---|---|---|---|---|---|
| ೦೧ | ಮೈಸೂರು | ೦ | ೦ | ೦ | ೦ |
| ೦೨ | ಹೆಚ್.ಡಿ.ಕೋಟೆ | ೯೦ | ೫೭ | ೧೪ | ೭೬ |
| ೦೩ | ಹುಣಸೂರು | ೩೦ | ೩೦ | ೦೦ | ೩೦ |
| ೦೪ | ನಂಜನಗೂಡು | ೦೫ | ೦೫ | ೦೦ | ೦೫ |
| ೦೫ | ಪಿರಿಯಾಪಟ್ಟಣ | ೨೧ | ೧೫ | ೦೫ | ೧೬ |
| | ಒಟ್ಟು | ೧೪೬ | ೧೦೭ | ೧೯ | ೧೨೭ |

(ಮೂಲ: ಯೋಜನಾ ಸಮನ್ವಯಾಧಿಕಾರಿಗಳ ಕಛೇರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಮೈಸೂರು.)

**ತಲೆ ಬರಹಗಳ ಸಂಕೇತಗಳು:** ೧-ಕ್ರಮ ಸಂಖ್ಯೆ, ೨- ತಾಲ್ಲೂಕು , ೩- ಒಟ್ಟು ರಚಿಸಲ್ಪಟ್ಟ ಅರಣ್ಯ ಹಕ್ಕು ಸಮಿತಿಗಳು, ೪-ಸಮುದಾಯ ಹಕ್ಕುಗಳಿಗೆ ಅರ್ಜಿ ಸಲ್ಲಿಸಿದ ಒಟ್ಟು ಹಾಡಿ/ ಪೋಡುಗಳು, ೫-ಸಮುದಾಯ ಹಕ್ಕುಗಳನ್ನು ಪಡೆದ ಒಟ್ಟು ಹಾಡಿ/ ಪೋಡುಗಳು, ೬- ಇನ್ನೂ ಸಮುದಾಯ ಹಕ್ಕುಗಳನ್ನು ಪಡೆಯಬೇಕಾಗಿರುವ ಹಾಡಿ/ಪೋಡುಗಳು.

ಕೋಷ್ಟಕ ೩.೪ ಮೈಸೂರು ಜಿಲ್ಲೆಯಲ್ಲಿ ತಾಲ್ಲೂಕುವಾರು ಸಮುದಾಯ ಪಡೆದ ಕುಟುಂಬಗಳ ಮಾಹಿತಿ ಹೊದಗಿಸುತ್ತದೆ. ಒಟ್ಟು ೧೪೬ ಹಾಡಿಗಳು ಸಮುದಾಯ ಹಕ್ಕಿಗಾಗಿ ಅರ್ಜಿ ಸಲ್ಲಿಸಿವೆ.

ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿ ೫೭ ಅರ್ಜಿಗಳು ಸಲ್ಲಿಸಲ್ಪಟ್ಟಿವೆ. ಇದರಲ್ಲಿ ೧೪ ಹಾಡಿಗಳಿಗೆ ಅಂದರೆ ಶೇಕಡಾ ೧೫.೫೫ ರಷ್ಟಕ್ಕೆ ಮಾತ್ರ ಸಮುದಾಯ ಹಕ್ಕು ಮಂಜೂರು ಮಾಡಲಾಗಿದೆ. ಶೇಕಡಾ ೮೪.೪೪ ರಷ್ಟು ಹಾಡಿಗಳಿಗೆ ಸಮುದಾಯ ಹಕ್ಕನ್ನು ನಿರಾಕರಿಸಲಾಗಿದೆ. ಇದಕ್ಕೆ ಯಾವುದೇ ಸಕಾರಣವನ್ನೂ ನೀಡಿರುವುದಿಲ್ಲ.

ಹುಣಸೂರು ತಾಲ್ಲೂಕಿನಿಂದ ಸಲ್ಲಿಸಲ್ಪಟ್ಟ ೩೦ ಹಾಡಿಗಳಿಗೂ ಅಂದರೆ ಶೇಕಡಾ ೧೦೦ ರಷ್ಟು ತಿರಸ್ಕರಿಸಲ್ಪಟ್ಟಿವೆ. ನಂಜನಗೂಡು ತಾಲ್ಲೂಕಿನಿಂದ ಸಲ್ಲಿಸಲ್ಪಟ್ಟ ೦೫ ಹಾಡಿಗಳಿಗೂ ಅಂದರೆ ಶೇಕಡಾ ೧೦೦ ರಷ್ಟು ಸಮುದಾಯ ಹಕ್ಕನ್ನು ನಿರಾಕರಿಸಲಾಗಿದೆ. ಪಿರಿಯಾಪಟ್ಟಣ ತಾಲ್ಲೂಕಿನಲ್ಲಿ ೨೧ ಅರ್ಜಿಗಳಲ್ಲಿ ೦೫ ಹಾಡಿಗಳಿಗೆ ಅಂದರೆ ಶೇಕಡಾ ೭೬.೧೯ ೨೩.೮೦ ರಷ್ಟು ಹಾಡಿಗಳಿಗೆ ಸಮುದಾಯ ಹಕ್ಕು ವಿತಳಸಲಾಗಿದೆ. ಶೇಕಡಾ ೭೬.೧೯

ರಷ್ಟು ಹಾಡಿಗಳಿಗೆ ನಿರಾಕರಿಸಲಾಗಿದೆ. ಇಲ್ಲಿಯೂ ಕೂಡ ಯಾವುದೇ ಸಕಾರಣ ನೀಡಿರುವುದಿಲ್ಲ.

ಆದಿವಾಸಿ ಸಮುದಾಯಗಳಿಗೆ ಅರಣ್ಯದ ಕಿರು ಉತ್ಪನ್ನಗಳೇ ಜೀವನ ಆಧಾರ. ಇವುಗಳ ಸಂಗ್ರಹ ಕೌಶಲ್ಯ ಹೊರತು ಪಡಿಸಿ ಉಳಿದ ಉದ್ಯೋಗ ಆದಿವಾಸಿಗಳಿಗೆ ಬಾರದು. ಸಮುದಾಯ ಹಕ್ಕು ಇಲ್ಲದ ಹಾಡಿಯ ಜನರು ಅರಣ್ಯದಿಂದ ಕಿರು ಉತ್ಪನ್ನಗಳನ್ನು ಸಂಗ್ರಹಿಸುವುದು ಅಪರಾದ ಎಂಬುದು ಅರಣ್ಯ ಮತ್ತು ವನ್ಯ ಜೀವಿ ಪರಿಸರ ಇಲಾಖೆಯ ಉವಾಚ. ಒಟ್ಟಾರೆ ೧೪೬ ಅರ್ಜಿಗಳಲ್ಲಿ ೧೯ ಅರ್ಜಿಗಳನ್ನು ಅಂದರೆ ಶೇಕಡಾ ೧೩.೦೧ ರಷ್ಟು ಮಾತ್ರ ಮಾನ್ಯ ಮಾಡಲಾಗಿದೆ. ಉಳಿದ ಶೇಕಡಾ ೮೬.೯೮ ರಷ್ಟು ಹಾಡಿಗಳಿಗೆ ಸಮುದಾಯ ಹಕ್ಕನ್ನು ತಿರಸ್ಕರಿಸಲಾಗಿದೆ. ಅಲ್ಲದೆ ಇನ್ನೂ ಕೂಡ ಅರ್ಜಿ ಸಲ್ಲಿಸದೇ ಇರುವ ಹಾಡಿಗಳು ೫೫ (೨೦೧ ರಲ್ಲಿ ೧೪೬ ಹಾಡಿ/ಪೋಡುಗಳು ಅರ್ಜಿಸಲ್ಲಿಸಿವೆ). ಹಾಗಾಗಿ ಅರ್ಜಿ ಸಲ್ಲಿಸದೇ ಇರುವ ಮತ್ತು ಅರ್ಜಿ ನಿರಾಕರಿಸಿರುವ (೫೫+೧೨೭=೧೮೨) ೧೮೨ (ಮೈಸೂರು ಜಿಲ್ಲೆಯ ಹಾಡಿಯ ಪಟ್ಟಿಗಾಗಿ ಅನುಬಂಧ ೩ನ್ನು ಗಮನಿಸುವುದು) ಹಾಡಿಗಳಲ್ಲಿ ಅರಣ್ಯ ಕಿರು ಉತ್ಪನ್ನಗಳ ಸಂಗ್ರಹಕ್ಕೆ ಹಲವು ಅಡ್ಡಿ ಆತಂಕಗಳನ್ನು ಗಮನಿಸಲಾಗಿದೆ. ಇವರ ನಿತ್ಯದ ಬದುಕು ಕೂಡ ಯಾತನಾಮಯವಾಗಿರುವುದನ್ನು ಅಧ್ಯಯನದ ಸಂದರ್ಭದಲ್ಲಿ ಗಮನಿಸಲಾಗಿದೆ.

ಕೆಲವು ಹಾಡಿಗಳಲ್ಲಿ ಕಾಡಿಗೆ ಕಟ್ಟಿಗೆ ತರಲು ಪುರುಷರನ್ನು ಅರಣ್ಯಕ್ಕೆ ಬಿಡುತ್ತಿಲ್ಲ ಎಂಬ ಅಂಶ ವ್ಯಕ್ತವಾಗಿದೆ. ಆದಿವಾಸಿ ಮಹಿಳೆಯರು ಕಟ್ಟಿಗೆ ತರಲು ಕಾಡಿಗೆ ತೆರಳಿದಾಗ ಅರಣ್ಯ ಇಲಾಖೆಯ ಕೆಳ ಹಂತದ ಸಿಬ್ಬಂದಿ ಕಿರುಕುಳ ಕೊಡುವುದನ್ನು ಆದಿವಾಸಿ ಮಹಿಳೆಯರು ಹಂಚಿಕೊಂಡಿದ್ದಾರೆ. ಹಲವು ಕಡೆ ಅರಣ್ಯ ಇಲಾಖೆ ಕಾಡಿನಲ್ಲಿ ಸಿಸಿ ಕ್ಯಾಮೆರಾ ಇಟ್ಟಿರುವುದು ಆದಿವಾಸಿಗಳ ಖಾಸಗೀ ಬದುಕನ್ನು ಕಸಿದು ಕೊಂಡಂತಾಗಿದೆ. ಬಳ್ಳೆ ಹಾಡಿಯಲ್ಲಿ ಮಹಿಳೆಯರು ಹೇಳುವಂತೆ ನೀರಿನ ಮೂಲದ ಬಳಿ ಸಿಸಿ ಕ್ಯಾಮೆರಾ ಇಟ್ಟಿದ್ದಾರೆ. ಇದರಿಂದ ನಾವು ಹೊಳೆಯಲ್ಲಿ ಸ್ನಾನ ಮಾಡುವುದು ಸಾಧ್ಯವಿಲ್ಲದಾಗಿದೆ. ಶೌಚಾಲಯಕ್ಕೆ ತೆರಳುವುದೂ ಕಷ್ಟಕರವಾಗಿದೆ. ಆದಿವಾಸಿಗಳ ಖಾಸಗೀ ಬದುಕನ್ನು ಕಿತ್ತು ಕೊಳ್ಳುತ್ತಿರುವ ಅರಣ್ಯ ಇಲಾಖೆಯ ದೌರ್ಜನ್ಯಕ್ಕೆ ಕೊನೆ ಇಲ್ಲವೆ? ಕಾಯಿದೆಯಲ್ಲಿ ಕೊಡಲಾಗಿರುವ ಸಮುದಾಯ ಹಕ್ಕುಗಳು ಎಂದರೆ ಆದಿವಾಸಿಗಳೇ ಸಮುದಾಯದ ಆಸ್ತಿಯೇ ಎಂಬ ಪ್ರಶ್ನೆಯನ್ನು ಕೇಳುತ್ತಾರೆ.

## ೩.೮.೫. ಹೆಗ್ಗಡದೇವನಕೋಟೆ ಮತ್ತ ಪಿರಿಯಾಪಟ್ಟಣ ತಾಲ್ಲೂಕುಗಳಲ್ಲಿ ಹಾಡಿ/ಪೋಡು/ಕಾಲೊನಿವಾರು ಸಮುದಾಯ ಹಕ್ಕು ಪಡೆದಿರುವುದು

ಮೈಸೂರು ಜಿಲ್ಲೆಯಲ್ಲಿ ಹೆಗ್ಗಡದೇವನಕೋಟೆ ಮತ್ತ ಪಿರಿಯಾಪಟ್ಟಣ ತಾಲ್ಲೂಕುಗಳ ೧೯ ಹಾಡಿ/ಪೋಡುಗಳಿಗೆ ಮಾತ್ರ ಸಮುದಾಯ ಹಕ್ಕುಗಳನ್ನು ವಿತರಿಸಲಾಗಿದೆ. ಇದರ ವಿವರವನ್ನು ಕೋಷ್ಟಕ ೩.೫ ರಲ್ಲಿ ವಿಂಗಡಿಸಿ ಹೇಳಲಾಗಿದೆ.

**ಕೋಷ್ಟಕ:೩.೫:ಹೆಗ್ಗಡದೇವನಕೋಟೆ ಮತ್ತು ಪಿರಿಯಾಪಟ್ಟಣ ತಾಲ್ಲೂಕುಗಳಲ್ಲಿ ಹಾಡಿ/ಪೋಡು/ಕಾಲೊನಿವಾರು ಸಮುದಾಯ ಹಕ್ಕು ಪಡೆದಿರುವ ವಿವರ**

| ೧ | ೨ | ೩ | ೪ | ೫ | ೬ |
|---|---|---|---|---|---|
| ೦೧ | ೧ | ಸೇಬಿನಕೊಲ್ಲಿ ಹಾಡಿ | ೧೯ | ೮೨ | ೧ |
| ೦೨ | ೧ | ಹೊಸೂರು ಹಾಡಿ | ೨೧ | ೧೦೨ | ೧ |
| ೦೩ | ೧ | ಮೂಲೆಯೂರು ಹಾಡಿ | ೨೯ | ೧೪೨ | ೧&೩ |
| ೦೪ | ೧ | ಮಚ್ಚೂರು ಹಾಡಿ | ೩೧ | ೧೨೬ | ೩ |
| ೦೫ | ೧ | ತಿಮ್ಮನ ಹೊಸಹಳ್ಳಿ | ೩೯ | ೨೨೧ | ೨ |
| ೦೬ | ೧ | ಡಿ.ಬಿ.ಕುಪ್ಪೆ | ೨೬ | ೧೩೦ | ೨ |
| ೦೭ | ೧ | ಮಚ್ಚೂರು ಕೆರೆ ಹಾಡಿ | ೩೧ | ೧೨೬ | ೧ |
| ೦೮ | ೧ | ಮಾನಿಮೂಲೆ ಹಾಡಿ | ೧೬ | ೭೯ | ೧ |
| ೦೯ | ೧ | ಮಾಳದ ಹಾಡಿ | ೪೯ | ೨೪೭ | ೧ |
| ೧೦ | ೧ | ಬಳ್ಳೇ ಹಾಡಿ | ೮೧ | ೩೨೯ | ೧ |
| ೧೧ | ೧ | ಉದ್ಬೂರು ಕೆರೆ ಹಾಡಿ | ೬೪ | ೧೬೨ | ೧ |
| ೧೨ | ೧ | ಬಾವಲಿ & ಕೆರೆಗದ್ದೆಹಾಡಿ | ೪೦ | ೧೭೯ | ೧&೩ |
| ೧೩ | ೧ | ಗೋಳೂರು ಹಾಡಿ | ೯೦ | ೩೭೦ | ೧ |
| ೧೪ | ೧ | ಆನೆಮಾಳದ ಹಾಡಿ | ೬೬ | ೧೬೨ | ೧ |
| ೧೫ | ೨ | ಮರಳಕಟ್ಟೆ ಎ | ೬೪ | ೩೨೬ | ೧ |
| ೧೬ | ೨ | ಮರಳಕಟ್ಟೆ ಬಿ | ೬೧ | ೩೧೯ | ೧ |
| ೧೭ | ೨ | ಮನಗನಕೆರೆ ಹಾಡಿ | ೩೪ | ೧೬೯ | ೧&೪ |
| ೧೮ | ೨ | ಹಳೇಕೆರೆ ಹಾಡಿ | ೬೨ | ೩೦೭ | ೧ |
| ೧೯ | ೨ | ಕೋಗಿಲವಾಡಿ ವರ್ತಿ | ೩೬ | ೧೩೬ | ೧ |
| | | ಒಟ್ಟು | ೮೫೯ | ೩೭೧೪ | |

(ಮೂಲ: ಯೋಜನಾ ಸಮನ್ವಯಾಧಿಕಾರಿಗಳ ಕಛೇರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಮೈಸೂರು.)

**ತಲೆ ಬರಹದ ಸಂಕೇತಗಳು:** ೧–ಕ್ರಮ ಸಂಖ್ಯೆ, ೨–ತಾಲ್ಲೂಕು, ೩–ಪೋಡು/ಹಾಡಿ/ ಕಾಲೋನಿ ಹೆಸರು, ೪– ಒಟ್ಟು ಕುಟುಂಬಗಳು, ೫– ಕುಟುಂಬಗಳ ಒಟ್ಟು ಜನಸಂಖ್ಯೆ, ೬– ಆದಿವಾಸಿ ಪಂಗಡದ ಹೆಸರು. **ತಾಲ್ಲೂಕು ಸಂಕೇತಗಳು:** ೧–ಹೆಗ್ಗಡದೇವನಕೋಟೆ, ೨–ಪಿರಿಯಾಪಟ್ಟಣ. **ಆದಿವಾಸಿ ಪಂಗಡಗಳ ಸಂಕೇತಗಳು:** ೧–ಜೇನು ಕುರುಬ, ೨–ಬೆಟ್ಟ ಕುರುಬ, ೩–ಯರವ, ೪–ಸೋಲಿಗ.

ಕೋಷ್ಟಕ ೩.೫ ಮೈಸೂರು ಜಿಲ್ಲೆಯಲ್ಲಿ ಹಾಡಿ/ಪೋಡು/ಕಾಲೊನಿವಾರು ಸಮುದಾಯ ಹಕ್ಕು ಪಡೆದಿರುವ ಮಾಹಿತಿ ನೀಡುತ್ತದೆ. ಜಿಲ್ಲೆಯ ಐದು ತಾಲ್ಲೂಕಿನ ಒಟ್ಟು ೨೦೧ ಹಾಡಿಗಳಲ್ಲಿ ೮೪೬೨ ಕುಟುಂಬಗಳಿವೆ. ಒಟ್ಟು ಆದಿವಾಸಿ ಜನಸಂಖ್ಯೆ ೩೦೮೪೦. ಕೋಷ್ಟಕದಲ್ಲಿ ತೋರಿಸಿರುವಂತೆ ಸಮುದಾಯ ಹಕ್ಕು ದೊರಕಿರುವುದು ಹೆಗ್ಗಡದೇವನಕೋಟೆ ತಾಲ್ಲೂಕಿನ ೧೪ ಹಾಡಿಗಳು ಮತ್ತು ಪಿರಿಯಾಪಟ್ಟಣ ತಾಲ್ಲೂಕಿನ ೦೫ ಹಾಡಿಗಳಿಗೆ. ಒಟ್ಟು ಸಮುದಾಯ ಹಕ್ಕು ದೊರಕಿರುವ ೧೯ ಹಾಡಿಗಳಲ್ಲಿ ೩೭೧೪ ಜನರು ಇದರ ಫಲವನ್ನು ಪಡೆಯುತ್ತಿದ್ದಾರೆ. ಇದು ಶೇಕಡಾ ೧೨.೦೪ ರಷ್ಟು ಜನಸಂಖ್ಯೆಯಾಗಿದೆ. ಉಳಿದ ಶೇಕಡಾ ೮೭.೯೫ ರಷ್ಟು ಜನಸಂಖ್ಯೆಗೆ ಸಮುದಾಯ ಹಕ್ಕು ಇಲ್ಲವಾಗಿದೆ.

ಮೇಲಿನ ಅಂಕಿ ಸಂಖ್ಯೆಗಳನ್ನು ಗಮನಿಸಿದರೆ ಕಾಯಿದೆಯ ಅನುಷ್ಠಾನ ಪರಿಣಾಮಕಾರಿಯಾಗಿಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ. ಅಲ್ಲದೆ ಕೊಟ್ಟಿರುವ ಹಾಡಿಗಳಿಗೂ ಹಲವು ನಿರ್ಭಂಧಗಳನ್ನು ಹೇರಲಾಗಿದೆ. ಮುಖ್ಯವಾಗಿ ಪ್ರದೇಶ ವ್ಯಾಪ್ತಿಯನ್ನು ಸೀಮಿತ ಗೊಳಿಸಿದ್ದಾರೆ. ಕೇವಲ ೫ ರಿಂದ ೬ ಕಿಲೋಮೀಟರ್ ವ್ಯಾಪ್ತಿಯಲ್ಲಿ ಆದಿವಾಸಿಗಳಿಗೆ ಬೇಕಾದ ಸಾಂಪ್ರದಾಯಿಕ ಕಿರು ಉತ್ಪನ್ನಗಳು ದೊರಕದು. ಮತ್ತೊಂದು ಮಿತಿ ಎಂದರೆ ಅರಣ್ಯ ಕಿರು ಉತ್ಪನ್ನಗಳಾದ ನೆಲ್ಲಿ, ಪಾಚಿ, ಜೇನು, ಅಂಟುವಾಳ ಸಂಗ್ರಹಕ್ಕೆ ಮಾತ್ರ ಅನುಮತಿ ನೀಡಿರುವುದು. ಮಸಾಲೆ ಪದಾರ್ಥಗಳನ್ನು ಸಂಗ್ರಹಿಸಲು ಅನುಮತಿ ನೀಡಿಲ್ಲ. ಮೀನು ಹಿಡಿಯಲು ಅವಕಾಶ ಇಲ್ಲ, ದನ ಮೇಯಿಸುವಂತಿಲ್ಲ. ಇದು ಹೇಗಿದೆ ಎಂದರೆ 'ದೇವರು ವರ ಕೊಟ್ಟರೂ ಪೂಜಾರಿ ವರ ಕೊಡಲಾರ' ಎನ್ನುವಂತಿದೆ. ಎಂದು ಆದಿವಾಸಿಗಳು ದೂರುತ್ತಾರೆ.

**೩.೮.೬.ಚಾಮರಾಜನಗರ ಜಿಲ್ಲೆಯಲ್ಲಿ ವೈಯಕ್ತಿಕ ಭೂಮಿ ಹಕ್ಕು ಪಡೆದಿರುವುದು**

ಅರಣ್ಯ ಹಕ್ಕುಗಳ ಕಾಯಿದೆಯಂತೆ ವೈಯಕ್ತಿಕ ಭೂಮಿ ಹಕ್ಕು ಪಡೆದಿರುವ ಮಾಹಿತಿಯನ್ನು ತಾಲ್ಲೂಕುವಾರು ಇಲ್ಲಿ ವಿಂಗಡಿಸಲಾಗಿದೆ.

**ಕೋಷ್ಟಕ:೩.೬: ಚಾಮರಾಜನಗರ ಜಿಲ್ಲೆಯಲ್ಲಿ ತಾಲ್ಲೂಕುವಾರು ವೈಯಕ್ತಿಕ ಭೂಮಿ ಹಕ್ಕು ಪಡೆದ ವಿವರ**

| ೧ | ೨ | ೩ | ೪ | ೫ | ೬ | ೭ |
|---|---|---|---|---|---|---|
| ೦೧ | ಚಾಮರಾಜನಗರ | ೧೦೫೨ | ೪೮೯ | ೪೮೯ | ೦೦ | ಅರ್ಜಿ ನಮೂನೆಯ ಅಪೂರ್ಣ ಭರ್ತಿ |
| ೦೨ | ಯಳಂದೂರು | ೪೬೨ | ೧೨೫೪ | ೧೧೨ | ೧೧೪೨ | |
| ೦೩ | ಕೊಳ್ಳೇಗಾಲ | ೩೨೦೦ | ೧೨೦೫ | ೧೦೭೪ | ೧೩೧ | |
| ೦೪ | ಗುಂಡ್ಲುಪೇಟೆ | ೧೦೪೧ | ೧೮ | ೧೮ | ೦೦ | |
| ಒಟ್ಟು | | ೪೮೫೫ | ೨೮೮೬ | ೧೬೧೩ | ೧೨೭೩ | |

(ಮೂಲ:೧.ತಾಲ್ಲೂಕು ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿ, ಚಾಮರಾಜನಗರ ಮತ್ತು ಕೊಳ್ಳೇಗಾಲ, ಚಾಮರಾಜನಗರ ಜಿಲ್ಲೆ. ೨.ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ. ೩.ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ)

**ತಲೆಬರಹದ ಸಂಕೇತಗಳು:** ೧–ಕ್ರಮ ಸಂಖ್ಯೆ, ೨–ತಾಲ್ಲೂಕು, ೩– ಆದಿವಾಸಿ ಕುಟುಂಬಗಳ ಒಟ್ಟು ಸಂಖ್ಯೆ, ೪–ಗ್ರಾಮ ಅರಣ್ಯ ಹಕ್ಕು ಸಮಿತಿಯಿಂದ ಬಂದಿರುವ ಅರ್ಜಿಗಳು, ೫– ಮಾನ್ಯ ಮಾಡಿದ ಅರ್ಜಿಗಳು, ೬– ತಿರಸ್ಕೃತ ಅರ್ಜಿಗಳ ಸಂಖ್ಯೆ, ೭– ಅರ್ಜಿ ತಿರಸ್ಕೃತಕ್ಕೆ ನೀಡಿರುವ ಕಾರಣಗಳು.

ಕೋಷ್ಟಕ ೩.೦೬ ಅರಣ್ಯ ಹಕ್ಕುಗಳ ಕಾಯಿದೆ ಅಡಿ ಚಾಮರಾಜನಗರ ಜಿಲ್ಲೆಯಲ್ಲಿ ವೈಯಕ್ತಿಕ ಭೂಮಿ ಹಕ್ಕು ಪಡೆದ ಮಾಹಿತಿ ನೀಡುತ್ತದೆ. ಜಿಲ್ಲೆಯ ನಾಲ್ಕು ತಾಲ್ಲೂಕುಗಳಲ್ಲಿ ಒಟ್ಟು ೪೮೫೫ ಆದಿವಾಸಿ ಕುಟುಂಬಗಳಿವೆ. ಅದರಲ್ಲಿ ೨೮೮೬ ಅಂದರೆ ಶೇಕಡಾ ೫೯.೪೪ ರಷ್ಟು ಕುಟುಂಬಗಳು ವೈಯಕ್ತಿಕ ಭೂಮಿ ಹಕ್ಕಿಗಾಗಿ ಅರ್ಜಿಗಳನ್ನು ಸಲ್ಲಿಸಿರುತ್ತಾರೆ. ಇದರಲ್ಲಿ ೧೬೧೩ ಅಂದರೆ ಶೇಕಡಾ ೫೫.೮೯ ಅರ್ಜಿಗಳನ್ನು ಮಾನ್ಯ ಮಾಡಲಾಗಿದೆ. ೧೨೭೩ ಅಂದರೆ ಶೇಕಡಾ ೪೪.೧೦ ಅರ್ಜಿಗಳನ್ನು ತಿರಸ್ಕರಿಸಲಾಗಿದೆ.

ಮೇಲಿನ ಅಂಕಿ ಸಂಖ್ಯೆಗಳ ಪ್ರಕಾರ ಅರ್ಜಿ ಸಲ್ಲಿಸದೇ ಇರುವವರು ೧೯೬೯, ಅರ್ಜಿ ತಿರಸ್ಕೃತರು ೧೨೭೩. (೪೮೫೫–೨೮೮೬=೧೯೬೯+೧೨೭೩= ೩೨೪೨) ಹಾಗಾಗಿ ೩೨೪೨ ಅಂದರೆ ಶೇಕಡಾ ೬೬.೭೭ (೩೨೪೨/೪೮೫೫ x ೧೦೦=೬೬.೭೭) ರಷ್ಟು ಕುಟುಂಬಗಳಿಗೆ ವೈಯಕ್ತಿಕ ಹಕ್ಕನ್ನು ಮಾನ್ಯ ಮಾಡಬೇಕಿದೆ.

ಕೋಷ್ಟಕದಲ್ಲಿ ಗಮನಿಸಬೇಕಾದ ಅಂಶವೆಂದರೆ ಚಾಮರಾಜನಗರ ಮತ್ತು ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಅರ್ಜಿ ಸಲ್ಲಿಸಿದ ಎಲ್ಲಾ ಕುಟುಂಬಗಳಿಗೂ ಭೂಮಿ ಮಂಜೂರು ಮಾಡಲಾಗಿದೆ. ಯಳಂದೂರು ತಾಲ್ಲೂಕಿನಲ್ಲಿ ಶೇಕಡಾ ೮.೯ ರಷ್ಟು, ಕೊಳ್ಳೇಗಾಲ ತಾಲ್ಲೂಕಿನಲ್ಲಿ ಶೇಕಡಾ ೮೯.೧೨ ರಷ್ಟು ಅಂಗೀಕರಿಸಲಾಗಿದೆ.

ಮೈಸೂರು ಜಿಲ್ಲೆಗೆ ಹೋಲಿಸಿ ನೋಡುವುದಾದರೆ ಚಾಮರಾಜನಗರ ಜಿಲ್ಲೆಯಲ್ಲಿ ವೈಯಕ್ತಿಕ ಭೂಮಿ ಹಕ್ಕನ್ನು ಮಾನ್ಯ ಮಾಡಿರುವ ಪ್ರತಿಶತ ಹೆಚ್ಚಿದೆ. ಇದಕ್ಕೆ ಕಾರಣ ಇಲ್ಲಿ ಸೋಲಿಗ ಸಮುದಾಯದವರು ಕೊಂಚ ಮಟ್ಟಿನ ತಿಳುವಳಿಕೆ ಹೊಂದಿದ್ದಾರೆ. ಹಾಗೂ ಸಂಘಟಿತ ಹೋರಾಟವನ್ನು ನಡೆಸುತ್ತಿದ್ದಾರೆ ಎಂಬುದು ಗಮನಾರ್ಹ ಅಂಶವಾಗಿದೆ.

**೩.೮.೭.ಚಾಮರಾಜನಗರ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಹಾಡಿ/ಪೋಡುವಾರು ವೈಯಕ್ತಿಕ ಭೂಮಿ ಹಕ್ಕು ಪಡೆದಿರುವುದು**

ಚಾಮರಾಜನಗರ ಜಿಲ್ಲೆಯಲ್ಲಿ ನಾಲ್ಕು ತಾಲ್ಲೂಕುಗಳಲ್ಲಿ ಒಟ್ಟು ೪೮ ಹಾಡಿ/ಪೋಡುಗಳ ೧೬೧೩ ಕುಟುಂಬಗಳಿಗೆ ವೈಯಕ್ತಿಕ ಭೂಮಿ ಹಕ್ಕು ವಿತರಿಸಿರುವುದನ್ನು ಕೋಷ್ಟಕ ೩.೭ ರಲ್ಲಿ ವಿಂಗಡಿಸಿ ಹೇಳಲಾಗಿದೆ.

**ಕೋಷ್ಟಕ : ೩.೭: ಚಾಮರಾಜನಗರ ಜಿಲ್ಲೆಯ ಚಾಮರಾಜನಗರ, ಯಳಂದೂರು, ಗುಂಡ್ಲುಪೇಟೆ ಮತ್ತು ಕೊಳ್ಳೇಗಾಲ ತಾಲ್ಲೂಕುಗಳಲ್ಲಿ ಹಾಡಿ/ಪೋಡುವಾರು ವೈಯಕ್ತಿಕ ಭೂಮಿ ಹಕ್ಕು ಪಡೆದ ವಿವರ**

| ಕ್ರ.ಸ. | ೧ | ೨ | ೩ | ೪ | ೫ | ೬ | ೭ | ೮ |
|---|---|---|---|---|---|---|---|---|
| ೦೧ | ೧ | ಬೇಡಗುಳಿ | ೧೦೩ | ೩೯೪ | ೪ | ೩೦ | ೧೨.೭೫ | ೧೨.೭೫ |
| ೦೨ | ೧ | ಹೊಸಪೋಡು | ೫೬ | ೨೨೭ | ೪ | ೩೭ | ೬೪.೯೫ | ೬೪.೯೫ |
| ೦೩ | ೧ | ಕಾಡಿಗೆರೆ | ೧೯ | ೧೨೭ | ೪ | ೧೯ | ೮.೦೭೫ | ೮.೦೭೫ |
| ೦೪ | ೧ | ಕುಂಟಗುಡಿ | ೪೯ | ೧೯೯ | ೪ | ೩೦ | ೭೮.೦೫ | ೭೮.೦೫ |
| ೦೫ | ೧ | ಮಾರಿಗುಡಿ ಪೋಡು | ೭೪ | ೧೫೦ | ೪ | ೫೯ | ೨೯.೧೩ | ೨೯.೧೩ |
| ೦೬ | ೧ | ಮೊಣಕೈ ಪೋಡು | ೧೮ | ೧೬೫ | ೪ | ೧೮ | ೧೪.೩೨ | ೧೪.೩೨ |
| ೦೭ | ೧ | ಮುನೇಶ್ವರ ಕಾಲೋನಿ | ೮೦ | ೪೦೩ | ೪ | ೩೮ | ೫೪.೨ | ೫೪.೨ |
| ೦೮ | ೧ | ಭೂತಾಣಿ ಪೋಡು | ೭೪ | ೨೯೩ | ೪ | ೭೪ | ೮೭ | ೮೭ |
| ೦೯ | ೧ | ಬಿಸಿಲುಗೆರೆ ಪೋಡು | ೨೮ | ೧೨೩ | ೪ | ೨೮ | ೨೪.೫೭ | ೨೪.೫೭ |
| ೧೦ | ೧ | ಶ್ರೀನಿವಾಸ.ಪುರ. ಕಾಲೊನಿ | ೬೨ | ೩೫೪ | ೪ | ೪೪ | ೫೨.೨೨ | ೫೨.೨೨ |
| ೧೧ | ೧ | ರಾಮಯ್ಯನ ಪೋಡು | ೧೫ | ೧೦೪ | ೪ | ೦೪ | ೧.೬ | ೧.೬ |
| ೧೨ | ೧ | ಎತ್ತೇಗೌಡನ ಪೋಡು | ೬೦ | ೪೨೫ | ೪ | ೨೮ | ೩೨.೪೫ | ೩೨.೪೫ |
| ೧೩ | ೨ | ಬಂಗ್ಲೇ ಪೋಡು | ೯೭ | ೪೮೫ | ೪ | ೯ | ೭.೯ | ೭.೯ |
| ೧೪ | ೨ | ಹೊಸಪೋಡು | ೯೪ | ೪೭೨ | ೪ | ೨೫ | ೩೨.೪ | ೩೨.೪ |
| ೧೫ | ೨ | ಮುತ್ತುಗದ್ದೆ ಪೋಡು | ೧೦೫ | ೫೩೫ | ೪ | ೫೩ | ೯೪ | ೯೪ |
| ೧೬ | ೨ | ಮಂಜಿ ಗುಂಡಿ ಪೋಡು | ೨೦ | ೯೨ | ೪ | ೧೦ | ೧೧.೬ | ೧೧.೬ |
| ೧೭ | ೨ | ಕೆ.ದೇವರಹಳ್ಳಿ | ೫೫ | ೧೬೫ | ೪ | ೧೫ | ೧೭.೯ | ೧೭.೯ |
| ೧೮ | ೩ | ದೇಶಿಪುರ | ೯೭ | ೪೮೭ | ೪ | ೧೮ | ೨೫.೧೩ | ೨೫.೬೮ |
| ೧೯ | ೪ | ಪಾಲಾರ್ | ೪೯ | ೧೬೮ | ೪ | ೪೯ | ೯೦.೧೬ | ೮೮.೩೧ |
| ೨೦ | ೪ | ವಿ.ಎಸ್.ದೊಡ್ಡಿ | ೨೩ | ೧೪೮ | ೪ | ೨೩ | ೩೭.೦೬ | ೩೭.೫ |
| ೨೧ | ೪ | ಅಸ್ತೂರು | ೨೬ | ೧೧೫ | ೪ | ೨೬ | ೩೪.೨೪ | ೩೪.೨೪ |
| ೨೨ | ೪ | ಪೊನ್ನಾಚಿ | ೨೧ | ೧೨೨ | ೪ | ೨೧ | ೨೮.೩೪ | ೨೮.೩೪ |
| ೨೩ | ೪ | ಕೆ.ಕೆ.ಪೋಡು | ೬೮ | ೪೨೦ | ೪ | ೬೮ | ೯೪.೩೯ | ೯೬.೨ |
| ೨೪ | ೪ | ಯರೆಕಟ್ಟೆ | ೧೮ | ೧೫೦ | ೪ | ೧೮ | ೨೦.೦೩ | ೧೯.೩೮ |
| ೨೫ | ೪ | ಜೇರಿಗೆಗದ್ದೆ | ೩೪ | ೩೪೦ | ೪ | ೩೪ | ೫೨.೩೭ | ೫೨.೧೯ |
| ೨೬ | ೪ | ಈಚಲುಕೆಬ್ಬೆ ದೊಡ್ಡಿ | ೩೮ | ೨೮೦ | ೪ | ೩೮ | ೬೮.೧೧ | ೭೦.೩೦ |
| ೨೭ | ೪ | ಸೇಬಿನಕೋಬೆ | ೫೫ | ೩೧೨ | ೪ | ೫೫ | ೭೭.೩೬ | ೮೮.೩೪ |
| ೨೮ | ೪ | ಪುಟ್ಟೀರಮ್ಮನ ದೊಡ್ಡಿ | ೨೦ | ೨೭೫ | ೪ | ೨೦ | ೪೩.೨೧ | ೧೬.೩೮ |
| ೨೯ | ೪ | ಕಗ್ಗಲೀಗುಂದಿ | ೧೫ | ೯೦ | ೪ | ೧೫ | ೨೪.೦೫ | ೨೪.೧೮ |
| ೩೦ | ೪ | ಮಾವತ್ತೂರು | ೩೦ | ೧೮೦ | ೪ | ೩೦ | ೩೭.೦೬ | ೩೭.೨೩ |
| ೩೧ | ೪ | ಚಿಕ್ಕಮರೂರು | ೨೪ | ೧೩೦ | ೪ | ೨೪ | ೪೮.೨೦ | ೪೮.೧೯ |
| ೩೨ | ೪ | ಮೊಳ್ಳಾಕಟ್ಟೆ | ೧೩ | ೧೪೦ | ೪ | ೧೩ | ೨೧.೦೨ | ೨೧.೧೭ |
| ೩೩ | ೪ | ಗೊಂಬೆಗಲ್ಲು | ೨೦ | ೧೨೦ | ೪ | ೨೦ | ೨೨.೧೩ | ೨೬.೦೩೮ |
| ೩೪ | ೪ | ಹಾವಿನ ಮೂಲೆ | ೭೧ | ೪೨೬ | ೪ | ೭೧ | ೧೭೧.೨೮ | ೧೭೪.೩೦ |
| ೩೫ | ೪ | ದೋಮದೊಡ್ಡಿ& ರಾ.ಗೌ.ಹಳ್ಳಿ | ೭೭ | ೪೬೪ | ೪ | ೭೭ | ೨೦೦.೧೯ | ೨೦೦.೧೯ |
| ೩೬ | ೪ | ಕೋಣನಕೆರೆ | ೪೯ | ೨೮೦ | ೪ | ೪೯ | ೧೭.೨೯ | ೯೫.೩೦ |
| ೩೭ | ೪ | ಹಂಡೆ ಕುರುಬನ ದೊಡ್ಡಿ | ೨೫ | ೧೫೦ | ೪ | ೨೫ | ೪೩.೨೪ | ೪೫ |

| ೩೮ | ೪ | ಗಾಣಿಗ ಮಂಗಲ | ೯ | ೫೪ | ೪ | ೦೯ | ೨೩.೩೯ | ೨೩.೩೯ |
|---|---|---|---|---|---|---|---|---|
| ೩೯ | ೪ | ರಾಚಪ್ಪಾಜಿ ನಗರ | ೩೦ | ೧೨೦ | ೪ | ೩೦ | ೫೭.೩೯ | ೫೧.೧೭ |
| ೪೦ | ೪ | ಕರಳಕಟ್ಟೆ | ೩೮ | ೨೨೮ | ೪ | ೩೮ | ೪೯.೩೩ | ೪೮.೨೮ |
| ೪೧ | ೪ | ನಲ್ಲಿಕದ್ರು | ೩೫ | ೨೧೦ | ೪ | ೩೫ | ೭೬.೨೫ | ೫೧.೨೦ |
| ೪೨ | ೪ | ಕೆರೆದಿಂಬ | ೧೬ | ೯೯ | ೪ | ೧೬ | ೩೮.೨೭ | ೩೦.೧೭ |
| ೪೩ | ೪ | ದಂಟಳ್ಳಿ | ೩೯ | ೧೯೫ | ೪ | ೩೯ | ೧೨೦.೮ | ೧೧೭.೨೦ |
| ೪೪ | ೪ | ಅಲಂಬಾಡಿ | ೧೭ | ೨೫ | ೪ | ೧೭ | ೩೩.೩೬ | ೩೭.೧ |
| ೪೫ | ೪ | ಹಿರಿಯಂಬಲ | ೧೨೭ | ೭೫೬ | ೪ | ೧೨೭ | ೨೮೫.೩೭ | ೨೮೫.೩೭ |
| ೪೬ | ೪ | ಕೌಳಿಹಳ್ಳ ಡ್ಯಾಂ | ೧೭ | ೧೦೨ | ೪ | ೧೭ | ೬೧.೩೪ | ೨೨.೩೨ |
| ೪೭ | ೪ | ಕಾ.ಮ. ದೊಡ್ಡಿ | ೧೯ | ೧೧೪ | ೪ | ೧೯ | ೨೭.೩೧ | ೨೨.೩೧ |
| ೪೮ | ೪ | ಹೊಸಪೋಡು | ೫೧ | ೩೦೬ | ೪ | ೫೧ | ೫೭.೧೬ | ೪೧.೨೯ |
| | | ಒಟ್ಟು | ೨೧೮೦ | ೧೧೭೧೯ | | ೧೬೧೩ | ೨೬೨೧.೭ | ೨೫೯೪.೧೫ |

(ಮೂಲ: ತಾಲ್ಲೂಕು ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿ, ಚಾಮರಾಜನಗರ, ಕೊಳ್ಳೇಗಾಲ, ಚಾಮರಾಜನಗರ ಜಿಲ್ಲೆ. ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ. ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ)

**ತಲೆ ಬರಹಗಳ ಸಂಕೇತಗಳ ವಿವರ:** ೧– ತಾಲ್ಲೂಕು, ೨–ಪೋಡು/ ಹಾಡಿ/ ಕಾಲೊನಿ ಹೆಸರು, ೩–ಒಟ್ಟು ಕುಟುಂಬಗಳು, ೪– ಕುಟುಂಬಗಳ ಒಟ್ಟು ಜನಸಂಖ್ಯೆ, ೫– ಆದಿವಾಸಿ ಪಂಗಡದ ಹೆಸರು, ೬–ಭೂಮಿ ಪಡೆದ ಕುಟುಂಬಗಳ ಸಂಖ್ಯೆ, ೭– ವೈಯಕ್ತಿಕ ಹಕ್ಕಿಗಾಗಿ ಕುಟುಂಬಗಳು ಒಟ್ಟು ಭೂಮಿಗೆ ಅರ್ಜಿ ಸಲ್ಲಿಸಿತ್ತು (ಎಕರೆಗಳಲ್ಲಿ), ೭–೨೦೦೬ ಅರಣ್ಯ ಹಕ್ಕು ಕಾಯಿದೆ ಅಡಿ ಎಷ್ಟು ಭೂಮಿ ನೀಡಲಾಗಿದೆ. **ತಾಲ್ಲೂಕು ಸಂಕೇತಗಳು**– ೧– ಚಾಮರಾಜನಗರ, ೨–ಯಳಂದೂರು, ೩–ಗುಂಡ್ಲುಪೇಟೆ, ೪–ಕೊಳ್ಳೇಗಾಲ. **ಆದಿವಾಸಿಗಳ ಸಂಕೇತಗಳು:** ೧–ಜೇನುಕುರುಬರು, ೨–ಬೆಟ್ಟಕುರುಬರು, ೩–ಯರವ, ೪–ಸೋಲಿಗರು

ಕೋಷ್ಟಕ ೩.೭ ಚಾಮರಾಜನಗರ ಜಿಲ್ಲೆಯ ನಾಲ್ಕು ತಾಲ್ಲೂಕಿನಲ್ಲಿ ವೈಯಕ್ತಿಕ ಭೂಮಿ ಹಕ್ಕು ಪಡೆದಿರುವ ಮಾಹಿತಿ ನೀಡುತ್ತದೆ. ಹಕ್ಕು ಪಡೆದಿರುವ ೪೮ ಹಾಡಿಗಳಲ್ಲಿ ಒಟ್ಟು ೧೧೭೧೯ ಜನರು ವಾಸವಾಗಿದ್ದು ೨೧೮೦ ಕುಟುಂಬಗಳಿವೆ. ಇದರಲ್ಲಿ ೧೬೧೩ ಕುಟುಂಬಗಳಿಗೆ ವೈಯಕ್ತಿಕ ಭೂಮಿ ಹಕ್ಕನ್ನು ವಿತರಿಸಲಾಗಿದೆ. ೧೬೧೩ ಕುಟುಂಬಗಳು ಒಟ್ಟು ೨೬೨೧.೦೭ ಎಕರೆ ಭೂಮಿಗೆ ಬೇಡಿಕೆ ಸಲ್ಲಿಸಿವೆ. ಮಂಜೂರಾದ ಭೂಮಿಯು ೨೫೯೪.೧೫ ಎಕರೆ. ಭೂಮಿ ಮಂಜೂರು ಮಾಡಿದ ಸರಾಸರಿ ಪ್ರತೀ ಕುಟುಂಬಕ್ಕೆ ೬೪.೩೩ ಗುಂಟೆ. ಮೈಸೂರು ಜಿಲ್ಲೆಯಲ್ಲಿ ಪ್ರತೀ ಕುಟುಂಬಕ್ಕೆ ೧೩.೬೯ ಗುಂಟೆ ವಿತರಿಸಲಾಗಿದೆ. ಇದನ್ನು ಗಮನಿಸಿದರೆ ಚಾಮರಾಜನಗರ ಜಿಲ್ಲೆಯಲ್ಲಿ ವೈಯಕ್ತಿಕ ಹಕ್ಕು ನೀಡಿರುವ ಸಂಖ್ಯೆ ಮತ್ತು ಭೂಮಿಯ ಪ್ರಮಾಣ ಎರಡರಲ್ಲೂ ಹೆಚ್ಚಿರುವುದು ಕಂಡು ಬಂದಿದೆ. ಇಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ ಭೂಮಿ ಪಡೆದಿರುವವರು ಸೋಲಿಗರು ಮಾತ್ರ ಎಂಬುದು. ಭೂಮಿ ಪಡೆದವರ ಸಂಖ್ಯೆಗಿಂತ ಪಡೆಯದವರ ಸಂಖ್ಯೆ ಇನ್ನೂ ಹೆಚ್ಚಿರುವುದನ್ನು ಗಮನಿಸಬಹುದು ಇದನ್ನು ಕೋಷ್ಟಕ ೩.೬ ರಲ್ಲಿ ತೋರಿಸಲಾಗಿದೆ.

## ೩.೮.೮.ವೈಯಕ್ತಿಕ ಹಕ್ಕಿನಡಿ ಚಾಮರಾಜನಗರ ಜಿಲ್ಲೆಯಲ್ಲಿ ಪಡೆದ ಭೂ ವಿಸ್ತೀರ್ಣದ ಮಾಹಿತಿ

ಚಾಮರಾಜನಗರ, ಯಳಂದೂರು, ಗುಂಡ್ಲುಪೇಟೆ ಮತ್ತು ಕೊಳ್ಳೇಗಾಲ ತಾಲ್ಲೂಕುಗಳಲ್ಲಿ ಪ್ರತೀ ಕುಟುಂಬ ಪಡೆದಿರುವ ಭೂ ವಿಸ್ತೀರ್ಣದ ಮಾಹಿತಿಯನ್ನು ಕೋಷ್ಟಕ ೩.೮ ರಲ್ಲಿ ೧೦ ವಿಭಾಗದಲ್ಲಿ ವಿಂಗಡಿಸಿ ನೀಡಲಾಗಿದೆ.

**ಕೋಷ್ಟಕ : ೩.೮: ಚಾಮರಾಜನಗರ ಜಿಲ್ಲೆಯ ಚಾಮರಾಜನಗರ, ಯಳಂದೂರು, ಗುಂಡ್ಲುಪೇಟೆ ಮತ್ತು ಕೊಳ್ಳೇಗಾಲ ತಾಲ್ಲೂಕುಗಳಲ್ಲಿ ಕುಟುಂಬವಾರು ವೈಯಕ್ತಿಕ ಭೂಮಿ ಹಕ್ಕು ಪಡೆದ ವಿವರ**

| ಕ್ರಸ. | ತಾಲ್ಲೂಕು | ಪೋಡು/ಹಾಡಿ/ ಕಾಲೊನಿ ಹೆಸರು | ವೈಯಕ್ತಿಕ ಭೂಮಿ ಹಕ್ಕು ಪಡೆದಿರುವ ಕುಟುಂಬಗಳ ವಿವರ | | | | | | | | | | |
|---|---|---|---|---|---|---|---|---|---|---|---|---|---|
| | | | 1 | 2 | 3 | 4 | 5 | 6 | 7 | 8 | 9 | 10 | ಒಟ್ಟು |
| ೦೧ | ೧ | ಬೇಡಗುಳಿ | ೦೩ | ೦೭ | ೦೭ | ೧೧ | ೦೨ | ೦೦ | ೦೦ | ೦೦ | ೦೦ | ೦೦ | ೩೦ |
| ೦೨ | ೧ | ಹೊಸ ಪೋಡು | ೦೦ | ೦೦ | ೦೧ | ೦೩ | ೦೨ | ೦೩ | ೦೮ | ೦೭ | ೧೦ | ೦೩ | ೩೭ |
| ೦೩ | ೧ | ಕಾಡಿಗೆರೆ | ೦೪ | ೦೬ | ೦೩ | ೦೩ | ೦೧ | ೦೧ | ೦೧ | ೦೦ | ೦೦ | ೦೦ | ೧೯ |
| ೦೪ | ೧ | ಕುಂಟಗುಡಿ | ೦೦ | ೦೦ | ೦೦ | ೦೦ | ೦೩ | ೦೧ | ೦೨ | ೦೭ | ೦೭ | ೧೦ | ೩೦ |
| ೦೫ | ೧ | ಮಾರಿಗುಡಿ ಪೋಡು | ೦೨ | ೦೯ | ೨೦ | ೨೦ | ೦೫ | ೦೨ | ೦೧ | ೦೦ | ೦೦ | ೦೦ | ೫೯ |
| ೦೬ | ೧ | ಮೊಣಕ್ಕೆ ಪೋಡು | ೦೦ | ೦೧ | ೦೩ | ೦೬ | ೦೫ | ೦೦ | ೦೨ | ೦೧ | ೦೦ | ೦೦ | ೧೮ |
| ೦೭ | ೧ | ಮುನೇಶ್ವರಕಾಲೋನಿ | ೦೦ | ೦೦ | ೦೦ | ೦೦ | ೦೨ | ೦೧ | ೩೧ | ೦೩ | ೦೧ | ೦೦ | ೩೮ |
| ೦೮ | ೧ | ಭೂತಾಣಿ ಪೋಡು | ೦೧ | ೦೦ | ೦೨ | ೧೨ | ೨೦ | ೧೧ | ೦೬ | ೧೬ | ೦೬ | ೦೦ | ೭೪ |
| ೦೯ | ೧ | ಬಿಸಿಲುಗೆರೆ ಪೋಡು | ೦೧ | ೦೧ | ೦೬ | ೦೪ | ೦೮ | ೦೩ | ೦೨ | ೦೩ | ೦೦ | ೦೦ | ೨೮ |
| ೧೦ | ೧ | ಶ್ರೀನಿವಾಸಪುರಕಾಲೋನಿ | ೦೧ | ೦೦ | ೦೨ | ೦೪ | ೧೩ | ೦೮ | ೦೮ | ೦೫ | ೦೨ | ೦೧ | ೪೪ |
| ೧೧ | ೧ | ರಾಮಯ್ಯನ ಪೋಡು | ೦೦ | ೦೧ | ೦೩ | ೦೦ | ೦೦ | ೦೦ | ೦೦ | ೦೦ | ೦೦ | ೦೦ | ೦೪ |
| ೧೨ | ೧ | ಎತ್ತೇಗೌಡನ ಪೋಡು | ೦೦ | ೦೦ | ೦೧ | ೦೬ | ೦೬ | ೦೬ | ೦೪ | ೦೩ | ೦೨ | ೦೦ | ೨೮ |
| ೧೩ | ೨ | ಬಂಗ್ಲೇ ಪೋಡು | ೦೦ | ೦೦ | ೦೦ | ೦೩ | ೦೪ | ೦೧ | ೦೧ | ೦೦ | ೦೦ | ೦೦ | ೯ |
| ೧೪ | ೨ | ಹೊಸ ಪೋಡು | ೦೦ | ೦೦ | ೦೧ | ೦೨ | ೦೭ | ೦೩ | ೦೩ | ೦೭ | ೦೧ | ೦೧ | ೨೫ |
| ೧೫ | ೨ | ಮುತ್ತಗದಗದ್ದೆ ಪೋಡು | ೦೦ | ೦೦ | ೦೨ | ೦೦ | ೦೮ | ೧೦ | ೦೩ | ೧೦ | ೧೯ | ೦೧ | ೫೩ |
| ೧೬ | ೨ | ಮಂಜಿಗುಂಡಿ ಪೋಡು | ೦೦ | ೦೦ | ೦೦ | ೦೩ | ೦೨ | ೦೧ | ೦೧ | ೦೨ | ೦೧ | ೦೦ | ೧೦ |
| ೧೭ | ೨ | ಕೆ.ದೇವರಹಳ್ಳಿ | ೦೦ | ೦೦ | ೦೦ | ೦೧ | ೦೧ | ೦೯ | ೦೩ | ೦೧ | ೦೦ | ೦೦ | ೧೫ |
| ೧೮ | ೩ | ದೇಶಿಪುರ | ೦೦ | ೦೦ | ೦೦ | ೦೦ | ೦೧ | ೦೪ | ೦೧ | ೦೭ | ೦೫ | ೦೦ | ೧೮ |
| ೧೯ | ೪ | ಪಾಲಾರ್ | ೦೦ | ೦೦ | ೦೦ | ೦೦ | ೦೬ | ೧೪ | ೦೭ | ೦೬ | ೧೨ | ೦೪ | ೪೯ |
| ೨೦ | ೪ | ವಿ.ಎಸ್.ದೊಡ್ಡಿ | ೦೦ | ೦೦ | ೦೦ | ೦೧ | ೦೨ | ೦೦ | ೦೪ | ೧೪ | ೦೨ | ೦೦ | ೨೩ |
| ೨೧ | ೪ | ಅಸ್ತೂರು | ೦೦ | ೦೦ | ೦೦ | ೦೨ | ೦೮ | ೦೩ | ೦೨ | ೧೦ | ೦೧ | ೦೦ | ೨೬ |
| ೨೨ | ೪ | ಪೊನ್ನಾಚಿ | ೦೦ | ೦೦ | ೦೦ | ೦೩ | ೦೪ | ೦೫ | ೦೧ | ೦೩ | ೦೫ | ೦೦ | ೨೧ |
| ೨೩ | ೪ | ಕೆ.ಕೆ.ಪೋಡು | ೦೧ | ೦೧ | ೦೨ | ೦೬ | ೧೬ | ೦೩ | ೦೮ | ೨೨ | ೦೬ | ೦೩ | ೬೮ |
| ೨೪ | ೪ | ಯರೆಕಟ್ಟೆ | ೦೦ | ೦೦ | ೦೦ | ೦೩ | ೦೪ | ೦೮ | ೦೨ | ೦೦ | ೦೧ | ೦೦ | ೧೮ |
| ೨೫ | ೪ | ಜೀರಿಗೆಗದ್ದೆ | ೦೦ | ೦೦ | ೦೦ | ೦೧ | ೦೩ | ೦೭ | ೧೦ | ೦೭ | ೦೫ | ೦೧ | ೩೪ |

| | | | | | | | | | | | | |
|---|---|---|---|---|---|---|---|---|---|---|---|---|
| ೨೬ | ೪ | ಈಚಲುಕೆಬ್ಬೆ ದೊಡ್ಡಿ | ೦೦ | ೦೦ | ೦೨ | ೦೪ | ೦೩ | ೦೩ | ೦೩ | ೧೦ | ೦೮ | ೦೫ | ೩೮ |
| ೨೭ | ೪ | ಸೇಬಿನಕೋಬೆ | ೦೦ | ೦೦ | ೦೦ | ೦೩ | ೧೨ | ೦೭ | ೧೦ | ೦೯ | ೧೨ | ೦೨ | ೫೫ |
| ೨೮ | ೪ | ಪುಟ್ಟೀರಮ್ಮನ ದೊಡ್ಡಿ | ೦೧ | ೦೦ | ೦೨ | ೦೩ | ೦೯ | ೦೨ | ೦೨ | ೦೧ | ೦೦ | ೦೦ | ೨೦ |
| ೨೯ | ೪ | ಕಗ್ಗಲೀಗುಂದಿ | ೦೦ | ೦೦ | ೦೧ | ೦೦ | ೦೦ | ೦೦ | ೦೭ | ೦೫ | ೦೨ | ೦೦ | ೧೫ |
| ೩೦ | ೪ | ಮಾವತ್ತೂರು | ೦೦ | ೦೦ | ೦೦ | ೦೨ | ೦೭ | ೦೯ | ೦೫ | ೦೪ | ೦೩ | ೦೦ | ೩೦ |
| ೩೧ | ೪ | ಚಿಕ್ಕಮರೂರು | ೦೦ | ೦೦ | ೦೧ | ೦೧ | ೦೩ | ೦೨ | ೦೩ | ೦೬ | ೦೨ | ೦೬ | ೨೪ |
| ೩೨ | ೪ | ಮೊಳ್ಳಾಕಟ್ಟೆ | ೦೦ | ೦೦ | ೦೧ | ೦೦ | ೦೦ | ೦೦ | ೦೪ | ೦೫ | ೦೩ | ೦೦ | ೧೩ |
| ೩೩ | ೪ | ಗೊಂಬೆಗಲ್ಲು | ೦೧ | ೦೧ | ೦೪ | ೦೨ | ೦೨ | ೦೧ | ೦೩ | ೦೨ | ೦೨ | ೦೨ | ೨೦ |
| ೩೪ | ೪ | ಹಾವಿನ ಮೂಲೆ | ೦೧ | ೦೦ | ೦೦ | ೦೨ | ೦೭ | ೦೭ | ೦೭ | ೧೦ | ೨೦ | ೧೭ | ೭೧ |
| ೩೫ | ೪ | ದೋಣಿಮಡುವಿನದೊಡ್ಡಿ &ರಾಮೇಗೌಡನಹಳ್ಳಿ | ೦೦ | ೦೧ | ೦೨ | ೦೪ | ೦೩ | ೦೩ | ೦೪ | ೧೦ | ೨೩ | ೨೭ | ೭೭ |
| ೩೬ | ೪ | ಕೋಣನಕೆರೆ | ೦೦ | ೦೦ | ೦೧ | ೦೩ | ೦೧ | ೦೩ | ೦೮ | ೧೫ | ೧೩ | ೦೫ | ೪೯ |
| ೩೭ | ೪ | ಹಂಡೇಕುರುಬನ ದೊಡ್ಡಿ | ೦೦ | ೦೦ | ೦೦ | ೦೧ | ೦೨ | ೦೦ | ೦೩ | ೧೩ | ೦೫ | ೦೧ | ೨೫ |
| ೩೮ | ೪ | ಗಾಣಿಗ ಮಂಗಲ | ೦೦ | ೦೦ | ೦೦ | ೦೦ | ೦೦ | ೦೦ | ೦೧ | ೦೧ | ೦೩ | ೦೪ | ೦೯ |
| ೩೯ | ೪ | ರಾಚಪ್ಪಾಜಿ ನಗರ | ೦೦ | ೦೦ | ೦೧ | ೦೦ | ೦೧ | ೦೨ | ೦೮ | ೧೦ | ೦೭ | ೦೧ | ೩೦ |
| ೪೦ | ೪ | ಕರಳಕಟ್ಟೆ | ೦೦ | ೦೦ | ೦೧ | ೧೦ | ೦೯ | ೦೨ | ೦೪ | ೦೫ | ೦೬ | ೦೧ | ೩೮ |
| ೪೧ | ೪ | ನಲ್ಲಿಕದ್ರು | ೦೧ | ೦೦ | ೦೩ | ೦೬ | ೦೪ | ೦೬ | ೦೩ | ೦೪ | ೦೫ | ೦೩ | ೩೫ |
| ೪೨ | ೪ | ಕೆರೆದಿಂಬ | ೦೦ | ೦೦ | ೦೦ | ೦೨ | ೦೧ | ೦೪ | ೦೧ | ೦೨ | ೦೫ | ೦೧ | ೧೬ |
| ೪೩ | ೪ | ದಂಟಳ್ಳಿ | ೦೦ | ೦೦ | ೦೦ | ೦೦ | ೦೧ | ೦೨ | ೦೪ | ೦೫ | ೦೮ | ೧೯ | ೩೯ |
| ೪೪ | ೪ | ಅಲಂಬಾಡಿ | ೦೦ | ೦೦ | ೦೦ | ೦೦ | ೦೦ | ೦೩ | ೦೩ | ೦೫ | ೦೪ | ೦೨ | ೧೭ |
| ೪೫ | ೪ | ಹಿರಿಯಂಬಲ | ೦೦ | ೦೦ | ೦೧ | ೦೦ | ೦೦ | ೨೬ | ೩೦ | ೦೦ | ೩೫ | ೩೫ | ೧೨೭ |
| ೪೬ | ೪ | ಕೌಳಿಹಳ್ಳ ಡ್ಯಾಂ | ೦೦ | ೦೦ | ೦೦ | ೦೫ | ೦೧ | ೦೨ | ೦೩ | ೦೨ | ೦೨ | ೦೨ | ೧೭ |
| ೪೭ | ೪ | ಕಾನಮಳೆದೊಡ್ಡಿ | ೦೦ | ೦೦ | ೦೦ | ೦೦ | ೦೦ | ೦೦ | ೦೯ | ೧೦ | ೦೦ | ೦೦ | ೧೯ |
| ೪೮ | ೪ | ಹೊಸಪೋಡು | ೦೦ | ೦೦ | ೦೩ | ೦೯ | ೧೪ | ೧೧ | ೦೫ | ೦೬ | ೦೩ | ೦೦ | ೫೧ |
| ಒಟ್ಟು | | | ೧೧ | ೨೮ | ೭೬ | ೧೫೧ | ೨೧೩ | ೧೯೯ | ೨೪೧ | ೨೭೪ | ೨೫೭ | ೧೫೭ | ೧೬೧೩ |

(ಮೂಲ:೧.ತಾಲ್ಲೂಕು ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿ, ಕೊಳ್ಳೇಗಾಲ, ಚಾಮರಾಜನಗರ ಜಿಲ್ಲೆ. ೨.ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ. ೩.ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ)

**ತಾಲ್ಲೂಕು ಸಂಕೇತಗಳು–** ೧– ಚಾಮರಾಜನಗರ, ೨–ಯಳಂದೂರು, ೩–ಗುಂಡ್ಲುಪೇಟೆ, ೪–ಕೊಳ್ಳೇಗಾಲ. **ಭೂ ವಿಸ್ತೀರ್ಣದ ಸಂಕೇತಗಳು:** 1) ೦೧–೦೫ಗುಂಟೆ. 2) ೦೬–೧೦ ಗುಂಟೆ. 3) ೧೧–೨೦ ಗುಂಟೆ. 4) ೨೧–೩೦ ಗುಂಟೆ. 5) ೩೧–೪೦ ಗುಂಟೆ. 6) ೧.೦೧– ೧.೧೦ ಎಕರೆ. 7) ೧.೧೧–೧.೨೦ ಎಕರೆ. 8) ೧.೨೧– ೨.೦೦ ಎಕರೆ. 9) ೨.೦೧– ೩.೦೦ ಎಕರೆ. 10) ೩ ಎಕರೆಗಿಂತ ಹೆಚ್ಚು.

ಕೋಷ್ಟಕ ೩.೦೮ ಚಾಮರಾಜನಗರ ಜಿಲ್ಲೆಯ ವಿವಿಧ ತಾಲ್ಲೂಕಿನ ೪೮ ಹಾಡಿ/ಪೋಡು/ದೊಡ್ಡಿ/ಕಾಲೊನಿಗಳಲ್ಲಿ ಕುಟುಂಬಗಳು ಪಡೆದಿರುವ ಭೂ ವಿಸ್ತೀರ್ಣದ ವಿವರವನ್ನು ನೀಡಲಾಗಿದೆ. ೦೧–೦೫ ಗುಂಟೆಯನ್ನು ೧೧ ಕುಟುಂಬಗಳು, ೦೬–೧೦ ಗುಂಟೆಯನ್ನು ೨೮ ಕುಟುಂಬಗಳು, ೧೧–೨೦ ಗುಂಟೆಯನ್ನು ೭೬ ಕುಟುಂಬಗಳು, ೨೧–೩೦ ಗುಂಟೆಯನ್ನು ೧೫೧ ಕುಟುಂಬಗಳು, ೩೧–೪೦ ಗುಂಟೆಯನ್ನು ೨೧೩

ಕುಟುಂಬಗಳು, ೧.೦೧-೧.೧೦ ಎಕರೆಯನ್ನು ೧೯೩ ಕುಟುಂಬಗಳು, ೧.೧೧- ೧.೨೦ ಎಕರೆಯನ್ನು ೨೪೧ ಕುಟುಂಬಗಳು ಮತ್ತು ೧.೨೧-೨ ಎಕರೆಯನ್ನು ೨೭೪ ಕುಟುಂಬಗಳು, ೨.೦೧-೩ ಎಕರೆಯನ್ನು ೨೫೭ ಕುಟುಂಬಗಳು ೨೫೭ ಮತ್ತು ೩ ಎಕರೆಗಿಂತ ಹೆಚ್ಚು ಪಡೆದ ಕುಟುಂಬಗಳ ಸಂಖ್ಯೆ ೧೫೭.

ಇಲ್ಲಿ ಗಮನಿಸಲಾದ ಅಂಶವೆಂದರೆ ಕೆಲವು ಕುಟುಂಬಗಳು ಕಡಿಮೆ ಭೂಮಿ ಪಡೆದಿವೆ. ಅದು ಕೇವಲ ಅವರ ವಾಸಕ್ಕೆ ಮನೆ ಕಟ್ಟಿಕೊಳ್ಳಲೂ ಸಾಧ್ಯವಾಗದಷ್ಟು ಇರುವುದು. ಹೆಚ್ಚು ಭೂಮಿ ಪಡೆದಿರುವ ಕುಟುಂಬಗಳ ಸಂಖ್ಯೆ ಮೈಸೂರು ಜಿಲ್ಲೆಗೆ ಹೋಲಿಸಿದರೆ ಉತ್ತಮವಾಗಿದೆ.

### ೩.೮.೯. ಚಾಮರಾಜನಗರ ಜಿಲ್ಲೆಯಲ್ಲಿ ಸಮುದಾಯ ಹಕ್ಕು ಪಡೆದಿರುವ ಮಾಹಿತಿ

ಅರಣ್ಯ ಹಕ್ಕುಗಳ ಕಾಯಿದೆ ಆದಿವಾಸಿಗಳಿಗೆ ಎರಡು ರೀತಿಯ ಹಕ್ಕುಗಳನ್ನು ನೀಡಿದೆ. ಸಮುದಾಯ ಹಕ್ಕಿನ ಪ್ರಕಾರ ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹಿಸುವ, ಬಳಸುವ ಮತ್ತು ಮಾರಾಟ ಮಾಡುವ ಹಕ್ಕನ್ನು ಆದಿವಾಸಿಗಳು ಪಡೆಯುತ್ತಾರೆ. ಇಲ್ಲಿ ಚಾಮರಾಜನಗರ ಜಿಲ್ಲೆಯಲ್ಲಿ ಈ ಹಕ್ಕು ಪಡೆದಿರುವ ಮಾಹಿತಿ ಬಗೆಗೆ ಚರ್ಚಿಸಲಾಗಿದೆ.

**ಕೋಷ್ಟಕ : ೩.೯: ಚಾಮರಾಜನಗರ ಜಿಲ್ಲೆಯಲ್ಲಿ ತಾಲ್ಲೂಕುವಾರು ಸಮುದಾಯ ಹಕ್ಕು ಪಡೆದಿರುವ ವಿವರ**

| ಕ್ರಸಂ | ತಾಲ್ಲೂಕು | ೩ | ೪ | ೫ | ೬ | ೭ |
|---|---|---|---|---|---|---|
| ೦೧ | ಚಾಮರಾಜನಗರ | ೨೪ | ೧೭ | ೧೭ | ೧೭ | ೦೦ |
| ೦೨ | ಯಳಂದೂರು | ೧೦ | ೧೦ | ೧೦ | ೧೦ | ೦೦ |
| ೦೩ | ಕೊಳ್ಳೇಗಾಲ | ೮೦ | ೪೨ | ೪೨ | ೦೦ | ೪೨ |
| ೦೪ | ಗುಂಡ್ಲುಪೇಟೆ | ೨೯ | ೩೨ | ೦೦ | ೦೦ | ೩೨ |
| | **ಒಟ್ಟು** | ೧೪೩ | ೧೦೧ | ೬೯ | ೨೭ | ೭೪ |

(ಮೂಲ:೧.ತಾಲ್ಲೂಕು ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿ, ಕೊಳ್ಳೇಗಾಲ, ಚಾಮರಾಜನಗರ ಜಿಲ್ಲೆ. ೨. ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ. ೩.ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ)

**ತಲೆಬರಹಗಳ ಸಂಕೇತಗಳು:** ೧-ಕ್ರಮ ಸಂಖ್ಯೆ, ೨-ತಾಲ್ಲೂಕು, ೩- ಒಟ್ಟು ಹಾಡಿ/ಪೋಡುಗಳು, ೪- ಒಟ್ಟು ರಚಿಸಲ್ಪಟ್ಟ ಅರಣ್ಯ ಹಕ್ಕು ಸಮಿತಿಗಳು, ೫-ಸಮುದಾಯ ಹಕ್ಕುಗಳಿಗೆ ಅರ್ಜಿ ಸಲ್ಲಿಸಿದ ಒಟ್ಟು ಹಾಡಿ/ಪೋಡುಗಳು, ೬-ಸಮುದಾಯ ಹಕ್ಕುಗಳನ್ನು ಪಡೆದ ಒಟ್ಟು ಹಾಡಿ/ಪೋಡುಗಳು, ೭- ಸಮುದಾಯ ಹಕ್ಕುಗಳನ್ನು ಪಡೆಯಬೇಕಾಗಿರುವ ಹಾಡಿ/ ಪೋಡುಗಳು.

ಕೋಷ್ಟಕ ೩.೦೯ ಚಾಮರಾಜನಗರ ಜಿಲ್ಲೆಯಲ್ಲಿ ತಾಲ್ಲೂಕುವಾರು ಸಮುದಾಯ ಹಕ್ಕು ಪಡೆದಿರುವ ವಿವರ ನೀಡುತ್ತದೆ. ಒಟ್ಟು ೧೪೩ ಹಾಡಿಗಳಲ್ಲಿ ೧೦೧ ಅಂದರೆ

ಶೇಕಡಾ ೭೦.೬೨ ರಷ್ಟರಲ್ಲಿ ಅರಣ್ಯ ಹಕ್ಕು ಸಮಿತಿಗಳು ರಚಿಸಲ್ಪಟ್ಟಿವೆ. ಇದರಲ್ಲಿ ೬೯ ಹಾಡಿಗಳು ಅಂದರೆ ಶೇಕಡಾ ೬೮.೩೧ ರಷ್ಟು ಹಾಡಿಗಳು ಸಮುದಾಯ ಅರಣ್ಯ ಹಕ್ಕಿಗಾಗಿ ಅರ್ಜಿ ಸಲ್ಲಿಸಿವೆ. ಇದರಲ್ಲಿ ೨೭ ಹಾಡಿಗಳಿಗೆ ಅಂದರೆ ಶೇಕಡಾ ೩೯.೧೩ ರಷ್ಟು ಹಾಡಿಗಳಿಗೆ ಸಮುದಾಯ ಹಕ್ಕು ವಿತರಿಸಲಾಗಿದೆ.

ಅರಣ್ಯ ಹಕ್ಕುಗಳ ಕಾಯಿದೆ ಅಡಿ ಸಾಂಪ್ರದಾಯಿಕ ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹಿಸುವ, ಕೂಡಿಟ್ಟು ಕೊಳ್ಳುವ ಮತ್ತು ಮಾರಾಟ ಮಾಡುವ ಹಕ್ಕು ಆದಿವಾಸಿಗಳಿಗಿದೆ. ಆದರೆ ಅರಣ್ಯ ಇಲಾಖೆಯವರು ಕೆಲವೆ ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹಿಸಲು ಅನುಮತಿ ನೀಡಿದ್ದಾರೆ. ಅಲ್ಲದೆ ಅರಣ್ಯದ ಒಳಬಾಗಕ್ಕೆ ಹೋಗದಂತೆ ನಿರ್ಭಂದ ಕೂಡ ವಿದಿಸಿದ್ದಾರೆ. ಇದು ಕೆಲವು ಹಾಡಿ/ಪೋಡುಗಳಿಗೆ ೪-೫ ಕಿ.ಮೀ ವ್ಯಾಪ್ತಿ ಇದ್ದರೆ ಇನ್ನೂ ಕೆಲವು ಹಾಡಿ/ಪೋಡುಗಳಿಗೆ ೧೨ ರಿಂದ ೧೫ ಕಿ.ಮೀ ವ್ಯಾಪ್ತಿ ನಿಗದಿ ಪಡಿಸಲಾಗಿದೆ. ಇದನ್ನು ಸಮುದಾಯ ಹಕ್ಕು ನೀಡಿರುವ ಪತ್ರದ ಹಿಂದೆ ನಕಾಶೆ ಹಾಕಿ ತೋರಿಸಿ ನಿರ್ಬಂಧಿಸಿದ್ದಾರೆ. ಸೀಮಿತ ಪ್ರದೇಶದಲ್ಲಿ ಅರಣ್ಯ ಕಿರು ಉತ್ಪನ್ನಗಳು ಎಲ್ಲಾ ಆದಿವಾಸಿಗಳಿಗೂ ದೊರಕದು ಇದರಿಂದ ಆದಿವಾಸಿಗಳನ್ನು ಅರೆಹೊಟ್ಟೆಯಲ್ಲಿಟ್ಟಂತಾಗಿದೆ.

ಇನ್ನೊಂದು ನಿಟ್ಟಿನಲ್ಲಿ ನೋಡುವುದಾದರೆ ಸಮುದಾಯ ಹಕ್ಕು ನೀಡಿರುವುದು ಶೇಕಡಾ ೧೮.೮೮ ಹಾಡಿ/ಪೋಡುಗಳಿಗೆ ಮಾತ್ರ. ಉಳಿದ ಶೇಕಡಾ ೮೧.೧೧ ರಷ್ಟು ಹಾಡಿ/ಪೋಡುಗಳ ಜನರ ದೈನಂದಿನ ಬದುಕು ಬಹಳಷ್ಟು ಯಾತನಾಮಯವಾಗಿದೆ. ಕೆಲವು ಹಾಡಿಗಳಿಗೆ ಅರಣ್ಯ ಹಕ್ಕುಗಳ ಕಾಯಿದೆ ಬಗ್ಗೆ ತಿಳುವಳಿಕೆಯೇ ಇಲ್ಲ.

**೩.೮.೧೦. ಹಾಡಿ/ಪೋಡು/ಕಾಲೊನಿವಾರು ಸಮುದಾಯ ಹಕ್ಕು ಪಡೆದ ಮಾಹಿತಿ**

ಚಾಮರಾಜನಗರ ಜಿಲ್ಲೆಯಲ್ಲಿ ಚಾಮರಾಜನಗರ ಮತ್ತು ಯಳಮದೂರು ತಾಲ್ಲೂಕಿನ ಒಟ್ಟು ೨೭ ಪೋಡುಗಳು ಮಾತ್ರ ಸಮುದಾಯ ಹಕ್ಕುಗಳನ್ನು ಪಡೆದಿವೆ. ಈ ಹಕ್ಕು ಪಡೆದ ಎಲ್ಲಾ ಪೋಡುಗಳಲ್ಲಿ ವಾಸಿಸುತ್ತಿರುವವರು ಸೋಲಿಗರು ಎಂಬುದು ಇಲ್ಲಿ ಗಮನಿಸಿರುವ ವಿಶೇಷ ಅಂಶ.

**ಕೋಷ್ಟಕ:೩.೧೦:ಚಾಮರಾಜನಗರ ಮತ್ತು ಯಳಂದೂರು ತಾಲ್ಲೂಕುಗಳಲ್ಲಿ ಹಾಡಿ/ಪೋಡು/ಕಾಲೊನಿವಾರು ಸಮುದಾಯ ಹಕ್ಕು ಪಡೆದ ವಿವರ**

| ಕ್ರಸಂ | ಪೋಡು/ಹಾಡಿ/ ಕಾಲೋನಿ ಹೆಸರು | ಒಟ್ಟು ಕುಟುಂಬಗಳು | ಕುಟುಂಬಗಳ ಒಟ್ಟು ಜನಸಂಖ್ಯೆ |
|---|---|---|---|
| ೦೧ | ಬೆಲ್ಲತ್ತ, ಶನಿವಾರಮುಂಟಿ | ೬೧ | ೧೬೮ |
| ೦೨ | ಮುರಟಿಪಾಳ್ಯ | ೯೦ | ೨೮೮ |
| ೦೩ | ಕುಳ್ಳೂರು | ೫೨ | ೧೪೯ |
| ೦೪ | ಅಟ್ಟಗೂಳಿಪುರ | ೩೨ | ೮೬ |
| ೦೫ | ರಂಗಸಂದ್ರ | ೧೧೩ | ೩೪೨ |
| ೦೬ | ಹಿತ್ತಲಗುಡ್ಡ | ೨೪ | ೭೦ |
| ೦೭ | ಕಾಳಿಕಾಂಬ ಕಾಲೋನಿ | ೧೦ | ೪೩ |
| ೦೮ | ಮುನೇಶ್ವರ ಕಾಲೋನಿ | ೭೩ | ೧೯೭ |
| ೦೯ | ಹೊಸಪೋಡು | ೫೧ | ೧೫೩ |
| ೧೦ | ಗೋಡೆಮಡುವಿನ ದೊಡ್ಡಿ | ೪೯ | ೧೫೪ |
| ೧೧ | ಮಾರಿಗುಡಿ ಪೋಡು | ೭೬ | ೨೧೨ |
| ೧೨ | ಬಿಸಿಲುಗೆರೆ,ಕಾಡಿಗೆರೆ | ೩೫ | ೧೦೩ |
| ೧೩ | ಬಾನವಾಡಿ | ೭೮ | ೨೨೬ |
| ೧೪ | ಎತ್ತೇಗೌಡನ ಪೋಡು | ೫೪ | ೧೬೨ |
| ೧೫ | ಬೇಡಗುಳಿ | ೭೯ | ೨೨೪ |
| ೧೬ | ಕನ್ನೇರಿ ಕಾಲೋನಿ | ೧೦೦ | ೪೧೮ |
| ೧೭ | ಶ್ರೀನಿವಾಸಪುರ ಕಾಲೋನಿ | ೬೦ | ೧೯೪ |
| ೧೮ | ಬಂಗ್ಲೇ ಪೋಡು | ೯೭ | ೪೮೫ |
| ೧೯ | ಹೊಸಪೋಡು | ೯೪ | ೪೭೨ |
| ೨೦ | ಮುತ್ತಗದಗದ್ದೆ ಪೋಡು | ೧೦೫ | ೫೩೫ |
| ೨೧ | ಮಂಜಿಗುಂಡಿ ಪೋಡು | ೨೦ | ೯೨ |
| ೨೨ | ಕೆ.ದೇವರಹಳ್ಳಿ | ೫೫ | ೧೬೫ |
| ೨೩ | ಯರಕನಗದ್ದೆ ಪೋಡು | ೭೧ | ೨೩೪ |
| ೨೪ | ಕಲ್ಯಾಣಿ ಪೋಡು | ೧೪ | ೬೬ |
| ೨೫ | ಸೀಗೆಬೆಟ್ಟ ಪೋಡು | ೨೮ | ೧೦೦ |
| ೨೬ | ಪುರಾಣಿ ಪೋಡು | ೧೦೨ | ೪೦೪ |
| ೨೭ | ಈರನಕಟ್ಟೆ | ೫ | ೧೮ |
| | ಒಟ್ಟು | ೧೬೨೮ | ೫೭೬೦ |

(ಮೂಲ: ೧. ತಾಲ್ಲೂಕು ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿ, ಚಾಮರಾಜನಗರ, ಚಾಮರಾಜನಗರ ಜಿಲ್ಲೆ. ೨.ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ)

ಕೋಷ್ಟಕ ೩.೧೦ ಚಾಮರಾಜನಗರ ಜಿಲ್ಲೆಯ ಚಾಮರಾಜನಗರ, ಮತ್ತು ಯಳಂದೂರು ತಾಲ್ಲೂಕಿನ ಹಾಡಿ/ಪೋಡು/ಕಾಲೊನಿಗಳಲ್ಲಿ ಸಮುದಾಯ ಹಕ್ಕು ಪಡೆದ ವಿವರ ನೀಡುತ್ತದೆ. ಚಾಮರಾಜನಗರ ಜಿಲ್ಲೆಯ ನಾಲ್ಕು ತಾಲ್ಲೂಕಿನ ಒಟ್ಟು ೧೪೩ ಹಾಡಿಗಳಲ್ಲಿ ೪೮೫೫ ಕುಟುಂಬಗಳಿವೆ. ಒಟ್ಟು ಆದಿವಾಸಿ ಜನಸಂಖ್ಯೆ ೩೧೧೭೮. ಕೋಷ್ಟಕ ೩.೯ ರಲ್ಲಿ ತೋರಿಸಿರುವಂತೆ ಸಮುದಾಯ ಹಕ್ಕು ದೊರಕಿರುವುದು ಚಾಮರಾಜನಗರ ತಾಲ್ಲೂಕಿನ ೧೭ ಹಾಡಿಗಳು ಮತ್ತು ಯಳಂದೂರು ತಾಲ್ಲೂಕಿನ ೧೦ ಹಾಡಿಗಳಿಗೆ.

ಕೋಷ್ಟಕ ೩.೧೦ ರಲ್ಲಿ ತೋರಿಸಿರುವಂತೆ ಒಟ್ಟು ಸಮುದಾಯ ಹಕ್ಕು ದೊರಕಿರುವ ೨೭ ಹಾಡಿಗಳಲ್ಲಿ ೫೭೬೦ ಜನರು ಇದರ ಫಲವನ್ನು ಪಡೆಯುತ್ತಿದ್ದಾರೆ. ಇದು ಶೇಕಡಾ ೧೮.೪೭ ರಷ್ಟು ಜನಸಂಖ್ಯೆ ಯಾಗಿದೆ. ಉಳಿದ ಶೇಕಡಾ ೮೧.೫೨ ರಷ್ಟು ಜನಸಂಖ್ಯೆಗೆ ಸಮುದಾಯ ಹಕ್ಕು ಇಲ್ಲವಾಗಿದೆ. ಇದನ್ನು ಗಮನಿಸಿದರೆ ಅರಣ್ಯ ಹಕ್ಕು ಕಾಯಿದೆ ಅನುಷ್ಠಾನ ಪರಿಣಾಮಕಾರಿಯಾಗಿದೆಯೇ? ಎಂಬ ಪ್ರಶ್ನೆ ಉದ್ಭವಿಸುತ್ತದೆ.

**೩.೮.೧೧. ಅರಣ್ಯ ಹಕ್ಕುಗಳ ಕಾಯಿದೆ ಬಗ್ಗೆ ಆದಿವಾಸಿಗಳಿಗೆ ಮಾಹಿತಿ ನೀಡಿದವರ ವಿವರ**

ಅರಣ್ಯ ಹಕ್ಕುಗಳ ಕಾಯಿದೆ ೨೦೦೬ ರಲ್ಲಿ ಬಂದಿದೆ. ಆದರೆ ಎಲ್ಲಾ ಆದಿವಾಸಿಗಳಿಗೆ ಇದರ ಬಗೆಗೆ ಯಾರು ಮಾಹಿತಿ ನೀಡಿದರು ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

**ಕೋಷ್ಠಕ : ೩.೧೧: ಕಾಯಿದೆ ಬಗ್ಗೆ ಆದಿವಾಸಿಗಳಿಗೆ ಮಾಹಿತಿ ನೀಡಿದವರು**

| ಕ್ರ.ಸಂ | ಕಾಯಿದೆ ಬಗ್ಗೆ ಆದಿವಾಸಿಗಳಿಗೆ ಮಾಹಿತಿ ನೀಡಿದವರು | ಪ್ರತಿಕ್ರಿಯಿಸಿದ ಹಾಡಿಗಳು | ಪ್ರತಿಶತ |
|---|---|---|---|
| ೧ | ಸ್ವಯಂ ಸೇವಾ ಸಂಸ್ಥೆಗಳು | ೩೧ | ೪೪. ೨೮ |
| ೨ | ಪರಿಶಿಷ್ಟ ಪಂಗಡ ಕಲ್ಯಾಣ ಇಲಾಖೆ | ೧೪ | ೨೦.೦೦ |
| ೩ | ಊರಿನ ಹಿರಿಯರು/ವಿದ್ಯಾವಂತರು | ೦೯ | ೧೨.೮೫ |
| ೪ | ಸಮಾಜ ಕಲ್ಯಾಣ ಇಲಾಖೆಯವರು | ೦೫ | ೦೭.೧೪ |
| ೫ | ಅರಣ್ಯ ಹಕ್ಕು ಕಾಯಿದೆ ಬಗ್ಗೆ ಗೊತ್ತಿಲ್ಲ | ೧೧ | ೧೫.೭೧ |
| | **ಒಟ್ಟು** | ೭೦ | ೧೦೦ |

(ಮೂಲ: ಕ್ಷೇತ್ರಕಾರ್ಯ)

ಕೋಷ್ಠಕ ೩.೧೧ ಅರಣ್ಯ ಹಕ್ಕುಗಳ ಕಾಯಿದೆ ಬಗ್ಗೆ ಆದಿವಾಸಿಗಳಿಗೆ ಮಾಹಿತಿ ನೀಡಿದವರ ವಿವರ ನೀಡುತ್ತದೆ. ಶೇಕಡಾ ೪೪.೨೮ ರಷ್ಟು ಹಾಡಿ/ಪೋಡುಗಳಿಗೆ ಸ್ವಯಂ ಸೇವಾ ಸಂಸ್ಥೆಗಳು ಮಾಹಿತಿ ನೀಡಿವೆ. ಶೇಕಡಾ ೨೦ ರಷ್ಟು ಹಾಡಿಗಳಿಗೆ ಪರಿಶಿಷ್ಟ ಪಂಗಡ ಕಲ್ಯಾಣ ಇಲಾಖೆಯವರು ಮಾಹಿತಿ ನೀಡಿರುವ ಅಂಶ ತಿಳಿದು ಬಂದಿದೆ. ಶೇಕಡಾ ೧೨.೮೫ ರಷ್ಟು ಹಾಡಿಗಳಿಗೆ ಊರಿನ ಹಿರಿಯರು ಮತ್ತು ವಿದ್ಯಾವಂತರಿಂದ ತಿಳಿಯಲ್ಪಟ್ಟಿದೆ. ಸಮಾಜಕಲ್ಯಾಣ ಇಲಾಖೆಯವರಿಂದ ಶೇಕಡಾ

೭.೧೪ ರಷ್ಟು ಹಾಡಿ/ಪೋಡುಗಳಿಗೆ ತಿಳಿದಿದೆ. ಇದರ ಬಗ್ಗೆ ಮಾಹಿತಿ ಇಲ್ಲದಿರುವ ಸಂಖ್ಯೆ ಶೇಕಡಾ ೧೫.೭೧ ರಷ್ಟಿದೆ. ಬಹುಶಃ ಇಂತಹ ಹಾಡಿ/ಪೋಡುಗಳ ಜನರು ಅರಣ್ಯ ಹಕ್ಕುಗಳ ಬಗೆಗೆ ಯಾವುದೇ ಅರ್ಜಿ ಸಲ್ಲಿಸದೇ ಇರುವುದು ಸಾಧ್ಯವಿದೆ. ಅರಣ್ಯ ಇಲಾಖೆಯವರು ಯಾವುದೇ ಹಾಡಿ/ಪೋಡು/ಕಾಲೊನಿಗಳಿಗೆ ಕಾಯಿದೆ ಬಗ್ಗೆ ಮಾಹಿತಿ ನೀಡಿರುವ ಪ್ರಕರಣಗಳು ಕಂಡು ಬಂದಿಲ್ಲ.

### ೩.೮.೧೨. ಸಮುದಾಯ ಹಕ್ಕುಗಳ ಕುರಿತು ಆದಿವಾಸಿಗಳ ಪ್ರತಿಕ್ರಿಯೆಗಳು

ಅರಣ್ಯ ಹಕ್ಕುಗಳ ಕಾಯಿದೆ ಹಲವು ರೀತಿಯ ಸಮುದಾಯ ಹಕ್ಕುಗಳನ್ನು ಆದಿವಾಸಿ ಸಮುದಾಯಕ್ಕೆ ನೀಡಿದೆ. ಇಂತಹ ಹಕ್ಕುಗಳ ಬಗೆಗೆ ಆದಿವಾಸಿಗಳು ಹೊಂದಿರುವ ಮನೋಭಾವಗಳನ್ನು ತಿಳಿಯಲು ಒಟ್ಟು ೧೫ ಪ್ರಶ್ನೆಗಳನ್ನು ಹಾಕಿ ಪ್ರತಿಕ್ರಿಯೆಗಳನ್ನು ಪಡೆಯಲಾಗಿದೆ. ಪ್ರಶ್ನೆಗಳು ಮತ್ತು ಪ್ರತಿಕ್ರಿಯೆಗಳನ್ನು ಕೋಷ್ಟಕ ೩.೧೨ ರಲ್ಲಿ ನೀಡಲಾಗಿದೆ. ಇದರ ಫಲಿತಾಂಶವನ್ನು ಕೋಷ್ಟಕ ೩.೧೩ ರಲ್ಲಿ ತೋರಿಸಲಾಗಿದೆ.

**ಕೋಷ್ಟಕ : ೩.೧೨: ಸಮುದಾಯ ಹಕ್ಕುಗಳ ಬಗೆಗೆ ಆದಿವಾಸಿಗಳ ಪ್ರತಿಕ್ರಿಯೆಗಳ ವಿವರ**

| ಕ್ರಸಂ | ಪ್ರಶ್ನೆಗಳು | ಪ್ರತಿಕ್ರಿಯೆಗಳು |
|---|---|---|
| ೦೧ | ಕಾಡಿನಲ್ಲಿ ಬೆಂಕಿ ಬಿದ್ದರೆ ಏನು ಮಾಡುತ್ತೀರಿ. | ೧) ಅರಣ್ಯ ಇಲಾಖೆಯ ಸಿಬ್ಬಂದಿಗೆ ತಿಳಿಸುತ್ತೇವೆ.<br>೨) ನಾವೇ ನಂದಿಸುತ್ತೇವೆ.<br>೩) ನಾವು ಯಾರಿಗೂ ತಿಳಿಸುವುದಿಲ್ಲ.<br>೪) ನಮ್ಮ ಮೇಲೆಯೇ ದಾವೆ ಹೂಡುತ್ತಾರೆ. |
| ೦೨ | ಒಂದು ವೇಳೆ ಅರಣ್ಯ ಇಲಾಖೆಯವರು ಕಾಡಿನೊಳಗೆ ಹೋಗಬೇಡಿ ಎಂದು ಹೇಳಿದ್ದರೂ ನೀವು ಕಾಡಿನೊಳಗೆ ಪ್ರವೇಶಿಸಿದರೆ ಏನು ಮಾಡುತ್ತಾರೆ. | ೧) ಅರಣ್ಯ ಇಲಾಖೆಯವರು ಬೈಯುತ್ತಾರೆ.<br>೨) ಪ್ರಾಣಿ ಬೇಟೆಯ ಕೇಸು ದಾಖಲಿಸುತ್ತಾರೆ.<br>೩) ಕಳ್ಳತನ ಆರೋಪ ಹೊರಿಸುತ್ತಾರೆ.<br>೪) ಹಣ ಕೇಳುತ್ತಾರೆ. |
| ೦೩ | ಕಾಡಿನ ಕೆರೆ ಜರಿ ಮತ್ತು ನೀರಿನ ತೊರೆಗಳಲ್ಲಿ ಮೀನು ಹಿಡಿಯಲು ಅವಕಾಶ ಇದೆಯೇ? | ೧) ಇದೆ ೨) ಅರಣ್ಯ ಇಲಾಖೆ ಅಡ್ಡಿ ಪಡಿಸುತ್ತದೆ.<br>೩) ಗ್ರಾಮ ಪಂಚಾಯಿತಿಯವರು ಬಿಡುವುದಿಲ್ಲ.<br>೪) ಗುತ್ತಿಗೆದಾರರ ಅಡ್ಡಿ ಇದೆ. |
| ೦೪ | ಅರಣ್ಯದಿಂದ ಉರುವಲು ಕಟ್ಟಿಗೆ ತರಲು ಅವಕಾಶವಿದೆಯೇ? | ೧) ಇದೆ ೨) ಅರಣ್ಯ ಇಲಾಖೆ ಅಡ್ಡಿ ಪಡಿಸುತ್ತದೆ.<br>೩) ಗ್ರಾಮ ಪಂಚಾಯಿತಿಯವರು ಬಿಡುವುದಿಲ್ಲ.<br>೪) ಗುತ್ತಿಗೆದಾರರ ಅಡ್ಡಿ ಇದೆ. |
| ೦೫ | ಅರಣ್ಯದಲ್ಲಿ ಬೊಂಬು ಮತ್ತು ಬಿದಿರಿನ ಸಂಗ್ರಹಕ್ಕೆ ಅವಕಾಶವಿದೆಯೇ? | ೧) ಇದೆ೨) ಅರಣ್ಯ ಇಲಾಖೆ ಅಡ್ಡಿ ಪಡಿಸುತ್ತದೆ.<br>೩) ಗ್ರಾಮ ಪಂಚಾಯಿತಿಯವರು ಬಿಡುವುದಿಲ್ಲ.<br>೪) ಗುತ್ತಿಗೆದಾರರ ಅಡ್ಡಿ ಇದೆ. |
| ೦೬ | ಅರಣ್ಯ ಪ್ರದೇಶದಲ್ಲಿ ಶವಸಂಸ್ಕಾರ ಮಾಡಲು ಅವಕಾಶವಿದೆಯೇ? | ೧) ಇದೆ ೨) ಅರಣ್ಯ ಇಲಾಖೆ ಅಡ್ಡಿ ಪಡಿಸುತ್ತದೆ.<br>೩) ಗ್ರಾಮ ಪಂಚಾಯಿತಿಯವರು ಬಿಡುವುದಿಲ್ಲ.<br>೪) ಪ್ರಾಣಿಗಳ ಭಯವಿದೆ. |
| ೦೭ | ಅರಣ್ಯ ಪ್ರದೇಶದಲ್ಲಿ ಜೇನು ಸಂಗ್ರಹಕ್ಕೆ ಅವಕಾಶವಿದೆಯೇ? | ೧) ಇದೆ ೨) ಅರಣ್ಯ ಇಲಾಖೆ ಅಡ್ಡಿ ಪಡಿಸುತ್ತದೆ.<br>೩) ಗ್ರಾಮ ಪಂಚಾಯಿತಿಯವರು ಬಿಡುವುದಿಲ್ಲ.<br>೪) ಗುತ್ತಿಗೆದಾರರ ಅಡ್ಡಿ ಇದೆ. |
| ೦೮ | ಅರಣ್ಯದಲ್ಲಿ ದೈವಾರಾಧನೆಗೆ ಅವಕಾಶವಿದೆಯೇ? | ೧) ಇದೆ ೨) ಅರಣ್ಯ ಇಲಾಖೆ ಅಡ್ಡಿ ಪಡಿಸುತ್ತದೆ.<br>೩) ಗ್ರಾಮ ಪಂಚಾಯಿತಿಯವರು ಬಿಡುವುದಿಲ್ಲ.<br>೪) ಪ್ರಾಣಿಗಳ ಕಾಟವಿದೆ. |
| ೦೯ | ಅರಣ್ಯದಲ್ಲಿ ಪಶು ಪಾಲನೆ ಮಾಡಲು | ೧) ಇದೆ ೨) ಅರಣ್ಯ ಇಲಾಖೆ ಅಡ್ಡಿ ಪಡಿಸುತ್ತದೆ. |

|  |  |  |
|---|---|---|
|  | ಅವಕಾಶವಿದೆಯೇ? | ೩) ಗ್ರಾಮ ಪಂಚಾಯಿತಿಯವರು ಬಿಡುವುದಿಲ್ಲ.<br>೪) ನೆರೆ ಗ್ರಾಮದವರ ಅಡ್ಡಿ ಇದೆ |
| ೧೦ | ಕಾಡಿನಲ್ಲಿ ದೊರೆಯುವ ಮಣ್ಣು,ಕಲ್ಲು, ಮರಳನ್ನು ನಿಮ್ಮ ಸ್ವಂತ ಉಪಯೋಗಕ್ಕೆ ಬಳಸುವ ಅವಕಾಶವಿದೆಯೇ? | ೧) ಇದೆ ೨) ಅರಣ್ಯ ಇಲಾಖೆ ಅಡ್ಡಿ ಪಡಿಸುತ್ತದೆ.<br>೩) ಗ್ರಾಮ ಪಂಚಾಯಿತಿಯವರು ಬಿಡುವುದಿಲ್ಲ.<br>೪) ಗುತ್ತಿಗೆದಾರರ ಅಡ್ಡಿ ಇದೆ. |
| ೧೧ | ಅರಣ್ಯ ಪ್ರದೇಶದಲ್ಲಿನ ನೀರಿನ ಮೂಲಗಳಿಂದ ನೀರನ್ನು ದೈನಂದಿನ ಬಳಕೆಗೆ ಬಳಸುವ ಅವಕಾಶವಿದೆಯೇ? | ೧) ಇದೆ ೨) ಅರಣ್ಯ ಇಲಾಖೆ ಅಡ್ಡಿ ಪಡಿಸುತ್ತದೆ.<br>೩) ಗ್ರಾಮ ಪಂಚಾಯಿತಿಯವರು ಬಿಡುವುದಿಲ್ಲ.<br>೪) ಗುತ್ತಿಗೆದಾರರ ಅಡ್ಡಿ ಇದೆ. |
| ೧೨ | ನಿಮ್ಮ ಪಾರಂಪರಿಕ ಔಷದೋಪಚಾರಕ್ಕಾಗಿ ಅರಣ್ಯ ಪ್ರದೇಶದಲ್ಲಿ ಗಿಡಮೂಲಿಕೆ ಸಂಗ್ರಹಕ್ಕೆ ಅವಕಾಶವಿದೆಯೇ? | ೧) ಇದೆ ೨) ಅರಣ್ಯ ಇಲಾಖೆ ಅಡ್ಡಿ ಪಡಿಸುತ್ತದೆ.<br>೩) ಗ್ರಾಮ ಪಂಚಾಯಿತಿಯವರು ಬಿಡುವುದಿಲ್ಲ.<br>೪) ಗುತ್ತಿಗೆದಾರರ ಅಡ್ಡಿ ಇದೆ. |
| ೧೩ | ಸಂಗ್ರಹಿಸಿದ ಅರಣ್ಯ ಉಪ ಉತ್ಪನ್ನಗಳ ಮಾರಾಟಕ್ಕೆ ಸಮಸ್ಯೆ ಇದಯೇ? | ೧) ಇಲ್ಲ ೨) ಅರಣ್ಯ ಇಲಾಖೆ ಅಡ್ಡಿ ಪಡಿಸುತ್ತದೆ.<br>೩) ಗ್ರಾಮ ಪಂಚಾಯಿತಿಯವರು ಬಿಡುವುದಿಲ್ಲ.<br>೪) ಲ್ಯಾಂಪ್ಸ್‌ಅಡ್ಡಿ ಪಡಿಸುತ್ತದೆ. |
| ೧೪ | ಈ ಹಿಂದೆ ನೀವು ನಂಬುತ್ತಿದ್ದ ಕಾಡಿನಲ್ಲಿರುವ ನಿಮ್ಮ ನಂಬಿಕೆಯ/ಹಿರಿಯರ ಸಮಾಧಿ/ ದೇವಸ್ಥಾನಗಳು ಮತ್ತಿತರೆ ಸ್ಥಳಗಳಿಗೆ ತೆರಳಿ ನಿಮ್ಮ ಆಚರಣೆ ಆಚರಿಸಲು ಅವಕಾಶವಿದೆಯೇ? | ೧) ನಮಗೆ ಯಾವಾಗ ಬೇಕಾದರೂ.<br>೨) ಮೂರರಿಂದ ೬ ತಿಂಗಳಿಗೊಮ್ಮೆ<br>೩) ವರ್ಷಕ್ಕೊಮ್ಮೆ<br>೪) ಅವಕಾಶವಿಲ್ಲ |
| ೧೫ | ಅರಣ್ಯದೊಳಗೆ ತಮ್ಮ ಆಚರಣೆಗಳನ್ನು ಆಚರಿಸಲು ಯಾರ ಅನುಮತಿ ಪಡೆಯಬೇಕು. | ೧. ಸಮುದಾಯದ ಮುಖಂಡರ ಅನುಮತಿ.<br>೨. ಗ್ರಾಮ ಪಂಚಾಯತಿ ಪರವಾನಗಿ<br>೩. ಮುಜರಾಯಿ ಇಲಾಖೆ ಪರವಾನಗಿ<br>೪. ಅರಣ್ಯ ಇಲಾಖೆ ಪರವಾನಗಿ |

(ಮೂಲ : ಕ್ಷೇತ್ರ ಕಾರ್ಯ)

**ಕೋಷ್ಟಕ:೩.೧೩:ಸಮುದಾಯ ಹಕ್ಕುಗಳ ಕುರಿತು ಆದಿವಾಸಿಗಳ ಪ್ರತಿಕ್ರಿಯೆಗಳ ಫಲಿತಾಂಶಗಳು**

| ಕ್ರಸ | ಪ್ರಶ್ನೆಗಳ ಸಂಖ್ಯೆ | ಪ್ರತಿಕ್ರಿಯೆಗಳ ಸಂಖ್ಯೆ ಮತ್ತು ಪ್ರತಿಶತ | | | | | | | | ಒಟ್ಟು ಸಂಖ್ಯೆ | ಒಟ್ಟು ಪ್ರತಿಶತ |
|---|---|---|---|---|---|---|---|---|---|---|---|
| | | ೦೧ | % | ೦೨ | % | ೦೩ | % | ೦೪ | % | | |
| ೦೧ | ೦೧ | ೨೫ | ೩೫.೭೧ | ೧೧ | ೧೫.೭೧ | ೧೫ | ೨೧.೪೨ | ೧೯ | ೨೭.೧೪ | ೭೦ | ೧೦೦ |
| ೦೨ | ೦೨ | ೩೮ | ೫೪.೨೮ | ೯ | ೧೨.೮೫ | ೨೦ | ೨೮.೫೭ | ೩ | ೪.೨೮೫ | ೭೦ | ೧೦೦ |
| ೦೩ | ೦೩ | ೦ | ೦ | ೪೬ | ೬೫.೭೧ | ೫ | ೭.೧೪ | ೧೯ | ೨೭.೧೪ | ೭೦ | ೧೦೦ |
| ೦೪ | ೦೪ | ೯ | ೧೨.೮೫ | ೪೭ | ೬೭.೧೪ | ೮ | ೧೧.೪೨ | ೬ | ೮.೫೭ | ೭೦ | ೧೦೦ |
| ೦೫ | ೦೫ | ೨ | ೨.೮೫ | ೫೨ | ೭೪.೨೮ | ೭ | ೧೦ | ೯ | ೧೨.೮೫ | ೭೦ | ೧೦೦ |
| ೦೬ | ೦೬ | ೧೧ | ೧೫.೭೧ | ೫೩ | ೭೫.೭೧ | ೩ | ೪.೨೮ | ೩ | ೪.೨೮ | ೭೦ | ೧೦೦ |
| ೦೭ | ೦೭ | ೫೧ | ೭೨.೮೫ | ೧೯ | ೨೭.೧೪ | ೦ | ೦ | ೦ | ೦ | ೭೦ | ೧೦೦ |
| ೦೮ | ೦೮ | ೧೯ | ೨೭.೧೪ | ೪೭ | ೬೭.೧೪ | ೪ | ೫.೭೧ | ೦ | ೦ | ೭೦ | ೧೦೦ |
| ೦೯ | ೦೯ | ೧೩ | ೧೮.೫೭ | ೫೧ | ೭೨.೮೫ | ೨ | ೨.೮೫ | ೪ | ೫.೭೧ | ೭೦ | ೧೦೦ |
| ೧೦ | ೧೦ | ೩ | ೪.೨೮ | ೫೨ | ೭೪.೨೮ | ೩ | ೪.೨೮ | ೧೨ | ೧೭.೧೪ | ೭೦ | ೧೦೦ |
| ೧೧ | ೧೧ | ೪೭ | ೬೭.೧೪ | ೨೩ | ೩೨.೮೫ | ೦ | ೦ | ೦ | ೦ | ೭೦ | ೧೦೦ |
| ೧೨ | ೧೨ | ೧೩ | ೧೮.೫೭ | ೪೯ | ೭೦ | ೩ | ೪.೨೮ | ೫ | ೭.೧೪ | ೭೦ | ೧೦೦ |
| ೧೩ | ೧೩ | ೨೩ | ೩೨.೮೫ | ೩೯ | ೫೫.೭೧ | ೧ | ೧.೪೨ | ೭ | ೧೦ | ೭೦ | ೧೦೦ |
| ೧೪ | ೧೪ | ೩ | ೪.೨೮ | ೧೫ | ೨೧.೪೨ | ೪೫ | ೬೪.೨೮ | ೭ | ೧೦ | ೭೦ | ೧೦೦ |

(ಮೂಲ: ಕ್ಷೇತ್ರ ಕಾರ್ಯ)

ಕೋಷ್ಟಕ ೩.೧೨ ರಲ್ಲಿನ ಪ್ರಶ್ನೆಗಳಿಗೆ ನೀಡಿದ ಪ್ರತಿಕ್ರಿಯೆಗಳನ್ನು ಕೋಷ್ಟಕ ೩.೧೩ ರಲ್ಲಿ ಪ್ರಶ್ನಾವಾರು ಪ್ರತಿಕ್ರಿಯೆಗಳ ಸಂಖ್ಯೆ ಮತ್ತು ಪ್ರತಿಶತದಲ್ಲಿ ತೋರಿಸಲಾಗಿದೆ. ಇವು ಆದಿವಾಸಿಗಳ ಸಮುದಾಯ ಹಕ್ಕುಗಳಿಗೆ ಸಂಬಂಧಪಟ್ಟ ಪ್ರಶ್ನೆಗಳಾಗಿವೆ. ಇವುಗಳನ್ನು ಪಡೆಯುವಲ್ಲಿ ಸರಾಸರಿ ಶೇಕಡಾ ೬೦ ಕ್ಕಿಂತ ಹೆಚ್ಚು ಆತಂಕ ಮತ್ತು ಅಡ್ಡಿ ಬರುತ್ತಿರುವುದು ಅರಣ್ಯ ಇಲಾಖೆಯಿಂದ ಎಂಬುದು ಅಧ್ಯಯನದಿಂದ ಕಂಡು ಬಂದಿದೆ. ಜೊತೆಗೆ ಗ್ರಾಮಪಂಚಾಯಿತಿಗಳಿಂದಲೂ ತೊಂದರೆಗಳಿವೆ. ಹಾಗೆಯೇ ನೆರೆ ಗ್ರಾಮಗಳಿಂದಲೂ ತೊಂದರೆಗಳಿವೆ. ಗಡಿ ಪ್ರದೇಶದ ಹಾಡಿ/ಪೋಡುಗಳಿಗೆ ನೆರೆ ರಾಜ್ಯದ ಜನರಿಂದಲೂ ಆತಂಕ ಮತ್ತು ಭಯ ಇರುವುದನ್ನು ಅಧ್ಯಯನದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ. ಅದರಲ್ಲೂ ಗಡಿ ಪ್ರದೇಶದಲ್ಲಿ ವಾಸ ಮಾಡುತ್ತಿರುವ ಪಾಲಾರ್ ಮತ್ತು ಬಳ್ಳೆ ಹಾಡಿಗಳಂತಹ ಹಾಡಿಗಳಿಗೆ ನೆರೆ ರಾಜ್ಯದ ಜನರ ಭಯ ಹೆಚ್ಚಿದೆ. ಪಾಲಾರ್‌ನ ಆದಿವಾಸಿಗಳು ಅರಣ್ಯ ಇಲಾಖೆಯವರ ಬೆದರಿಕೆಯೊಂದಿಗೆ ನಿತ್ಯ ತಮಿಳುನಾಡಿನ ಜನರ ಭಯದ ನೆರಳಲ್ಲಿ ಬದುಕು ದೂಡುವಂತಹ ಪರಿಸ್ಥಿತಿ ಇದೆ.

**ಉಪಸಂಹಾರ**

ಒಂದು ವೇಳೆ ಸರ್ಕಾರ ಅರಣ್ಯ ಹಕ್ಕುಗಳ ಕಾಯಿದೆ ಕುರಿತು ಗಂಭೀರವಾಗಿ ಚಿಂತನೆ ನಡೆಸಿದ್ದರೆ ಇದನ್ನು ಯಶಸ್ವಿಯಾಗಿ ಅನುಷ್ಠಾನ ಗೊಳಿಸಬಹುದಿತ್ತು. ಇದಕ್ಕಾಗಿ ಬುಡಕಟ್ಟು ವ್ಯವಹಾರಗಳ ಮಂತ್ರಾಲಯವು ಸಾಕಷ್ಟು ಶ್ರಮವಹಿಸಿದೆ. ಆದರೆ ಅಧಿಕಾರಿ ವರ್ಗದ ನಿರುತ್ಸಾಹ ಮನಸ್ಥಿತಿಯಿಂದಾಗಿ ಮತ್ತು ಪೂರ್ವಗ್ರಹ ಪೀಡಿತ ತಪ್ಪು ಗ್ರಹಿಕೆಯಿಂದ

ಆದಿವಾಸಿಗಳು ಮತ್ತು ಇತರೆ ಪಾರಂಪರಿಕ ಅರಣ್ಯವಾಸಿಗಳಿಗೆ ಅವರ ನ್ಯಾಯ ಬದ್ಧ ಹಕ್ಕುಗಳು ದೊರೆಯುತ್ತಿಲ್ಲ.

ಬುಡಕಟ್ಟು ವ್ಯವಹಾರಗಳ ಮಂತ್ರಾಲಯ ಅರಣ್ಯ ಇಲಾಖೆಯೊಂದಿಗೆ ಮಾನಸಿಕವಾಗಿ ಯುದ್ಧದಲ್ಲಿ ಗೆದ್ದಿದೆ. ಅರಣ್ಯ ಇಲಾಖೆಯು ತಾನು ನಿರ್ವಹಿಸಬೇಕಾದ ಹೊಸ ಸಂಕೀರ್ಣ ಪಾತ್ರದ ಕುರಿತು ಅಂದರೆ ಹೊಸ ರೀತಿಯ ಅರಣ್ಯ ನಿರ್ವಹಣೆ ಕುರಿತು ಪುನರ್ ಮಾಹಿತಿ ಮತ್ತು ತರಬೇತಿಯನ್ನು ತನ್ನ ಇಲಾಖಾ ಸಿಬ್ಬಂಧಿಗೆ ನೀಡಬೇಕಿದೆ. ಅರಣ್ಯ ಇಲಾಖೆಯ ಇಚ್ಛಾಶಕ್ತಿ ಮತ್ತು ಬೆಂಬಲವಿಲ್ಲದೆ ರಾಜ್ಯ ಕೇಂದ್ರಿತ ಅರಣ್ಯ ನಿರ್ವಹಣೆಯನ್ನು ಸಮುದಾಯ ಕೇಂದ್ರಿತಗೊಳಿಸುವುದು ಒಂದು ಸವಾಲಾಗಿದೆ. ನಿರಂತರ ತರಬೇತಿ ಮತ್ತು ಜಾಗೃತಿ ಕಾರ್ಯಕ್ರಮಗಳನ್ನು ಹಾಕಿಕೊಂಡು ಅರಣ್ಯ ಇಲಾಖೆಯ ಎಲ್ಲಾ ಹಂತದ ಸಿಬ್ಬಂದಿಗೆ ಕಾಯಿದೆಯ ಬಗೆಗೆ ಪುನರ್‌ಮನನ ಮಾಡಿಸುವುದರಿಂದ ಸುಗಮಗೊಳಿಸಬಹುದಾಗಿದೆ. ಕೇವಲ ಕಾನೂನಿನ ನೆರವಿನಿಂದ ಅರಣ್ಯ ಇಲಾಖೆಯ ಸಿಬ್ಬಂದಿಯ ಮನಸ್ಥಿತಿ ಬದಲಾಯಿಸಲು ಸಾಧ್ಯವಿಲ್ಲ. ಹಾಗಾಗಿ ತರಬೇತಿ ಪಡೆದವರನ್ನು ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ ಮಾಡಲು ನಿಯಮಿಸಬೇಕು. ಇದು ದೊಡ್ಡ ಕನಸಾಗಿಯೇ ಉಳಿಯುತ್ತದೆ.

ಅರಣ್ಯ, ವನ್ಯಪ್ರಾಣಿ ಮತ್ತು ದೇಶೀಯ (ಇಂಡಿಜಿನಿಸ್) ಜನರ ನಡುವೆ ಒಂದು ಸಮನ್ವಯತೆ ಸಾದಿಸಬೇಕು. ಇಲ್ಲಿ ಯಾರೂ ಕೂಡ ಯಾರಿಗೂ ತ್ಯಾಗ ಮಾಡಬಾರದಾಗಿದೆ. ಅವರೆಲ್ಲರೂ ಸಹವರ್ತಿಗಳು ಮತ್ತು ಸಹಬಾಳ್ವೆಗೆ ಒಗ್ಗಿಕೊಂಡವರು. ಯಾರೊಬ್ಬರನ್ನು ಬೇರ್ಪಡಿಸಿದರೂ ವ್ಯವಸ್ಥೆಯೇ ಅವ್ಯವಸ್ಥೆಯಾಗುತ್ತದೆ. ಹಾಗಾಗಿ ಅರಣ್ಯಕ್ಕೆ ಸಂಬಂಧಿಸಿದಂತೆ ಯಾವುದೇ ನೀತಿ ನಿಯಮ ರೂಪಿಸಿ ಅನುಷ್ಠಾನ ಮಾಡುವಾಗ ಹಲವು ದೃಷ್ಟಿಕೋನಗಳ ಅವಶ್ಯಕತೆ ಹಿಂದೆಂದಿಗಿಂತಲೂ ಇಂದು ಅತೀ ಅವಶ್ಯಕವಾದುದಾಗಿದೆ.

ಆದಿವಾಸಿಗಳ ಹೋರಾಟ ಕೇವಲ ತಮ್ಮ ಜೀವನೋಪಾಯಕ್ಕಾಗಿ ಮಾತ್ರವಾಗಿರದೆ ಅವರ ಸಾಂಸ್ಕೃತಿಕ ಬದುಕಿನ ಉಳಿಯುವಿಕೆ ಹೋರಾಟವಾಗಿದೆ. ಹೀಗಾಗಿ ಪುನರ್ವಸತಿ ಮತ್ತು ಪುನರ್ನಿರ್ಮಾಣ ನೀತಿ ಯಶಸ್ವಿಯಾಗಿ ಅನುಷ್ಠಾನವಾದರೆ ಮಾತ್ರ ಅವರು ತಮ್ಮ ಬದುಕನ್ನು ಕಾಣಬಹುದಾಗಿದೆ. ಎರಕನಗದ್ದೆ ಪೋಡಿನ ಸೋಲಿಗರ ಹಿರಿಯರಾದ ಶ್ರೀ ಅಚ್ಚುಗಗೌಡ ಇವರು ಹೇಳುವಂತೆ ಸರ್ಕಾರವು ಮೇಲ್ನೋಟಕ್ಕೆ ಜೀವನೋಪಾಯ ಅರಣ್ಯ ಉಪ ಉತ್ಪನ್ನಗಳನ್ನು ಆದಿವಾಸಿಗಳಿಗೆ ದೊರಕಿಸಿಕೊಡುವ ನೆಪ ಮಾಡುತ್ತಿದೆ. ಆದರೆ ಇವುಗಳನ್ನು ಸಂಗ್ರಹಿಸಲು ಮತ್ತು ಕೂಡಿಟ್ಟು ಕೊಳ್ಳಲು ಹಾಗೂ ಮಾರಾಟ ಮಾಡುವಲ್ಲಿ ಆದಿವಾಸಿಗಳು ಎದುರಿಸುತ್ತಿರುವ ನಿಜವಾದ ಸಮಸ್ಯೆಗಳ ಕಡೆ ಗಮನಹರಿಸಿಲ್ಲ ಎನ್ನುವುದು. ಈ ಹಿನ್ನೆಲೆಯಲ್ಲಿ ಅಧ್ಯಯನ ವ್ಯಾಪ್ತಿಯಲ್ಲಿ ಐ.ಟಿ.ಡಿ.ಪಿ

ಕಾರ್ಯ ವೈಕರಿಯನ್ನು ಪರಿಶೀಲಿಸಬೇಕಾಗಿದೆ. ಅರಣ್ಯ ಕಿರು ಉತ್ಪನ್ನಗಳು ಕೇವಲ ನಾಮಮಾತ್ರ ದೊರಕಿಂದಂತಾಗಿವೆ ಎಂಬ ಮಾತು ಕೇಳಿಬರುತ್ತಿದೆ. ಓರಿಸ್ಸಾದ ಟಿ.ಡಿ.ಸಿ.ಸಿ ಆದಿವಾಸಿಗಳ ಪರವಾಗಿ ಕೆಲಸ ಮಾಡ ಬೇಕಾಗಿದ್ದರೂ ಅದು ಹೇಗೆ ಆದಿವಾಸಿ ವಿರೋಧಿ ನೀತಿ ಅನುಸರಿಸುತ್ತಿದೆ ಎಂಬಂತಹ ಉದಾಹರಣೆಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗಿದೆ. "ಒಂದು ಸರ್ವೇಕ್ಷಣೆ ಪ್ರಕಾರ ಆದಿವಾಸಿಗಳು ಸಂಗ್ರಹಿಸುವ ಅರಣ್ಯ ಕಿರು ಉತ್ಪನ್ನಗಳು ಪ್ರಾಥಮಿಕ ಸಂಗ್ರಹಗಾರರಿಂದಲೇ ಪ್ರತಿಶತ 50 ಮಾರಾಟವಾಗುತ್ತಿದ್ದು ಇದು ನಿಗದಿತ ಬೆಲೆಗಿಂತ 50% ನಷ್ಟು ಕಡಿಮೆ ಇರುತ್ತದೆ."[೨] ಇಂತಹ ಹಲವು ಅಂಶಗಳನ್ನು ಕಾಯಿದೆ ಅನುಷ್ಠಾನದ ಸಂದರ್ಭದಲ್ಲಿ ಗಮನಿಸಬೇಕಿದೆ.

## ಕೊನೆ ಟಿಪ್ಪಣಿಗಳು

೧. Vidhya Das, *Minor Forest Produce and Rights of Tribals,* Economic and Political Weekly, Vol. 31, No. 50 (Dec. 14, 1996), pp. 3227-3229, http://www.jstor.org/stable/ 4404874.

೨. ಅಫ್ತಾಬ್ ಆಲಂ,ನ್ಯಾಯಪೀಠ,ಸುಪ್ರೀಂ ಕೋರ್ಟ್, ಪ್ರಜಾವಾಣಿ, ೨೦ ಏಪ್ರಿಲ್, ೨೦೧೩, ಪುಟ೦೭.

೩. ಅದೇ.

೪.ಬಿ.ಸುಜ್ಞಾನ ಮೂರ್ತಿ, *ಯಾರದೀ ಕಾಡು,* ಸಿ.ವಿ.ಜಿ. ಪಬ್ಲಿಕೇಶನ್.ಬೆಂಗಳೂರು, ೨೦೦೩ ಪುಟ ೦೩.

೫. ಪ್ರಭಾಕರಎ.ಎಸ್. *ಕರ್ನಾಟಕದಲ್ಲಿ ಆದಿವಾಸಿ ರೈತ ಹೋರಾಟಗಳ ಸ್ವರೂಪ,* ಕಾಗೋಡು ಚಳುವಳಿ, (ಸಂ) ಬೋರಲಿಂಗಯ್ಯ.ಹಿ.ಚಿ., ಮತ್ತು ಎನ್.ಹುಚ್ಚಪ್ಪ ಮಾಸ್ತರ, ಮಲೆನಾಡು ಜಾನಪದ ಲೋಕ,೨೦೦೨. ಪುಟ ೨೭೭.

೬. ಅದೇ.

೭. Section 57, *The Constitution Act (Fourty-Second Amendment) Act.1976. Forest Rights Bill, Uncorrected Parliament debate* (Dec 15 2006) available at < http://www.vanashakthi.in/ images/act/forest _rights _bill_parliment_debate.doc>(Last visited on 12.02.2008)

೮. Krishnaswamy, *supra* note 34.

೯. Explained: *Forest Rights Act,* The Indian Express, 3 January 2008

೧೦. See generally Thomas & Packham, *Ecology of woodlands and Forests* (2007): Johnson & Lewis, Land Degradation: Creation and Destriction (2007): Pande, *Landslide Problems in Uttaranchal India: Issuess and Challenges* 15(2) Disaster Prevention and Management 247

೧೧. Parliament debate, *Supra* note 34.

೧೨. Vanashakthi, *Response to the Campaign for Survival & Dignity.* Available at http://www.vanashakthi.in/csd-response.htm >(Last visited on 12.02.2008).

೧೩. Mihir Shah, *First You Push Them In, Then You Throw Them Out,* Vol XL NO.47 Economic and Political weekly 4896(November 19,2005).

೧೪. Madhusudhan.M.D., *Of Rights and Wrongs,* Vol. XL No.47,Economic and Political Weekly 4893-95( November 19,2005).

೧೫. Roger Cotterell, *Culture, Comparison, Community,* 2.2 International Journal of Law in Context (2006)

೧೬. Vanashakthi, *petition to the president of India, the Prime Minister and to all Members of Parliament*. available at http://envfor.nic.in/pt/TTF 2005/pdf/full_report.pdf (Last visited on 12.02.2008)

೧೭. Fallout, *Supra* note 38.

೧೮. Vanashakthi response, *Supra* note 41.

೧೯. Campaign for Survival and Dignity, Response to Vanashakthi on Campaign's Open Letter available at http://forestrightsact.awardspace.com/updates/update_07.11.07.htm (last visited on 12.02.2008)

೨೦. Vanashakthi petition, *Supra* note.

೨೧. Vanashakthi response, *Supra* note 41.

೨೨. ಅದೇ.

೨೩. ಅದೇ.

೨೪. See generally Arnold, *Managing Forests as Common Property* (1998).

೨೫. See generally Arnold, *Community Forestry*: Ten Years Review (1992).

೨೬. Five Year plan, *Supra* note 36.

೨೭. Campaign for Survival and Dignity, *Open Letter to Vanashakthi on Forest Rights Act* available at <http://forestrightsact.awardspace.com/ updates/ open%20to 20vanashakthi%20final.rtf>

೨೮. Upadhya, *Supra* note 9 at 54.

೨೯. Gibson, McKean & Ostrom, *Explaining Deforestation: The Role of Local Institutions in* People And Forests (Gibson, McKean &Ostrom, EDS) 1,5 (2000).

೩೦. ಸರ್ಕಾರಿ ಆದೇಶಗಳು (ಅ ದಿಂದ ಅಃ ವರೆಗೆ)

ಅ. ಅರ್ಜಿಗಳನ್ನು ಸಲ್ಲಿಸದೆ ಇರುವವರು ೩೦ ನೇ ಜೂನ್ ೨೦೧೪ ರೊಳಗಾಗಿ ಅರ್ಜಿಗಳನ್ನು ಸಲ್ಲಿಸಬಹುದು. ಈಗಾಗಲೇ ಅರ್ಜಿಗಳನ್ನು ಸಲ್ಲಿಸಿರುವವರು ಮತ್ತೆ ಅರ್ಜಿಗಳನ್ನು ಸಲ್ಲಿಸುವ ಅಗತ್ಯ ಇರುವುದಿಲ್ಲ. ಒಂದು ವೇಳೆ ಅರ್ಜಿದಾರರು ಈಗಾಗಲೇ ಅರ್ಜಿಗಳನ್ನು ಸಲ್ಲಿಸಿದ್ದು ಅದನ್ನು ಇನ್ನೂ ಪರಿಗಣಿಸದೇ ಇದ್ದಲ್ಲಿ ಮತ್ತೆ ಅರ್ಜಿ ಸಲ್ಲಿಸಿದ್ದಲ್ಲಿ ಅದನ್ನೂ ಸಹಿತ ಮೂಲ ಅರ್ಜಿಗೆ ಸೇರಿಸಿ ಪರಿಗಣಿಸುವುದು.

ಆ. ಗ್ರಾಮ ಮಟ್ಟದ ಅರಣ್ಯ ಹಕ್ಕು ಸಮಿತಿಗಳನ್ನು ವಿಭಾಗ ಮಟ್ಟದ ಮತ್ತು ಜಿಲ್ಲಾ ಮಟ್ಟದ ಸಮಿತಿಗಳನ್ನು ಎಲ್ಲೆಲ್ಲಿ ರಚನೆ ಮಾಡಿರುವುದಿಲ್ಲವೋ ಅಲ್ಲಿ ಮಾರ್ಚ ೩೧. ೨೦೧೪ ರೊಳಗೆ ರಚಿಸುವುದು.

ಇ. ಸದರಿ ಕಾಯ್ದೆಯನ್ನು ಅನುಷ್ಟಾನಗೊಳಿಸಲು ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಸಮನ್ವಯದೊಂದಿಗೆ ಕ್ರಮವಹಿಸುವುದು.

ಈ. ಅರಣ್ಯ ಇಲಾಖೆ ಅಧಿಕಾರಿಗಳು, ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು, ಗ್ರಾಮ ಲೆಕ್ಕಾಧಿಕಾರಿಗಳು, ಕಂದಾಯ ನೀರೀಕ್ಷಕರು ಮತ್ತು ಸಮಾಜ ಕಲ್ಯಾಣ ಅಧಿಕಾರಿಗಳು ಗ್ರಾಮ ಸಭೆಗಳಲ್ಲಿ ಹಾಜರಿದ್ದು ಸದರಿ ಪ್ರಕ್ರಿಯೆಗಳಿಗೆ ಸಹಕಾರ

ನೀಡುವುದು. ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಅರಣ್ಯ ಹಕ್ಕು ಸಮಿತಿಗಳಿಗೆ ಗ್ರಾಮ ಪಂಚಾಯತಿಯ ಅಭಿವೃದ್ಧಿ ಅಧಿಕಾರಿ/ಕಾರ್ಯದರ್ಶಿ ಸಮನ್ವಯ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.

ಊ. ಅರಣ್ಯ ಇಲಾಖೆ ಮತ್ತು ಕಂದಾಯ ಇಲಾಖೆ ಸರ್ವೆಯರ್‌ಗಳಿಂದ ಸರ್ವೆ ಕಾರ್ಯ ನಿರ್ವಹಿಸಿ ಸದರಿ ಸಮಿತಿಗಳಿಗೆ ಸಹಕರಿಸುವುದು.

ಋ. ಹಿಂದೆ ತಿರಸ್ಕರಿಸಿದ ಅರ್ಜಿಗಳ ಅರ್ಜಿದಾರರಿಗೆ, ಅವರ ಹೇಳಿಕೆ ಪಡೆಯಲು ಅವಕಾಶ ನೀಡದೇ ಮತ್ತು ಸಕಾರಣ ನೀಡದೇ ಹಾಗೂ ತಿರಸ್ಕರಿಸಿದ ಬಗ್ಗೆ ಮಾಹಿತಿ ನೀಡದ ಅರ್ಜಿದಾರರ ಅರ್ಜಿಗಳನ್ನು ಸಂಬಂಧಿಸಿದ ಸಮಿತಿಗಳು ಮರು ಪರಿಶೀಲಿಸಿ ಇತ್ಯರ್ಥಗೊಳಿಸುವುದು. (ನಿಯಮಗಳು ೨೦೦೮ ಪ್ರಕಾರ ನಿಯಮ ೧೪ ಉಪ ನಿಯಮ ೩ ಮತ್ತು ನಿಯಮ ೧೫ ಉಪ ನಿಯಮ ೩ ಹಾಗೂ ತಿದ್ದುಪಡಿ ನಿಯಮ ೧೨ ಎ (೫).

ಎ. ಪ್ರಸ್ತುತ ಅಂತಿಮ ಇತ್ಯರ್ಥಕ್ಕಾಗಿ ಬಾಕಿ ಇರುವ ಅರ್ಜಿಗಳನ್ನು ಮತ್ತು ಹೊಸದಾಗಿ ಬಂದಿರುವ ಅರ್ಜಿಗಳನ್ನು ಮತ್ತು ಮರು ಪರಿಶೀಲಿಸಬೇಕಾದ ಅರ್ಜಿಗಳನ್ನೂ ಸಹ ಡಿಸೆಂಬರ್ ೩೧ ೨೦೧೪ ರೊಳಗಾಗಿ ಇತ್ಯರ್ಥಗೊಳಿಸುವುದು.

ಏ. ಪರಿಶಿಷ್ಟ ಪಂಗಡ ಕಲ್ಯಾಣ ಇಲಾಖೆಯಿಂದ ಈ ಬಗ್ಗೆ ವ್ಯಾಪಕ ಪ್ರಚಾರ ನೀಡಿ ಅರಿವು ಮೂಡಿಸುವ ಮತ್ತು ತರಬೇತಿ ನೀಡುವ ಬಗ್ಗೆ ಕ್ರಮ ವಹಿಸುವುದು. ಆಂಧ್ರ ಪ್ರದೇಶದ ಮಾದರಿಯಲ್ಲಿ ಸದರಿ ಗ್ರಾಮ ಮಟ್ಟದ ಸಮಿತಿಗಳಿಗೆ ಸಹಾಯ ಮಾಡಲು ಪ್ರೇರಕರನ್ನು ೩ ತಿಂಗಳ ಅವಧಿಗೆ ರೂ ೧೫೦೦ ಗಳ ಮಾಹೆಯಾನ ಗೌರವಧನಗಳೊಂದಿಗೆ ನೇಮಿಸಿಕೊಳ್ಳಲು ಜಿಲ್ಲಾಧಿಕಾರಿಗಳಿಗೆ ಅನುಮತಿ ನೀಡಲಾಗಿದೆ. ಇದಕ್ಕೆ ತಗಲುವ ವೆಚ್ಚವನ್ನು ಕ್ರೂಢೀಕೃತ ಅನುದಾನದಿಂದ ಪರಿಶಿಷ್ಟ ಪಂಗಡದ ಇಲಾಖೆಯಿಂದ ಭರಿಸಲು ಸೂಚಿಸಲಾಗಿದೆ.

ಐ. ಈಗಾಗಲೇ ಹಕ್ಕು ಪತ್ರಗಳನ್ನು ನೀಡಿದ ಪ್ರದೇಶಗಳಲ್ಲಿ ಸ್ಥಳೀಯವಾಗಿ ಅವಶ್ಯಕವಿರುವ ಬೀದಿ ದೀಪ ಕುಡಿಯುವ ನೀರು, ರಸ್ತೆ ಇತ್ಯಾದಿ ಮೂಲಭೂತ ಸೌಕರ್ಯಗಳನ್ನು ಸದರಿ ಕಾಯ್ದೆಯ ಅನುಸಾರ ಸಂಬಂಧಿತ ಇಲಾಖೆಗಳ ಸಹಕಾರದೊಂದಿಗೆ ಒದಗಿಸಲು ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ.

ಒ. ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ಜೀವನೋಪಾಯ ನಡೆಸಲು ಸದರಿ ಅಧಿನಿಯಮ ಮತ್ತು ನಿಯಮಗಳಂತೆ ಅರಣ್ಯವಾಸಿಗಳಿಗೆ, ಮುಖ್ಯವಾಗಿ ಬುಡಕಟ್ಟು ಜನರಿಗೆ ಅನುಕೂಲವಾಗುವಂತೆ ಜಿಲ್ಲಾಮಟ್ಟದಲ್ಲಿ ಕ್ರಮವಹಿಸುವುದು.

ಓ. ಈ ಅಧಿನಿಯಮದಲ್ಲಿ ಹಕ್ಕುಗಳನ್ನು ಪಡೆದ ಜಮೀನುಗಳನ್ನು ಪರಭಾರೆ ಮಾಡಲು ಅವಕಶವಿರುವುದಿಲ್ಲ. (ಅಧಿನಿಯಮ ಕಲಂ-೪ ಉಪ ಕಲಂ (೪).

ಔ. ಹಕ್ಕು ಪತ್ರಗಳನ್ನು ನೀಡಿದ ನಂತರ ಅಂತಹ ಪ್ರಕರಣಗಳನ್ನು ಕಂದಾಯ ದಾಖಲೆಗಳಲ್ಲಿ ದಾಖಲಿಸಲು ಕಂದಾಯ ಇಲಾಖೆ ಕ್ರಮ ವಹಿಸುವುದು. ಅದೇ ರೀತಿ ಅರಣ್ಯ ಇಲಾಖೆ ದಾಖಲೆಗಳಲ್ಲಿ ಸಹ ನಮೂದಿಸಿಕೊಳ್ಳುವುದು.

ಅಂ. ಸದರಿ ಅಧಿನಿಯಮದ ಕಲಂ ೪ ಉಪ ಕಲಂ ೫ ರಂತೆ ಅರ್ಜಿ ಸಲ್ಲಿಸಿದ ಅರ್ಜಿದಾರರನ್ನು ಅವರ ಅಧಿಭೋಗದಲ್ಲಿರುವ ಅರಣ್ಯ ಜಮೀನಿನಿಂದ ಅರ್ಜಿ ವಿಲೇವಾರಿ ಪ್ರಕ್ರಿಯೆ ಪೂರ್ಣವಾಗುವವರೆಗೆ ಒಕ್ಕಲೆಬ್ಬಿಸತಕ್ಕದ್ದಲ್ಲ ಅಥವಾ ಹೊರಹಾಕತಕ್ಕದ್ದಲ್ಲ.

ಅಃ. ಸಂಬಂಧಿಸಿದ ಅಧಿಕಾರಿಗಳು ಮೇಲ್ಕಂಡ ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯ ವಾಸಿಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅಧಿನಿಯಮ. ೨೦೦೬ (೨೦೦೭ ರ ೨) ಮತ್ತು ನಿಯಮಗಳು ೨೦೦೮ ಮತ್ತು ತಿದ್ದುಪಡಿ ನಿಯಮಗಳು ೨೦೧೨ ಗಳನ್ನು ಸಕಾಲದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕ್ರಮವಹಿಸತಕ್ಕದ್ದು.

೩೧. ಕಾಯಿದೆ ಅನುಷ್ಠಾನದ ವರದಿ ತಯಾರಿಸಿದ ಸಮಿತಿ ಕಂಡುಕೊಂಡ ವಿಭಾಗಗಳು.

- ಪ್ರಕ್ರಿಯೆಗಳು ಮತ್ತು ನಿಯಮ ಬದ್ಧ ಸಂಸ್ಥೆಗಳು.
- ವೈಯಕ್ತಿಕ ಅರಣ್ಯ ಹಕ್ಕುಗಳು.
- ಸಮುದಾಯ ಅರಣ್ಯ ಹಕ್ಕುಗಳು.
- ಅಭಿವೃದ್ಧಿ ಯೋಜನೆಗಳ ಅನುಷ್ಠಾನ.
- ವಿಶೇಷ ಸಮುದಾಯಗಳಿಗಾಗಿ ಅನುಷ್ಠಾನ.
- ರಕ್ಷಿತ ವಲಯ ಮತ್ತು ಆಪತ್ತಿನ ಅಂಚಿನಲ್ಲಿರುವ ವನ್ಯಪ್ರಾಣಿ ಸಹಜವಾಗಿ ಹುಟ್ಟಿ ಬೆಳೆಯುವ ಆವಾಸಸ್ಥಾನ.
- ಭವಿಷ್ಯದಲ್ಲಿನ ಅರಣ್ಯ ಆಡಳಿತದ ರಚನೆ.
- ರಾಷ್ಟ್ರೀಯ ಆದಿವಾಸಿ ಅರಣ್ಯ ನೀತಿ ಮುಖಾಂತರ ಜೀವನಾವಶ್ಯಕ ಅರಣ್ಯ ಕಿರು ಉತ್ಪನ್ನಗಳನ್ನು ವೃದ್ಧಿಸುವುದು.
- ಅಭಿವೃದ್ಧಿ ಕಾರ್ಯಕ್ರಮಗಳ ಕುರಿತು ಆದಿವಾಸಿ ಮತ್ತು ಇತರ ಪಾರಂಪರಿಕ ಅರಣ್ಯವಾಸಿಗಳಿಗೆ ತಿಳಿಯಪಡಿಸುವುದು.

೩೨. ಬೋರಲಿಂಗಯ್ಯ.ಹಿ.ಚಿ., *ಅರಣ್ಯದ ನಡುವೆ ಆಧ್ಯಾತ್ಮ ಮತ್ತು ಅಟ್ಟಹಾಸ*, ಪುಟ ೨-೩, ೨೦೦೮.

## ಪೀಠಿಕೆ

ಅರಣ್ಯ ಹಕ್ಕುಗಳ ಕಾಯಿದೆ ತಂದು ಹತ್ತು ವರ್ಷಗಳು ಕಳೆದಿವೆ. ಇದರ ಮುಖ್ಯ ಉದ್ಧೇಶ "ಅರಣ್ಯದಲ್ಲಿ ವಾಸಿಸುವ ಗಿರಿಜನರಿಗೆ ತಮ್ಮ ಜೀವನ ನಡೆಸಲು ಯಾವುದೇ ರೀತಿಯ ತೊಡಕಿದ್ದರೂ ಅದರ ನಿವಾರಣೆಯಾಗಿದೆ"[೧] ಆದರೆ, "ಇಂದು ಈ ಕಾಯಿದೆಯನ್ನು ಜಾರಿಮಾಡದೆ, ಕೇವಲ ರಾಜಕೀಯ ಉದ್ಧೇಶದಿಂದ ಕೆಲ ಜನರಿಗೆ ಎಕರೆಗಿಂತಲೂ ಕಡಿಮೆ ಭೂಮಿ ಪಟ್ಟಾ ಹಂಚಿ, ಅರಣ್ಯ ಹಕ್ಕು ಕಾಯಿದೆ ಜಾರಿ ಆಗಿದೆ ಎಂಬಂತಹ ನಾಟಕ ಮಾಡುತ್ತಿದ್ದು, ನಿಜವಾಗಿಯೂ ಗಿರಿಜನರ ಸಬಲೀಕರಣ ಆಗದಂತೆ ಇಲಾಖೆಗಳೇ ಇದನ್ನು ಜಾರಿಗೊಳಿಸಲು ಅಡೆತಡೆಗಳನ್ನು ಒಡ್ಡುತ್ತಿವೆ."[೨] ಅಲ್ಲದೆ "ಯೋಜನೆಗಳು ಅನುಷ್ಠಾನ ಗೊಳ್ಳುತ್ತಿದ್ದಂತೆ ಮರೆತೇ ಬಿಡುವ ಜಾಯಮಾನ ನಮ್ಮ ವ್ಯವಸ್ಥೆಯದು."[೩] ಪರಿಸ್ಥಿತಿ ಹೀಗಿರುವಾಗ ಕಾಯಿದೆಯನ್ನು ರಚಿಸುವುದು ಎಷ್ಟು ಕಷ್ಟದಾಯಕವೋ, ಅದಕ್ಕಿಂತಲೂ ಪರಿಶ್ರಮ ಮತ್ತು ಸವಾಲುಳ್ಳದ್ದು ಪರಿಣಾಮಕಾರಿ ಅನುಷ್ಠಾನ. ಒಟ್ಟಾರೆ ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನಕ್ಕೆ ಹಲವು ತೊಡಕುಗಳು ಎದುರಾಗಿವೆ. ಮುಖ್ಯವಾಗಿ ಅರಣ್ಯ ಇಲಾಖೆ, ಕಂದಾಯ ಇಲಾಖೆ, ಸಮಾಜ ಕಲ್ಯಾಣ ಇಲಾಖೆ ಇವುಗಳ ಮಧ್ಯೆ ಸಮನ್ವಯತೆಯ ಕೊರತೆ. ಲೋಕೋಪಯೋಗಿ ಇಲಾಖೆ, ವಿದ್ಯುತ್ ಮಂಡಳಿ ಕಾರ್ಯ ನಿರ್ವಹಿಸಲು ಗೊಂದಲಗಳಿವೆ. ಪ್ರಸ್ತುತ ಅಧ್ಯಾಯದಲ್ಲಿ ಇಂತಹ ಹಲವು ಅಂಶಗಳನ್ನು ವಿವರವಾಗಿ ಚರ್ಚಿಸಲಾಗಿದೆ.

### ೪. ೧. ಅರಣ್ಯ ಇಲಾಖೆ, ಪುನರ್ವಸತಿ ಯೋಜನೆ ಮತ್ತು ಆದಿವಾಸಿಗಳು

ಅರಣ್ಯ ಹಕ್ಕುಗಳ ಕಾಯಿದೆ ರೂಪಿಸಲ್ಪಟ್ಟಿದೆ. ಆದರೆ ಆದಿವಾಸಿಗಳಿಗೆ ನಿಜವಾಗಿಯೂ ನೀಡಬೇಕಾದ ಹಕ್ಕುಗಳನ್ನು ಬಿಟ್ಟುಕೊಡುವಲ್ಲಿ ಅರಣ್ಯ ಇಲಾಖೆ ಇನ್ನೂ ಉದಾರ ಮನೂಭಾವ ತೋರುತ್ತಿಲ್ಲ. ಇದಕ್ಕೆ ಮುಖ್ಯ ಕಾರಣ "ಅರಣ್ಯ ಹಕ್ಕುಗಳ ಕಾಯಿದೆ ಜಾರಿಯಾದಲ್ಲಿ ಬುಡಕಟ್ಟು ಜನಾಂಗದವರಿಗೆ ಅಲ್ಲಿನ ನಿಸರ್ಗ ಸಂಪತ್ತಿನ ಬಳಕೆಯ ಹಕ್ಕು ಹಾಗೂ ಜವಾಬ್ದಾರಿ ನೀಡಬೇಕಾಗುತ್ತದೆ. ಕಾಡಿನಲ್ಲಿ ಯಾವ ರೀತಿಯ ಅಭಿವೃದ್ಧಿ ಕಾರ್ಯ ರೂಪಿಸಬೇಕೆಂದರೂ ಬುಡಕಟ್ಟು ಜನಾಂಗದ ಗ್ರಾಮ ಸಭೆಯ ಒಪ್ಪಿಗೆ ಅನಿವಾರ್ಯ. ಈ ಅಂಶವನ್ನು ಗಣನೆಗೆ ತೆಗೆದುಕೊಂಡು, ಒಡಿಶಾದ ನಿಯಮಗಿರಿಯಲ್ಲಿ ಅಲ್ಲಿನ ಆದಿವಾಸಿಗಳ ಗ್ರಾಮ ಸಭೆಯು, ವೇದಾಂತ ಕಂಪನಿಯ ೫೦೦೦೦ ರೂ. ಕೋಟಿಯ ಯೋಜನೆಯನ್ನು ತಡೆ ಹಿಡಿಯುವಲ್ಲಿ ಸಫಲವಾಗಿದೆ."[೪] ಇಂತಹ ವಿಷಯಗಳು ಅರಣ್ಯ ಇಲಾಖೆಯ ಅಧಿಕಾರಿವರ್ಗದ ನಿದ್ದೆಗೆಡಿಸಿರಬಹುದು.

ಪುನರ್ವಸತಿ, ಇದು ಅರಣ್ಯ ಇಲಾಖೆ ಮತ್ತು ಆದಿವಾಸಿಗಳ ಮಧ್ಯೆ ಸಂಘರ್ಷಕ್ಕೆ ಎಡೆ ಮಾಡಿಕೊಟ್ಟಿದೆ. ಪುನರ್ವಸತಿ ಯೋಜನೆಗಳ ಕುರಿತು ಆದಿವಾಸಿಗಳು ಹೇಳುವುದೆಂದರೆ "ಬ್ರಿಟಿಷರು ಭಾರತ ದೇಶಕ್ಕೆ ಬರುವ ಮುನ್ನವೇ ನಮ್ಮ ಹಿರಿಯರು

ಇಲ್ಲಿದ್ದರು. ಅರಣ್ಯ ಸಂರಕ್ಷಣಾ ಕಾಯಿದೆ ಜಾರಿಗೆ ಬರುವ ಮುನ್ನವೇ ಹಾಡಿಯಿತ್ತು. ಇಂತಹ ಕಾಯಿದೆಗಳು ಜಾರಿಗೆ ಬಂದ ಮೇಲೆ ಕಾಡಿನಿಂದ ಹೊರ ಹಾಕುವ ಹುನ್ನಾರ ನಡೆಯುತ್ತಿದೆ. ಇಂತಹ ಕಾಯಿದೆ, ಪುನರ್ವಸತಿ ಯೋಜನೆ ಜಾರಿಗೆ ಬರುವ ಮುನ್ನ ಕಾಡಿನ ಜನರ ಅಭಿಪ್ರಾಯ ಕೇಳಬೇಕಿತ್ತು. ಈ ಅಭಿಪ್ರಾಯ ಹಾಡಿಯಲ್ಲಿದೆ."[೫] ಆದರೆ ಇದಕ್ಕೆ ವ್ಯತಿರಿಕ್ತ ಆಶಯ ವನ್ಯಪ್ರಾಣಿ ಸಂರಕ್ಷಕರಲ್ಲಿದೆ. ಇವರ ಪ್ರಕಾರ "ಆದಿವಾಸಿಗಳು ಪುನರ್ವಸತಿ ಅವಕಾಶವನ್ನು ಈಗ ಬಿಟ್ಟರೆ ಮುಂದೆ ದೊರಕುವುದು ಕಷ್ಟ. ಪುನರ್ವಸತಿಯಿಂದ ಆದಿವಾಸಿಗಳಿಗೇ ಲಾಭ. ಪ್ಯಾಕೇಜ್ ಜೊತೆಗೆ ಸರ್ಕಾರದ ನೂರಾರು ಯೋಜನೆಗಳು ಇವರನ್ನು ಸುಲಭವಾಗಿ ತಲುಪುತ್ತವೆ. ಇವರನ್ನು ಕಾಡಿನಿಂದ ದೂಡುತ್ತಿಲ್ಲ. ಕಾಡಿನ ಅಧಿಸೂಚನೆಯಿಂದ ಭೂಮಿಯನ್ನು ಹೊರಗಿರಿಸಿ ಅಲ್ಲಿ ಮನೆ ಕಟ್ಟುತ್ತಿದ್ದಾರೆ. ಒಂದರ್ಥದಲ್ಲಿ ಅದು ಸಹ ಕಾಡೇ. ಜನ ಈ ಯೋಜನೆಯನ್ನು ಬಳಸಿಕೊಳ್ಳಬೇಕು."[೬] ಎಂಬ ವಾದವನ್ನು ಮತ್ತೊಂದು ಕಡೆ ಮಾಡಲಾಗುತ್ತಿದೆ. ಆದರೆ "ಪುನರ್ವಸತಿ ಯಾವತ್ತಿದ್ದರೂ ಬಲವಂತವಾಗಿ ಮಾಡುವಂತಿಲ್ಲ. ಅವರೇ ಶಾಂತಿಯಿಂದ ಮುಂದೆ ಬಂದರೆ ಮಾತ್ರ ಸ್ಥಳಾಂತರಿಸಬಹುದು. ಆದಿವಾಸಿಗಳು ಕೃಷಿ ಮಾಡುವುದು ಕಷ್ಟ. ಹೀಗಾಗಿ ಮುಂದಿನ ದಿನಗಳಲ್ಲಿ ಪೂರ್ಣ ಹಣ ನೀಡಲು ಒತ್ತು ನೀಡುತ್ತೇವೆ. ಅವರು ಇಷ್ಟ ಪಟ್ಟ ಕಡೆ ಜಮೀನು ದೊರಕಿದರೆ ಸ್ಥಳಾಂತರ ಮಾಡಲು ಪ್ರಯತ್ನಿಸುತ್ತೇವೆ."[೭] ಎಂಬ ಗೊಂದಲದ ಪುನರ್ವಸತಿ ಪ್ಯಾಕೇಜ್ ಘೋಷಿಸುತ್ತಾರೆ. ಆದರೆ ವಿವಿಧ ಹಂತಗಳಲ್ಲಿ ನಾಗರಹೊಳೆ ಕಾಡಿನ ಅಂಚಿನಲ್ಲಿ ಆದಿವಾಸಿಗಳ ಪುನರ್ವವಸತಿ ಕಾರ್ಯಕ್ರಮ ನಡೆದರೂ ಸಾವಿರಾರು ಕುಟುಂಬಗಳು ಇನ್ನೂ ಕಾಡಿನ ನಡುವೆಯೇ ಇವೆ. ತಮ್ಮನ್ನು ಕಾಡಿನ ಮಕ್ಕಳು ಎಂದೇ ಕರೆದುಕೊಳ್ಳುವ ಇವರಿಂದ ಅರಣ್ಯ ಇಲಾಖೆ ಜಾರಿ ಮಾಡುತ್ತಿರುವ ರಾಷ್ಟ್ರೀಯ ಹುಲಿ ಸಂರಕ್ಷಣಾ ಪ್ರಾಧಿಕಾರದ ಪುನರ್ವಸತಿ ಪ್ಯಾಕೇಜ್‌ಗೆ ಭಾರಿ ವಿರೋಧವಿದೆ. "ನಾವು ಕಾಡಿನ ಮಕ್ಕಳು. ನಾವು ಹುಟ್ಟಿ ಬೆಳೆದಿದ್ದೇ ಇಲ್ಲಿ. ನಮ್ಮ ತಾತ ಮುತ್ತಾತ ಅಜ್ಜಿ, ಮುತ್ತಜ್ಜಿ ಬದುಕಿದ್ದೇ ಕಾಡಲ್ಲಿ. ಇಲ್ಲೇ ನಮ್ಮ ದೇವರಿದೆ. ಹಾಡಿಯೇ ನಮ್ಮ ಊರು. ನಾವು ಬದುಕುವುದೇ ಇಲ್ಲಿ. ಕಾಡಿನಿಂದ ಹೊರ ಹೋದವರಿಗೆ ಪ್ಯಾಕೇಜ್‌ನಲ್ಲಿ ನೀಡಿದ ಕೃಷಿ ಭೂಮಿಗೆ ಹಕ್ಕುಪತ್ರವನ್ನೇ ನೀಡಿಲ್ಲ. ಇಲಾಖೆಯ ಮಾತು ಕೇಳಿಕೊಂಡು ಕಾಡನ್ನು ಬಿಟ್ಟು ಹೇಗೆ ಹೋಗುವುದು? ಅಧಿಕಾರಿಗಳನ್ನು ನಂಬುವುದು ಹೇಗೆ?."[೮] ಇದು ಆದಿವಾಸಿಗಳ ಬಿರುನುಡಿ. ಜೊತೆಗೆ "ಗಿರಿಜನರ ನಂಬಿಕೆಗಳೇ ಬೇರೆ. ಇವು ಬಹುಮುಖೀ ವ್ಯವಸ್ಥೆಯಲ್ಲಿರುವಂತಹ ನಾಗರೀಕರಿಗೆ ಅರ್ಥವಾಗುವುದಿಲ್ಲ. ಅವರು ಭೂಮಿಯನ್ನು ಸಕಲ ಜೀವರಾಶಿಗಳಿಗೆ ಜೀವ ನೀಡುವ ಸೃಷ್ಟಿತಾಯಿ ಎಂದು ನಂಬುತ್ತಾರೆ. ಹಾಗಾಗಿ ಜೀವ ಮತ್ತು ಮಣ್ಣಿಗೆ ಅನ್ಯೋನ್ಯ ಸಂಬಂಧವಿದೆ ಎನ್ನುತ್ತಾರೆ. ಜೊತೆಗೆ ಭೂಮಿ ತಮಗೆ ಬೇಕಾದ್ದೆಲ್ಲವನ್ನೂ ಒದಗಿಸಿಕೊಡುತ್ತದೆ ಎನ್ನುತ್ತಾರೆ. ಅದೇ ಅವರ ಬದುಕಿನ ಆರ್ಥಿಕ ಮೂಲ. ಇದು ಅವರಿಗೆ ಬದುಕು, ಹೆಮ್ಮೆ ಮತ್ತು ಘನತೆಯನ್ನು ಒದಗಿಸಿಕೊಡುತ್ತದೆ ಎಂದು ತಿಳಿದಿದ್ದಾರೆ.

ಹಾಗಾಗಿ ಭೂಮಿಯನ್ನು ಏಕೆ ಒಂದು ವಸ್ತುವಾಗಿ ಪರಿಗಣಿಸಬೇಕು ಎನ್ನುತ್ತಾರೆ? ಈ ಪರಿಕಲ್ಪನೆಯಿಂದ ಇಂದಿನ ಪರಿಸರ ಸಮಸ್ಯೆಗಳಿಗೆ ಉತ್ತರ ದೊರೆಯಬಹುದು. ಈ ಮೂಲಕ ಜಗತ್ತು ಉಳಿಯಬಹುದು. ಆದ್ದರಿಂದ ಅವರು ಬದುಕುವ ಜಾಗವನ್ನು ಅವರಿಗೇ ಬಿಡಬೇಕು, ಸ್ಥಳಾಂತರ ಉತ್ತರವಲ್ಲ. ಹಾಗಾಗಿ ಅವರನ್ನು ಅವರ ಬದುಕಿನ ತಾಣದಲ್ಲಿ ಬದುಕಲು ಬಿಡುವುದೇ ಸರಿಯಾದ ಮಾರ್ಗ."[೯] ಎಂಬಂತಹ ಸಿದ್ಧಾಂತಗಳನ್ನು ತಳ್ಳಿಹಾಕುವಂತಿಲ್ಲ. ಏಕೆಂದರೆ ಆದಿವಾಸಿಗಳು ಅರಣ್ಯದ ಬಗೆಗೆ ಹೇಗೆ ಅಪಾರ ಜ್ಞಾನ ಹೊಂದಿರುವರೂ ಅಷ್ಟೇ ಕೆಟ್ಟ ಅನುಭವವನ್ನು ಸ್ಥಳಾಂತರದಿಂದ ಪಡೆದಿದ್ದಾರೆ. ಪ್ರಭುತ್ವ ಯಾವತ್ತಿಗೂ ಅವರನ್ನು ಶತ್ರುಗಳಂತೆ ನೋಡಿದೆ. (ವಿವರಕ್ಕೆ ಗಮನಿಸಿ ಆಧಾರಗಳು ೧೦ & ೧೧) ಇಂತಹ ಪಾಡು ಅನುಭವಿಸಿರುವ ಮತ್ತು ನಿರಂತರ ಶೋಷಣೆಗೆ ಒಳಗಾಗಿರುವ ಬುಡಕಟ್ಟು ಸಮುದಾಯಗಳಿಗೆ ಈಗ ಹಣಕ್ಕಿಂತ ಹೆಚ್ಚಾಗಿ ಭದ್ರತೆ ಬೇಕಾಗಿದೆ. ಅಪಮಾನವಿಲ್ಲದಂತೆ ಬದುಕುವ ಮಾನವೀಯ ವಾತಾವರಣ ಬೇಕಾಗಿದೆ. ಅವರ ಭೂಮಿ ಮತ್ತು ಅವರ ಅರಣ್ಯವನ್ನು ಅವರಿಗೆ ಮರಳಿ ನೀಡಿದರೆ ಸಾಕು. ಅವರ ಅಭಿವೃದ್ಧಿ ತಾನಾಗಿಯೇ ಆಗುತ್ತದೆ, ಅರಣ್ಯವೂ ಉಳಿಯುತ್ತದೆ. ಈ ಹಿನ್ನೆಲೆಯಲ್ಲಿ ಭೂಮಿ ಮತ್ತು ಅರಣ್ಯವೆಂಬ ಅಭಿವೃದ್ಧಿ ಮೂಲ ಸಂಗತಿಗಳನ್ನು ಹೆಚ್ಚು ಗಂಭೀರವಾಗಿ ಪರಿಗಣಿಸಬೇಕಿದೆ. ಎಂಬುದು ವಿಚಾರವಾದಿಗಳ ವಾದ. ಆದರೆ ಸತ್ಯಾಂಶವೇ ಬೇರೆ ಇದೆ. ಇಂತಹ ಹಲವು ಸಂಘರ್ಷಗಳ ಮಧ್ಯೆ ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದ ಮಾತು ದೂರವೇ ಉಳಿದಂತಾಗಿದೆ.

### ೪. ೨. ಅರಣ್ಯ ಇಲಾಖೆ ಅಧಿಕಾರಿಗಳು ಮತ್ತು ರಾಜಕಾರಣಿಗಳು

ಅರಣ್ಯ ಇಲಾಖೆ ಅಧಿಕಾರಿಗಳು ಮತ್ತು ರಾಜಕಾರಣಿಗಳ ಮಧ್ಯೆ ನಿರಂತರ ತಿಕ್ಕಾಟವನ್ನು ಗಮನಿಸಲಾಗುತ್ತಿದೆ. ಪರಸ್ಪರ ಹೊಂದಾಣಿಕೆ ಮತ್ತು ಜವಾಬ್ದಾರಿಯಿಂದ ವರ್ತಿಸದೆ ಆದಿವಾಸಿಗಳನ್ನು ಗೊಂದಲದಲ್ಲಿ ಸಿಲುಕಿಸುತ್ತಿದ್ದಾರೆ. "ಅರಣ್ಯ ಇಲಾಖೆಯ ಬೇಜವಾಬ್ದಾರಿ ಅಧಿಕಾರಿಗಳಿಂದಾಗಿ ಅರಣ್ಯ ವಾಸಿಗಳಿಗೆ ತೊಂದರೆ ಆಗುತ್ತಿದೆ."[೧೨] ಹಾಗೆಯೇ "ನನ್ನಿಂದಾಗಿ ಅರಣ್ಯ ಒತ್ತುವರಿ ತೆರವುಗೊಳಿಸಲು ಆಗುತ್ತಿಲ್ಲ ಎಂದು ಅಧಿಕಾರಿಗಳು ನಿರ್ಣಯ ಮಾಡಿದ್ದಾರೆ. ಅವರಿಗೆ ಎಷ್ಟರಮಟ್ಟಿಗೆ ದುರಹಂಕಾರ ಇದೆ ಎಂಬುದಕ್ಕೆ ಇದು ನಿದರ್ಶನ"[೧೩] ಜೊತೆಗೆ "ಅರಣ್ಯ ಅಧಿಕಾರಿಗಳು ಬೇಜವಾಬ್ದಾರಿಯಿಂದ ನಡೆದುಕೊಳ್ಳುತ್ತಿದ್ದಾರೆ. ಅಂತಹ ಅಧಿಕಾರಿಗಳಿಗೆ ಕಟ್ಟುನಿಟ್ಟಿನ ಸೂಚನೆ ನೀಡಲಾಗುವುದು"[೧೪] ಇಂತಹ ವಾಕ್ಸಮರ ನಡೆಯುತ್ತಲೇ ಇರುತ್ತದೆ. ಹಾಗೆಯೇ "ಅರಣ್ಯ ಭೂಮಿ ಸರ್ವೆ ಮಾಡಿಸಬೇಕು, ಅರಣ್ಯ ಪ್ರದೇಶದಲ್ಲಿ ನೆಲೆಸಿರುವ ಆದಿವಾಸಿಗಳು ಹಾಗೂ ಪರಿಶಿಷ್ಟರನ್ನು ಒಕ್ಕಲೆಬ್ಬಿಸಬಾರದು. ಹಕ್ಕು ಪತ್ರ ವಿತರಿಸಬೇಕು"[೧೫] ಎಂಬಂತಹ ವಾದ ಸರಣಿ ಮಂಡಿಸುತ್ತಾರೆ. ಇವುಗಳನ್ನು ಗಮನಿಸಿದಾಗ ಅರಣ್ಯ ಇಲಾಖೆಯ ಅಧಿಕಾರಿಗಳು ಪ್ರಭುತ್ವದ ನಿರ್ದೇಶನಗಳನ್ನು ಪಾಲಿಸುತ್ತಿಲ್ಲವೆ? ಹಾಗಾದರೆ

ಜನಸಾಮಾನ್ಯರ ಗತಿ ಏನು ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಪ್ರಶ್ನೆ ಉತ್ತರಗಳೇನೇ ಇರಲಿ ಆದಿವಾಸಿಗಳ ಪರವಾಗಿರುವ ಕಾಯಿದೆ ಅನುಷ್ಠಾನದ ವಿಳಂಬಕ್ಕೆ ಕಾರಣಕರ್ತರಾದ ಅಧಿಕಾರಿ ವರ್ಗಕ್ಕೆ ಸೂಕ್ತ ನಿರ್ದೇಶನ ಸಿಗುತ್ತಿಲ್ಲ. ಮತ್ತು ಇಚ್ಛಾಶಕ್ತಿಯುಳ್ಳ ರಾಜಕಾರಣಿಗಳಿಲ್ಲ. ಇದು ಕಾಯಿದೆಯ ಪರಿಣಾಮಕಾರಿ ಅನುಷ್ಠಾನದ ವಿಳಂಭಕ್ಕೆ ಕಾರಣವಾಗಿದೆ. ಇದರಿಂದಾಗಿ ಆದಿವಾಸಿಗಳು ತೊಂದರೆ ಅನುಭವಿಸುತ್ತಿದ್ದಾರೆ.

**೪.೩. ಅರಣ್ಯ ಹಕ್ಕುಗಳ ಕಾಯಿದೆ ಮತ್ತು ಸರ್ಕಾರಿ ಸಚಿವಾಲಯ, ಇಲಾಖೆಗಳು, ಸಂಸ್ಥೆಗಳು ಹಾಗೂ ಆದಿವಾಸಿಗಳು**

ಪ್ರಸ್ತುತ ಕಾಯಿದೆಯ ಅನುಷ್ಠಾನದಲ್ಲಿ ಅರಣ್ಯ ಮತ್ತು ಪರಿಸರ ಸಚಿವಾಲಯದ ಜೊತೆಗೆ ವಿವಿಧ ಸರ್ಕಾರಿ ಇಲಾಖೆಗಳು, ಸರ್ಕಾರೇತರ ಸಂಸ್ಥೆಗಳು ಮತ್ತು ಆದಿವಾಸಿಗಳ ಪಾತ್ರ ಪ್ರಮುಖವಾದದ್ದು. ಆದರೆ ಇಲ್ಲಿ ಉದ್ಬವಿಸಿರುವ ಸಮನ್ವಯದ ಕೊರತೆ ಹೇಗೆ ಸವಾಲುಗಳನ್ನು ಸೃಷ್ಠಿಸಿದೆ ಎಂಬುದನ್ನು ಕಂಡುಕೊಳ್ಳುವ ಅವಶ್ಯಕತೆ ಇದೆ.

**೪.೩.೧. ಅರಣ್ಯ ಮತ್ತು ಪರಿಸರ ಸಚಿವಾಲಯ**

ಅರಣ್ಯ ಮತ್ತು ಪರಿಸರ ಸಚಿವಾಲಯ ಹಾಗೂ ಅರಣ್ಯ ಹಕ್ಕುಗಳ ಕಾಯಿದೆ ಪರಸ್ಪರ ವಿರುದ್ಧವಾಗಿವೆ. ಅರಣ್ಯ ಇಲಾಖೆ ಆದಿವಾಸಿಗಳನ್ನು ಅರಣ್ಯದಿಂದ ವಿಮುಕರನ್ನಾಗಿಸುವ ಗುರಿ ಹೊಂದಿದೆ. ಆದರೆ ಆದಿವಾಸಿಗಳು ಮತ್ತು ಅರಣ್ಯದ ಅವಿನಾಭಾವತೆಯನ್ನು ಮುಂದುವರೆಸುವ ಆಶಯ ಅರಣ್ಯ ಹಕ್ಕುಗಳ ಕಾಯಿದೆಗಿದೆ. ಇಂತಹ ಹಲವು ವೈರುಧ್ಯಗಳನ್ನು ಗಮನಿಸಲಾಗಿದೆ. "ಗಿಡಗಳಿಂದ, ಮರ ಮುಟ್ಟುಗಳಿಂದ ಹಣ ಗಳಿಸಬೇಕೆಂಬ ಒಂದೇ ಪ್ರಮುಖ ಉದ್ದೇಶವನ್ನಿಟ್ಟುಕೊಂಡು ಅರಣ್ಯ ಇಲಾಖೆಯು ರಾಜ್ಯಾದ್ಯಂತ ಅಕೇಶಿಯಾವನ್ನು ನೆಡುವ, ನೆಡು ತೋಪನ್ನು ನಿರ್ಮಿಸುವ ಬೃಹತ್ ಕಾರ್ಯಕ್ರಮಕ್ಕೆ ಚಾಲನೆ ನೀಡಿತು. ಅಕೇಶಿಯಾದ ಎಲೆಗಳು ದಪ್ಪವಾಗಿದ್ದು, ಅದನ್ನು ಜಾನುವಾರುಗಳು ಮೇಯಲು ಇಷ್ಟಪಡುತ್ತಿಲ್ಲ. ಹೀಗಾಗಿ, ಜಾನುವಾರುಗಳ ಒತ್ತಡ ತಡೆದುಕೊಂಡು ಶೀಘ್ರಗತಿಯಲ್ಲಿ ಬೆಳೆಯುವ ಗಿಡವಾಗಿ ಅಕೇಶಿಯಾ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆಯಿತು."[೧೬] ಇದು "ಜನರ ಉರುವಲಿನ ಬೇಡಿಕೆ ಈಡೇರಿಸುವ ಉದ್ದೇಶ ಹೊಂದಿದ್ದರೂ ಅಂತಿಮವಾಗಿ ಅರಣ್ಯ ಆಧಾರಿತ ಉದ್ದಿಮೆಗಳಿಗೆ ಈ ಅಕೇಶಿಯಾ ನೆಡುತೋಪುಗಳನ್ನು ಕಟಾವು ಮಾಡಿ ಮಾರಾಟ ಮಾಡುವ ಪರಂಪರೆಯನ್ನು ಅರಣ್ಯ ಇಲಾಖೆ ನಿಷ್ಠೆಯಿಂದ ಪಾಲಿಸಿಕೊಂಡು ಬಂದಿದೆ."[೧೭] ಅಲ್ಲದೆ "ಅರಣ್ಯ ಇಲಾಖೆಯು ಅರಣ್ಯೀಕರಣದ ಯೋಜನೆಗಳನ್ನು ಕೇವಲ ಆರ್ಥಿಕ ದೃಷ್ಟಿಯಿಂದ ನೋಡುವುದು ಮಾತ್ರವಲ್ಲದೆ, ಇದನ್ನು ಇಲಾಖೆಯ ಪ್ರತಿಯೊಂದು ಯೋಜನೆಯಲ್ಲಿ ಕಾರ್ಯರೂಪಕ್ಕೆ ತರುವಲ್ಲಿ ಸಫಲವಾಗಿದೆ. ವಿಚಿತ್ರವೆಂದರೆ, ಹಣ್ಣು ಹಂಪಲ ಗಿಡಗಳ ಬದಲಾಗಿ ಅಕೇಶಿಯಾಕ್ಕೆ ಶರಣಾಗಿ ಅಕೇಶಿಯಾ ಬೆಳೆಯುವುದೇ ಅರಣ್ಯೀಕರಣ

ಎಂಬಂತಾಗಿದೆ."[೧೮] ಅರಣ್ಯ ಇಲಾಖೆ ಪಾಲಿಸಿಕೊಂಡು ಬಂದ ಮತ್ತೊಂದು ಸಂಪ್ರದಾಯವೆಂದರೆ. "ಯಾವುದೇ ರೀತಿಯಲ್ಲಿ ನೆಡುತೋಪುಗಳನ್ನು ನಿರ್ಮಿಸುವಾಗ ಒಂದೇ ಜಾತಿಯ ಗಿಡಗಳನ್ನು ಹೆಚ್ಚಿನ ಪ್ರಮಾಣದಲ್ಲಿ ತೀವ್ರ ಸಾಂದ್ರತೆಯಲ್ಲಿ ಅಂತರವಿಲ್ಲದೆ ನೆಡಲಾಗುತ್ತದೆ. ಹೀಗೆ ನೆಟ್ಟಾಗ ಅವುಗಳು ಅಡ್ಡ ಬೆಳೆಯದೇ, ಸೂರ್ಯಕಿರಣಕ್ಕಾಗಿ ಮೇಲೆ ಬೆಳೆದು ಎತ್ತರದ ಗಳುಗಳಾಗಿ, ಮರದ ದಿಮ್ಮಿಗಳಾಗಿ ಬೆಳೆಯುತ್ತದೆ. ಈ ನೆಡುತೋಪು ಮಣ್ಣಿನ ಪೋಷಕಾಂಶಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಪಡೆದು ಅಲ್ಲಿನ ಮಣ್ಣನ್ನು ಬರಡಾಗಿಸುತ್ತದೆ. ಅಕೇಶಿಯಾ ಗಿಡಗಳ ತೀವ್ರ ಬೆಳವಣಿಗೆಯ ಗುಣದಿಂದಾಗಿ ಅವುಗಳು ಮಣ್ಣಿನಲ್ಲಿನ ತೇವಾಂಶವನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಸಿಕೊಳ್ಳುವ ಶಕ್ತಿ ಹೊಂದಿದೆ. ಶೀಘ್ರ ಬೆಳವಣಿಗೆ ಎಂದರೆ, ಹೆಚ್ಚಿನ ನೀರಿನ ಬಳಕೆ. ಕ್ರಮೇಣವಾಗಿ ಅಕೇಶಿಯಾ ನೆಡುತೋಪಿನ ಹತ್ತಿರವಿರುವ ನೀರಿನ ಸೆಲೆಗಳು ಬತ್ತತೊಡಗಿದಾಗ ಇದರ ಅಪಾಯದ ಬಗ್ಗೆ ಜನರಿಗೆ ಅರಿವಾಗತೊಡಗಿತು. ಇದಲ್ಲದೆ, ಈ ಗಿಡಗಳ ಎಲೆಗಳು ಬೇಗನೆ ಮಣ್ಣಿನ ಜೊತೆ ವಿಲೀನವಾಗದೆ ಇರುವುದರಿಂದ ಬಿದ್ದ ಮಳೆಯ ನೀರನ್ನು ಇಂಗಿಸುವ ಕೆಲಸದಲ್ಲಿ ತಡೆಯನ್ನುಂಟುಮಾಡಿದೆ. ಇದರಿಂದಾಗಿ ನೀರಿನ ಸೆಲೆಗಳ ಪುನರ್ನವೀಕರಣಕ್ಕೆ ಪೆಟ್ಟು ಬಿದ್ದಿದೆ."[೧೯] ಹೀಗೆ ಅರಣ್ಯ ಮತ್ತು ಪರಿಸರ ಸಚಿವಾಲಯ ತೆಗೆದು ಕೊಂಡಿರುವು ನಿರ್ಧಾರಗಳೆಲ್ಲವೂ ಪರಿಸರ ವಿರೋಧಿಯಾದುದು.

ಆದಿವಾಸಿಗಳ ಆಲೋಚನಾ ಕ್ರಮ ವಿಭಿನ್ನ. ಕಾಡು ವೈವಿಧ್ಯ ಜೀವನದ ಸಂಕೇತ, ನೆಡುತೋಪು ಮಾನವ ನಿರ್ಮಿತ ತೋಟ. ಕಾಡು ನಮ್ಮ ನೀರಿನ ಸುರಕ್ಷತೆಯ, ವಾತಾವರಣದ ಸಮತೋಲನವನ್ನು ಕಾಪಾಡಲು ನಿಸರ್ಗ ನೀಡಿದ ಕೊಡುಗೆ. ನೆಡುತೋಪುಗಳು ಹಣಗಳಿಕೆಯ ಸಾಧನ ಅಷ್ಟೆ. ಅದು ಕಾಡಿನ ಪುನರ್ ಸೃಷ್ಟಿಸುವ ಕ್ರಿಯೆಯನ್ನು ಮಾಡದ ಹಸಿರು ಮರುಭೂಮಿ. ಹಸಿರು ಮರುಭೂಮಿಯಿಂದಾಗಿ ಜನರು ತಮ್ಮ ನೈಸರ್ಗಿಕ ಕಾಡು, ಗಿಡಮೂಲಿಕೆಗಳು ಹಾಗೂ ಸಾಂಸ್ಕೃತಿಕ ನೆಲೆಗಳನ್ನೆ ಕಳೆದುಕೊಳ್ಳುತ್ತಾರೆ ಎಂಬ ವಾದ ಮಂಡಿಸುತ್ತಾರೆ. ಇಂತಹ ವಾದ ಸರಣಿಗಳ ಜೊತೆಗೆ "ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ ಮಾಡುವಲ್ಲಿ ಸಾರ್ವಜನಿಕರ ಸಹಕಾರ ಕೂಡ ಅಗತ್ಯ"[೨೦] ಹಾಗೆಯೇ "ಅರಣ್ಯ ಸಂರಕ್ಷಣಾ ವಿಭಾಗ ಮತ್ತು ವನ್ಯಜೀವಿ ಸಂರಕ್ಷಣಾ ವಿಭಾಗದ ಮಧ್ಯೆ ಏಕಾಭಿಪ್ರಾಯವಿಲ್ಲ. ಅಲ್ಲದೆ ಒಬ್ಬ ಅಧಿಕಾರಿ ಹಾಗೂ ಮತ್ತೊಬ್ಬ ಅಧಿಕಾರಿಯ ಮಧ್ಯೆ ಕೂಡ ಹೊಂದಾಣಿಕೆ ಇಲ್ಲದಿರುವುದು ಈ ಕಾಯಿದೆಯ ಅನುಷ್ಠಾನಕ್ಕೆ ಹಿನ್ನಡೆಯಾಗಿದೆ. ಅರಣ್ಯ ಇಲಾಖೆಯಲ್ಲಿ ಯಾವುದೇ ಗೊಂದಲಗಳಿಲ್ಲ. ನಮ್ಮ ಪಾತ್ರ ಇಲ್ಲಿ ನಗಣ್ಯ. ಗ್ರಾಮಪಂಚಾಯತ್, ತಾಲ್ಲೂಕು ಮಟ್ಟದ ಸಮಿತಿ, ಹಾಗೂ ಜಿಲ್ಲಾಮಟ್ಟದ ಸಮಿತಿಯಲ್ಲಿ ಎಲ್ಲಾ ಒಪ್ಪಿಗೆಯಾದರೆ ನಮಗೆ ಯಾವುದೇ ಅಭ್ಯಂತರವಿಲ್ಲ. ಅರಣ್ಯ ಇಲಾಖೆಯವರು ಕೇವಲ ಸದಸ್ಯರು ಮಾತ್ರ "[೨೧] ಎಂದು ಹೇಳುವ ಇವರು "ಅರಣ್ಯ ಇಲಾಖೆಯ ಕೆಲ ಸಿಬ್ಬಂಧಿಗಳು ಅರಣ್ಯ ತಮ್ಮ ಸ್ವಂತ ಆಸ್ತಿಯಂತೆ ವರ್ತಿಸುತ್ತಾರೆ, ಇಂತಹವರು ಅರಣ್ಯ ಭೂಮಿಯನ್ನು ಬಿಟ್ಟುಕೊಡಲು ಒಪ್ಪಲಾರರು

ಅಂತಹ ಕಡೆ ಅಧಿಕಾರಿಗಳಿಗೆ ಕಾಯಿದೆಯ ಮಹತ್ವವನ್ನು ಮನವರಿಕೆ ಮಾಡಬೇಕಾದ ಅಗತ್ಯ ಇದೆ"[೨] ಎಂಬ ವಾದ ಮಂಡಿಸುತ್ತಾರೆ.

ಎಂ.ಎಸ್.ಚೆಣ್ಣಪ್ಪ, ವಲಯ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ ಪಿರಿಯಾಪಟ್ಟಣ, ಮೈಸೂರು. ಇವರು ಹೇಳುವ ಪ್ರಕಾರ ಅರಣ್ಯ ಹಕ್ಕುಗಳ ಕಾಯಿದೆಯಿಂದ ಅರಣ್ಯ ಮತ್ತು ಆದಿವಾಸಿ ಇಬ್ಬರಿಗೂ ಲಾಭವಿಲ್ಲ. ಆದಿವಾಸಿಗಳಿಗೆ ಪ್ರಾಣಿ, ಪಕ್ಷಿ, ಔಷಧಿ ಸಸ್ಯಗಳ ಬಗ್ಗೆ ಮಾಹಿತಿ ಇದೆ. ಜೊತೆಗೆ ಕೆಲವು ವಿಶೇಷ ವಸ್ತುಗಳು ದೊರೆಯುವ ಸ್ಥಳಗಳ ಬಗ್ಗೆ ಜ್ಞಾನ ಇದೆ. ಒಂದು ವೇಳೆ ನಾವು ಅರಣ್ಯ ಹಕ್ಕುಗಳ ಕಾಯಿದೆಯನ್ನು ಯಥಾವತ್ತಾಗಿ ಅನುಷ್ಠಾನಗೊಳಿಸಿದರೆ ನಾಗರೀಕ ಜಗತ್ತಿನ ಜನರು, ವ್ಯಾಪಾರಸ್ಥರು ಆದಿವಾಸಿಗಳ ಮುಖಾಂತರ ಅರಣ್ಯ ಮತ್ತು ಅರಣ್ಯ ಉತ್ಪನ್ನಗಳನ್ನು ದುರುಪಯೋಗಪಡಿಸಿಕೊಳ್ಳುತ್ತಾರೆ. ಯುವ ಆದಿವಾಸಿ ಜನತೆ ಅರಣ್ಯದ ಬಗ್ಗೆ ಹೆಚ್ಚಿನ ಜ್ಞಾನ ಹೊಂದಿಲ್ಲ ಹಾಗಾಗಿ ಅವರು ಕಾಡಿಗೆ ಹೊಂದಿಕೊಳ್ಳದೇ ಇರಬಹುದು. ಅಲ್ಲದೆ ಸಮಾಜ ಕಲ್ಯಾಣ ಇಲಾಖೆ ಒಂದೆಡೆ ಕೆಲಸ ಮಾಡುತ್ತಿದೆ. ಅವರು ಅರಣ್ಯ ಇಲಾಖೆಯವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವುದಿಲ್ಲ ಎಂದು ಆರೋಪಿಸುತ್ತಾರೆ.

ಸಮುದಾಯ ಹಕ್ಕುಗಳನ್ನು ನೀಡಿದರೆ ಇಡೀ ಅರಣ್ಯ ನಾಶವಾಗುತ್ತದೆ. ಆದಿವಾಸಿಗಳು ಅರಣ್ಯ ಸಿಬ್ಬಂದಿ ಮೇಲೆ ಜಾತಿ ನಿಂದನೆ ಮೊಕದ್ದಮೆ ದಾಖಲಿಸುತ್ತಾರೆ. ಆದಿವಾಸಿಗಳಿಗೆ ಸರ್ಕಾರೇತರ ಸಂಘ ಸಂಸ್ಥೆಗಳು ಸುಮಾರು ೧೦ ಎಕರೆವರೆಗೂ ವೈಯಕ್ತಿಕ ಭೂಮಿ ಹೊಂದಬಹುದು ಎಂದು ಹೇಳಿ ಆದಿವಾಸಿಗಳನ್ನು ಅರಣ್ಯ ಇಲಾಖೆ ವಿರುದ್ಧ ಎತ್ತಿಕಟ್ಟುತ್ತಾರೆ. ಹೀಗೆ ಪ್ರತೀ ಕುಟುಂಬಕ್ಕೆ ೧೦ ಎಕರೆ ಜಮೀನು ನೀಡಿದರೆ ಪ್ರಾಣಿಗಳಿಗೆ ಅರಣ್ಯ ಇಲ್ಲದಂತಾಗುತ್ತದೆ ಎಂಬ ಅಭಿಪ್ರಾಯ ಅರಣ್ಯ ಸಿಬ್ಬಂಧಿಗಳಲ್ಲಿದೆ. ಜಮೀನನ್ನು ಅರಣ್ಯದಲ್ಲಿ ಕೊಡುವುದಕ್ಕಿಂತ ಅರಣ್ಯದಂಚಿನಲ್ಲಿ ನೀಡಿದರೆ ಒಳ್ಳೆಯದು. ಆದಿವಾಸಿಗಳಿಗೆ ಅರಣ್ಯದಲ್ಲಿ ಹೆಚ್ಚಿನ ಭೂಮಿ ನೀಡಿದರೆ ನಾಗರೀಕ ಸಂಪರ್ಕಕ್ಕೆ ಬಂದಿರುವ ಅವರು ಆಧುನಿಕ ಯಂತ್ರಗಳಾದ ಟ್ರ್ಯಾಕ್ಟರ್ ನಂತಹ ಯಂತ್ರಗಳಿಗೆ ಬೇಡಿಕೆ ಇಡುತ್ತಾರೆ. ಮತ್ತು ತಾವೇ ಬಳಸಲು ಶುರುಮಾಡಬಹುದು. ಇದರಿಂದಾಗಿ ಅರಣ್ಯದ ಮೇಲೆ ವ್ಯತಿರಿಕ್ತ ಪರಿಣಾಮ ಬೀರುವುದು. ಇವರಿಗೆ ಅರಣ್ಯದ ಕಿರು ಉತ್ಪನ್ನದ ಅವಶ್ಯಕತೆ ಇಲ್ಲ ಏಕೆಂದರೆ ಸರ್ಕಾರ ಇವರಿಗೆ ತಿಂಗಳಿಗೆ ಬೇಕಾಗುವಷ್ಟು ರೇಷನ್ ನೀಡುತ್ತದೆ. ಒಂದುವೇಳೆ ಇವರಿಗೆ ಅರಣ್ಯದಲ್ಲಿಯೇ ಮನೆ ಜಮೀನು ನೀಡಿದರೆ ಅವರಿಗೆ ವಿದ್ಯುತ್ ಮತ್ತು ನೀರು ಚರಂಡಿ ವ್ಯವಸ್ಥೆ ಎಲ್ಲಾ ಮಾಡಬೇಕು, ಒಂದು ಸಾರಿ ವಿದ್ಯುತ್ ನೀಡಿದರೆ ವಿದ್ಯುತ್ ಇಲಾಖೆಯವರು ಯಾರ ಅನುಮತಿ ಇಲ್ಲದೆ ಮರಗಳನ್ನು, ಮರದ ರೆಂಬೆಗಳನ್ನು ಕತ್ತರಿಸುತ್ತಾರೆ. ನೀರಿಗಾಗಿ ಪೈಫ್ ಲೈನ್ ಮತ್ತು ಕಾಂಕ್ರೀಟ್ ಕೆಲಸ ಪ್ರಾರಂಭವಾಗುತ್ತದೆ. ಇದೆಲ್ಲವೂ ಅರಣ್ಯ ಮತ್ತು ಪ್ರಾಣಿ ಸಂಕುಲಕ್ಕೆ ಅಪಾಯಕಾರಿ. ನಿಜವಾದ ಅರಣ್ಯ ಅವಲಂಬಿತ ಆದಿವಾಸಿಗಳು ಕೇವಲ ೧೦ ರಿಂದ ೧೫ ಪ್ರತಿಶತ

ಇದ್ದಾರೆ ಆದರೆ ಟೀ ಪ್ಲಾಂಟೇಶನ್ ಕೆಲಸಗಾರರು ಅರಣ್ಯದಲ್ಲೇ ವಾಸಿಸುತ್ತಿದ್ದಾರೆ. ಇವರು ನಿಜವಾದ ಅರಣ್ಯವಾಸಿಗಳಲ್ಲ. ಅರಣ್ಯ ಹಕ್ಕುಗಳ ಕಾಯಿದೆ ಯಥಾವತ್ತಾಗಿ ಜಾರಿಗೆ ಬಂದರೆ ಇವರೆಲ್ಲರಿಗೂ ಭೂಮಿ ನೀಡಬೇಕಾಗುತ್ತದೆ. ಆದಿವಾಸಿಗಳು ಇದ್ದಕಡೆ ಮಾತ್ರ ಅರಣ್ಯ ಇದೆ ಎಂಬುದನ್ನ ಇವರು ಒಪ್ಪುವುದಿಲ್ಲ ಬದಲಾಗಿ ಇವರ ವಾದವೇ ಬೇರೆ ಉತ್ತರ ಭಾರತ ಮತ್ತು ದಕ್ಷಿಣ ಭಾರತದ ಮದ್ಯೆ ಸಾಕಷ್ಟು ವ್ಯತ್ಯಾಸ ಇದ್ದು ಕಾಯಿಧೆ ರೂಪಿಸುವಾಗ ದಕ್ಷಿಣ ಭಾರತದ ಅರಣ್ಯ ಸಿಬ್ಬಂದಿಯನ್ನು ನಿರ್ಲಕ್ಷಿಸಲಾಯಿತು. ಆದಿವಾಸಿಗಳು ಬೇಸಿಗೆಯಲ್ಲಿ ಬಿದಿರು ಮೆಳೆಗಳಿಗೆ ಬೆಂಕಿ ಹಾಕುತ್ತಾರೆ ಇದರಿಂದ ಹೊಸ ಬಿದಿರು ಬರುವುದಕ್ಕೆ ಅಡ್ಡಿಯಾಗುತ್ತದೆ. ಕಾಡಿನಲ್ಲಿ ಮನೆ ಮಾಡಿದರೆ ಟಿ.ವಿ ಮತ್ತು ಮೊಬೈಲ್ ಬಳಕೆ ಮಾಡುತ್ತಾರೆ. ಇದರ ತರಂಗಗಳಿಂದ ಪ್ರಾಣಿ ಮತ್ತು ಪಕ್ಷಿಗಳಿಗೆ ಮಾರಣಾಂತಿಕ. ಅರಣ್ಯ ಸಂರಕ್ಷಣೆ ಕಾಯಿದೆ ಮತ್ತು ಅರಣ್ಯ ಹಕ್ಕುಗಳ ಕಾಯಿದೆ ಸಂಪೂರ್ಣ ಭಿನ್ನ ನಾವು ಅರಣ್ಯ ಸಂರಕ್ಷಣೆ ಕಾಯಿದೆ ಪ್ರಕಾರ ಕೆಲಸ ಮಾಡುತ್ತೇವೆ. ಒಟ್ಟಾರೆ ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ ಕಷ್ಟ ಎಂಬುದು ಅರಣ್ಯ ಇಲಾಖೆಯ ಕೆಳಹಂತದ ಸಿಬ್ಬಂಧಿಗಳ ವಾದ ಸರಣಿ. ಇದು ಒಂದು ಮಗ್ಗಲು, ಮತ್ತೊಂದು ಮಗ್ಗಲಿನಿಂದ ನೋಡುವುದಾದರೆ. "ಧನಿಕ ವರ್ಗದವರಿಗೆ ಬಂದೂಕುಗಳ ಲೈಸೆನ್ಸ್ ಇರುತ್ತದೆ. ಯಾವ ಇಲಾಖೆಯನ್ನೂ ಲೆಕ್ಕಿಸದೆ ಅವರು ಇಂದಿಗೂ ಹಂದಿ, ಮೊಲ, ಬರ್ಕ ಮುಂತಾಗಿ ಬೇಟೆ ಮಾಡೇ ತೀರುತ್ತಾರೆ. ಆದರೆ ಒಬ್ಬ ಗಿರಿಜನ ಮೊಲ ಹೊಡೆದರೂ ಇವನ ಮೇಲೆ ಕೇಸು ಬೀಳುತ್ತದೆ. ಹೀಗಾಗಿ ಅವನ ಪ್ರಿಯ ಆಹಾರವನ್ನೇ ನಮ್ಮ ವ್ಯವಸ್ಥೆ ಕಿತ್ತುಕೊಂಡಿದೆ. ಗಂಜಿಯ ಜೊತೆಗಿನ ಒಣ ಮೀನು ಅವನ ಸರ್ವಸ್ವವಾಗುತ್ತದೆ."[೨೩] ಆದಾಗ್ಯೂ "ಇಂದಿಗೂ ಅನೇಕ ಬುಡಕಟ್ಟುಗಳು ಒಂದು ಮರವನ್ನು ಕಡಿದರೆ, ತಮ್ಮಲ್ಲಿಯ ಒಂದು ವ್ಯಕ್ತಿಯನ್ನೇ ಕಳೆದುಕೊಂಡಂತೆ ಭಾವಿಸಿ ದುಃಖಿಸುತ್ತಾರೆ. ಸೋಲಿಗರಂತೂ ಮರಕಡಿಯುವುದನ್ನು ಕೊಲೆ ಮಾಡಿದ ಅಪರಾಧಕ್ಕೆ ಸಮಾನ ಎಂದು ಭಾವಿಸುತ್ತಾರೆ. ಇದೇ ಕಾರಣಗಳಿಗಾಗಿ ಆದಿವಾಸಿಗಳ ಭೂ ಒಡೆತನವೆನ್ನುವುದು, ಹೊರಜಗತ್ತಿನ ಭೂ ಒಡೆತನದಂತೆ ಕಾನೂನು ಬದ್ಧವಲ್ಲ."[೨೪] ಹಾಗಾಗಿ "ಅವಸಾನಗೊಳ್ಳುತ್ತಿರುವ ಅವರ ಕಲೆಗಳ ಪುನರುಜ್ಜೀವನ ಆಗಬೇಕು. ಕಲೆ ಉಳಿಯಬೇಕಾದರೆ ಮೊದಲು ಅವರ ಅನ್ನದ ಪ್ರಶ್ನೆ ನೀಗಬೇಕು. ನಾಡಿನ ಜನಕ್ಕೆ ಕಾಡಿನ ಶಕ್ತಿಯನ್ನು ತೋರಿಸುವ ಹಂಬಲ, ಆಶಯ ಅವರಲ್ಲಿ ಮತ್ತೆ ಹುಟ್ಟಿಸಿಕೊಳ್ಳುವಂತೆ ಆತ್ಮವಿಶ್ವಾಸ ತುಂಬುವ ಕೆಲಸವಾಗಬೇಕು"[೨೫] ಇದಕ್ಕೆ ಅರಣ್ಯ ಹಕ್ಕುಗಳ ಕಾಯಿದೆ ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳುವ ಕಾರ್ಯವಾಗಬೇಕಾಗಿದೆ. ಆದರೆ ಅರಣ್ಯ ಮತ್ತು ಪರಿಸರ ಸಚಿವಾಲಯದ ಅಧಿಕಾರಿವರ್ಗ ಮತ್ತು ಅರಣ್ಯ ಹಕ್ಕುಗಳ ನಿಜವಾದ ವಾರಸುದಾರರಲ್ಲಿ ಪರಸ್ಪರ ತಾತ್ವಿಕ ವೈರುಧ್ಯಗಳು ಕಾಯಿದೆಯ ಅನುಷ್ಠಾನಕ್ಕೆ ವಿಳಂಭವಾಗುತ್ತಿವೆ.

### ೪.೩.೨. ಲೋಕೋಪಯೋಗಿ ಇಲಾಖೆ

ಆದಿವಾಸಿಗಳು ವಾಸ ಮಾಡುತ್ತಿರುವ ಹಾಡಿ/ಪೋಡುಗಳಿಗೆ ರಸ್ತೆ ಸಂಪರ್ಕ ಮತ್ತು ಮೂಲಭೂತ ಸೌಲಭ್ಯ ಕಲ್ಪಿಸುವುದು ಲೋಕೋಪಯೋಗಿ ಇಲಾಖೆ ಕಾರ್ಯವಾಗಿದೆ. ರಸ್ತೆ ನಿರ್ಮಿಸಲು ಭೂಮಿ ಬೇಕು ಅದರೆ ಅರಣ್ಯ ಇಲಾಖೆ ಲೋಕೋಪಯೋಗಿ ಇಲಾಖೆಗೆ ಹಸ್ತಾಂತರಿಸಲು ಒಪ್ಪುತ್ತಿಲ್ಲ.

ಅರಣ್ಯ ಇಲಾಖೆಯವರ ವಾದವೆಂದರೆ ರಸ್ತೆ ನಿರ್ಮಿಸಲು ಅಗತ್ಯ ಭೂಮಿಯನ್ನು ಹಸ್ತಾಂತರಿಸಿದರೆ ರಸ್ತೆ ಜೊತೆಗೆ ಚರಂಡಿ ನಿರ್ಮಿಸಲು ಸಾಕಷ್ಟು ಭೂಮಿ ಬೇಕಾಗುತ್ತದೆ ಮತ್ತು ಈ ಭೂ ಪ್ರದೇಶದಲ್ಲಿನ ಮರಗಳ ಮಾರಣ ಹೋಮ ನಡೆಯುತ್ತದೆ. ರಸ್ತೆ ನಿರ್ಮಾಣದ ನಂತರ ವಾಹನಗಳ ಓಡಾಟ ಹೆಚ್ಚಾಗುವುದರಿಂದ ಪ್ರಾಣಿಗಳ ಮುಕ್ತ ಸಾಗಾಟಕ್ಕೆ ಅಡಚಣೆ ಉಂಟಾಗುವುದರ ಜೊತೆಗೆ ಅಪಘಾತಗಳಿಂದ ಪ್ರಾಣಿಗಳ ಪ್ರಾಣಕ್ಕೆ ಕುತ್ತು ಬರುತ್ತದೆ. ಜೊತೆಗೆ ರಸ್ತೆ ಪಕ್ಕದಲ್ಲಿ ನಿಂತು ಧೂಮಪಾನ ಮಾಡುವುದರಿಂದ ಕಾಡಿಗೆ ಬೆಂಕಿ ಬೀಳುವ ಸಂಭವ ಹೆಚ್ಚಿರುತ್ತದೆ ಎಂಬ ವಾದ ಮಂಡಿಸುತ್ತಾರೆ. ರಸ್ತೆ ಸಂಪರ್ಕವಿಲ್ಲದೆ ಹಾಡಿ/ಪೋಡಿಗಳಲ್ಲಿ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಸಾಧ್ಯವಾಗದು ಕಾರಣ ಅಗತ್ಯ ವಸ್ತುಗಳನ್ನು ಸಾಗಿಸಲು ಕಷ್ಟವಾಗುತ್ತದೆ.

ಹೀಗೆ ಕನಿಷ್ಟ ನಾಗರೀಕ ಸೌಲಭ್ಯಗಳನ್ನು ಕಲ್ಪಿಸಲೇ ಬೇಕು ಎಂಬ ಅರಣ್ಯ ಹಕ್ಕುಗಳ ಕಾಯಿದೆಯ ಆಶಯ ಸಂಪೂರ್ಣ ಸಫಲವಾಗದೇ ಇರಲು ಇದೂ ಕೂಡ ಕಾರಣವಾಗಿದೆ.

### ೪.೩.೩. ಕಂದಾಯ ಇಲಾಖೆ

ಕಾಯಿದೆಯಲ್ಲಿ ಹೇಳಿರುವಂತೆ ಮೂರು ತಲೆಮಾರು ವಾಸಿಸಿರುವ ಬಗ್ಗೆ ಮೌಖಿಕ ಹೇಳಿಕೆ ಮತ್ತು ಕನಿಷ್ಟ ಪುರಾವೆಗಳ ಆಧಾರದ ಮೇಲೆ ಆದಿವಾಸಿಗಳಿಗೆ ಭೂಮಿ ಹಕ್ಕು ಪತ್ರ ವಿತರಿಸಬೇಕು. ಈ ಹಿನ್ನೆಲೆಯಲ್ಲಿ ‘ಹಕ್ಕುಪತ್ರವನ್ನು ನೀಡುವ ಕಾರ್ಯವನ್ನು ಕಂದಾಯ ಇಲಾಖೆ ಈಗಾಗಲೇ ಆರಂಭಿಸಿದೆ. ದಸರಾ ಗಜ ಪಯಣದ ವೇಳೆಯಲ್ಲಿ ಸಾಂಕೇತಿಕವಾಗಿ ಐವರಿಗೆ ಹಕ್ಕು ಪತ್ರ ನೀಡಲಾಯಿತು. ಈ ಕೆಲಸವನ್ನು ಕಂದಾಯ ಇಲಾಖೆ ಮುಂದುವರಿಸಬೇಕಾದರೆ “ಅರಣ್ಯ ಪ್ರದೇಶವೆಂದು ಘೋಷಿತವಾಗಿದ್ದ ಭೂಮಿಯನ್ನು ಕಂದಾಯ ಭೂಮಿಯಾಗಿ ಪರಿವರ್ತಿಸಲು ಕಾನೂನಾತ್ಮಕ ಕ್ರಮ ಜರುಗಬೇಕಾಗಿದೆ.”[೨೬] ಇದು ಸಾಧ್ಯವಾಗುತ್ತಿಲ್ಲ. ಅಲ್ಲದೆ ‘ಆದಿವಾಸಿಗಳು ತಾವು ಉಳುಮೆ ಮಾಡುತ್ತಿರುವ ಜಮೀನಿಗೆ ಯಾವುದೇ ರೀತಿಯ ದಾಖಲೆ ಹೊಂದಿಲ್ಲ. ಕೆಲವರು ಅರಣ್ಯ ಇಲಾಖೆಯವರು ನೀಡಿರುವ ಹಕ್ಕುಪತ್ರ ಹೊಂದಿದ್ದಾರೆ. ಇದು ಅರಣ್ಯ ಇಲಾಖೆಗೆ ಸಂಬಂಧಿಸಿದೆ. ಆದರೆ ಸರ್ಕಾರದ ಸಾಲ ಸೌಲಭ್ಯ, ಸಬ್ಸಿಡಿ, ಗಂಗಾ ಕಲ್ಯಾಣ ನೀರಾವರಿ

ಯೋಜನೆ, ಸುವರ್ಣ ಭೂಮಿ ಯೋಜನೆಗಳನ್ನು ಪಡೆಯಲು ಕಂದಾಯ ಇಲಾಖೆಯವರು ನೀಡುವ ಪಹಣಿ ಪಟ್ಟ ಹೊಂದಿರಬೇಕಾಗುತ್ತದೆ. ಪಹಣಿ/ಪಟ್ಟ ವಿತರಿಸಬೇಕಾದರೆ ಭೂಮಿ ಕಂದಾಯ ಇಲಾಖೆಗೆ ಹಸ್ತಾಂತರಿಸಬೇಕಾಗುತ್ತದೆ. ಆದರೆ ಅರಣ್ಯ ಇಲಾಖೆ ಇದಕ್ಕೆ ತಯಾರಿಲ್ಲ. ಹೀಗಾಗಿ 'ಮರ ಕಾಯುವವ ಮತ್ತು ಭೂಮಿ ಕಾಯುವವನ ಮಧ್ಯದ ಜಗಳದಲ್ಲಿ ಜನ ಕಾಯುವ ಇಲಾಖೆಯನ್ನು ಕೇಳುವವರಿಲ್ಲ'[೨೭] ಇದು ಕಾಯಿದೆ ಅನುಷ್ಠಾನಕ್ಕಿರುವ ದೊಡ್ಡ ಸವಾಲಾಗಿದೆ.

**೪.೩.೪. ಸಮಾಜ ಕಲ್ಯಾಣ ಇಲಾಖೆ**

ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದಲ್ಲಿ ಸಮಾಜ ಕಲ್ಯಾಣ ಇಲಾಖೆಯ ಪಾತ್ರ ಗಣನೀಯ. ಈ ಇಲಾಖೆಯ ಅಧಿಕಾರಿ ವರ್ಗ ಅರಣ್ಯ ಹಕ್ಕುಗಳ ಕಾಯಿದೆ ಮತ್ತು ಇತರೆ ಅರಣ್ಯ ಸಂಬಂಧೀ ಕಾಯಿದೆಗಳಲ್ಲಿ ಗೊಂದಲವಿದೆ ಎಂದು ಹೇಳಿ ತಮ್ಮ ಜವಾಬ್ದಾರಿ ಕಳೆದುಕೊಳ್ಳುತ್ತಿದ್ದಾರೆ. ಆದರೆ 'ಯಾವುದೇ ಕಾಯಿದೆಗಳಲ್ಲಿ ಗೊಂದಲಗಳಿಲ್ಲ. ಅದು ಅರಣ್ಯ ಸಂರಕ್ಷಣೆ ಕಾಯಿದೆ ಇರಬಹುದು, ವನ್ಯ ಜೀವಿ ಸಂರಕ್ಷಣಾ ಅಧಿನಿಯಮವಿರಬಹುದು, ಅಥವಾ ಅರಣ್ಯ ಹಕ್ಕುಗಳ ಕಾಯಿದೆ ಇರಬಹುದು. ಇವುಗಳಲ್ಲಿ ಸ್ಪಷ್ಟವಾಗಿ ನಿಯಮಗಳನ್ನು ರೂಪಿಸಲಾಗಿದೆ. ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದಲ್ಲಿ ಸಮಾಜ ಕಲ್ಯಾಣ ಇಲಾಖೆಯವರ ಪಾತ್ರ ಅತೀ ಮುಖ್ಯವಾಗಿದ್ದು ಅವರು ಮುಂದಾಳತ್ವ ವಹಿಸಿಕೊಳ್ಳಬೇಕು. ಆದಿವಾಸಿ ಸಮುದಾಯದವರಿಗೆ ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳಿಗೆ ಈ ಕಾಯಿದೆಯ ಸೌಲಭ್ಯಗಳನ್ನು ದೊರಕಿಸಿಕೊಡಬೇಕಾದಲ್ಲಿ ಈ ಇಲಾಖೆ ಎಡವಿದೆ ಅಥವಾ ಹಿಂದೆ ಬಿದ್ದಿದೆ ಅಥವಾ ನಿಷ್ಕ್ರೀಯವಾಗಿದೆ"[೨೮] ಎಂಬ ಆರೋಪ ಮಾಡಲಾಗಿದೆ. ಆದರೆ ಕಾಯಿದೆ ಅನುಷ್ಠಾನದ ವಿಳಂಭಕ್ಕೆ ಸಮಾಜ ಕಲ್ಯಾಣ ಇಲಾಖೆ ಕೊಡುವ ಕಾರಣಗಳೇ ಬೇರೆ.

ಅ. ಗ್ರಾಮಪಂಚಾಯತ್ ಸಕ್ರೀಯ ಪಾಲ್ಗೊಳ್ಳುವುಕೆ ಇಲ್ಲದಿರುವುದು.

ಆ. ಕಂದಾಯ ಇಲಾಖೆ ಸರ್ವೆ ಮಾಡಬೇಕು ಮತ್ತು ಅದನ್ನು ಅರಣ್ಯ ಇಲಾಖೆ ದೃಡೀಕರಿಸಬೇಕು. ಆದರೆ ಇದು ಇಲಾಖೆಗಳ ಪ್ರತೀಷ್ಠೆಯಲ್ಲಿ ಸಾಧ್ಯವಾಗುತ್ತಿಲ್ಲ.

ಇ. ಆದಿವಾಸಿಗಳು ಕಾಡಿನಲ್ಲಿ ಬೆಂಕಿ ಹಾಕುತ್ತಾರೆ ಮತ್ತು ಪ್ರಾಣಿ ಕೊಲ್ಲುತ್ತಾರೆ ಎಂಬ ಅರಣ್ಯ ಇಲಾಖೆಯವರ ವಾದ.

ಈ. ಗಿರಿಜನರಿಗೆ ಅರಣ್ಯ ಮತ್ತು ವನ್ಯಪ್ರಾಣಿಗಳ ಬಗ್ಗೆ ಅರಿವು ಮೂಡಿಸದೇ ಇರುವುದು.

ಉ. ಅರಣ್ಯ ಹಕ್ಕುಗಳ ಕಾಯಿದೆ ಕುರಿತು ಗ್ರಾಮ ಪಂಚಾಯತಿ ಕಾರ್ಯದರ್ಶಿಗಳು, ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು (ಪಿ.ಡಿ.ಓ) ಮತ್ತು ಅರಣ್ಯ ಹಕ್ಕು ಸಮಿತಿಗೆ ತರಬೇತಿ ಇಲ್ಲದಿರುವುದು.

ಋ.ಉಪವಿಭಾಗ ಸಮಿತಿ ಸಭೆಯಲ್ಲಿ ಅರಣ್ಯ ಇಲಾಖೆ ಸಿಬ್ಬಂದಿಗೆ ಮಾಹಿತಿ ನೀಡಲಾಗುತ್ತಿದೆ. ಕೆಳಗಿನ ಹಂತದ ಸಿಬ್ಬಂದಿ ವರ್ಗಕ್ಕೆ ಮಾಹಿತಿ ನೀಡುವ ಅವಶ್ಯಕತೆ ಇದೆ.

ಎ. ಉಪ ವಿಭಾಗ ಮಟ್ಟದಲ್ಲಿ ಅರಣ್ಯ ಹಕ್ಕು ಸಮಿತಿಗೆ ತಾಲ್ಲೂಕು ಪಂಚಾಯತ್ ಮುಖ್ಯ ಕಾರ್ಯನಿರ್ವಾಹಣ ಅಧಿಕಾರಿಗಳನ್ನು ಸದಸ್ಯರನ್ನಾಗಿಸಬೇಕು. ಏಕೆಂದರೆ ಗ್ರಾಮಪಂಚಾಯತ್ ಕಾರ್ಯದರ್ಶಿಗಳು ಮತ್ತು ಪಿ.ಡಿ.ಓ ಗಳು ಇವರ ಅಧೀನದಲ್ಲಿ ಬರುವ ಅಧಿಕಾರಗಳಾಗಿರುವುದರಿಂದ ಪ್ರತೀ ಮಾಸಿಕ ಸಭೆಯಲ್ಲಿ ಕಾಯಿದೆ ಅನುಷ್ಠಾನದ ಪ್ರಗತಿ ಪರಿಶೀಲನೆ ಮಾಡಬಹುದಾಗಿದೆ. ಇದರಿಂದ ಒಬ್ಬ ಉನ್ನತ ಅಧಿಕಾರಿಯ ನೇರ ಮೇಲ್ವಿಚಾರಣೆ ಸಾಧ್ಯ

ಇಂತಹ ವಾದ ಪ್ರತಿವಾದಗಳು ಇದ್ದರೂ ಜನರ ಪರವಾಗಿ ಕಾರ್ಯನಿರ್ವಹಿಸಬೇಕಾದ ಇಲಾಖೆಯು ಮುಂದಾಳತ್ವ ವಹಿಸಲು ಹಿಂದೇಟು ಹಾಕುತ್ತಿರುವುದು ಕಾಯಿದೆ ಅನುಷ್ಠಾನಕ್ಕೆ ಸವಾಲಾಗಿದೆ.

**೪.೩.೫. ವಿದ್ಯುತ್ ಮಂಡಳಿ ನೀತಿ ನಿಯಮಗಳು**

ವಿದ್ಯುತ್ ಸಂಪರ್ಕ ಕಲ್ಪಿಸುವುದು ಮತ್ತು ಪೂರೈಸುವುದು ವಿದ್ಯುತ್ ನಿಗಮದ ಕೆಲಸವಾಗಿದೆ. ಅರಣ್ಯ ನಿವಾಸಿಗಳಿಗೆ ವಿದ್ಯುತ್ ಪೂರೈಸಲು ಅರಣ್ಯ ಇಲಾಖೆ ಅನುಮತಿ ನೀಡುತ್ತಿಲ್ಲ ಎಂಬ ದೂರು ಇದೆ. ಇದಕ್ಕೆ ಅರಣ್ಯ ಇಲಾಖೆ ತಮ್ಮದೇ ಆದ ವಿಭಿನ್ನ ವಾದಗಳನ್ನು ಮಂಡಿಸುತ್ತಾರೆ.

ವಿದ್ಯುತ್ ಸಂಪರ್ಕ ಕಲ್ಪಿಸಲು ಕಂಬಗಳನ್ನು ನೆಟ್ಟು ಲೈನ್‌ಗಳನ್ನು ಹಾಕಬೇಕಾಗುತ್ತದೆ. ಇದಕ್ಕಾಗಿ ಮರಗಳನ್ನು ಕತ್ತರಿಸಬೇಕಾಗುತ್ತದೆ. ಜೊತೆಗೆ ವಿದ್ಯುತ್ ಲೈನ್ ಪಕ್ಕದಲ್ಲಿಯೂ ಮರಗಳನ್ನು ಬೆಳೆಯಲು ವಿದ್ಯುತ್ ನಿಗಮದವರು ಬಿಡುವುದಿಲ್ಲ ಎಂಬುದು ಇವರ ವಾದ.

ಹಾಗೆಯೇ, ವಿದ್ಯುತ್ ತಂತಿ ತುಂಡಾಗಿ ಬೀಳುವುದರಿಂದ ವನ್ಯ ಪ್ರಾಣಿಗಳು ಅಪಾಯಕ್ಕೆ ಸಿಲುಕುತ್ತವೆ. ಮತ್ತು ಇಂತಹ ತುಂಡಾದ ವಿದ್ಯುತ್ ಲೈನ್‌ಗಳನ್ನು ಸರಿಪಡಿಸಲು ವಿದ್ಯುತ್ ನಿಗಮ ಸಿಬ್ಬಂದಿಗಳು ತಮ್ಮ ಲಾರಿಯೊಂದಿಗೆ ತೆರಳುವುದರಿಂದ ಅರಣ್ಯ ಹಾಳಾಗುತ್ತದೆ. ಮಳೆಗಾಲದಲ್ಲಿ ಒಂದು ಕಂಬ ಬಿದ್ದರೆ ಹಲವು ಕಂಬಗಳು

ಬೀಳುತ್ತವೆ. ಆಗ ಹಲವು ಮರಗಳು ನಾಶವಾಗುತ್ತವೆ. ಎಂಬುದು ಮತ್ತೊಂದು ಇವರ ವಾದವಾಗಿದೆ.

ಕೆಲವು ಸಂದರ್ಭದಲ್ಲಿ ವಿದ್ಯುತ್ ತಂತಿ ಹರಿದು ನೀರಿನ ತೊರೆಗಳಿಗೆ ಬಿದ್ದರೆ ಬಹಳಷ್ಟು ವ್ಯಾಪ್ತಿಯಲ್ಲಿ ವಿದ್ಯತ್ ಹರಿದು ಜಲಚರ ಪ್ರಾಣಿಗಳಿಗೆ ತೊಂದರೆಯಾಗುತ್ತದೆ ಎಂಬುದೂ ಇವರ ವಾದವಾಗಿದೆ.

ಬೇಸಿಗೆಯಲ್ಲಿ ವಿದ್ಯುತ್ ತಂತಿಗಳು ಬಿಸಿಲಿಗೆ ಕಾಯ್ದು ಜೋತು ಬೀಳುವುದರಿಂದ ತಂತಿಗಳು ಪರಸ್ಪರ ಘರ್ಷಣೆ ಹೊಂದಿ ಕಿಡಿ ಉಂಟಾಗುತ್ತದೆ. ಆಗ ಬೇಸಿಗೆಯಾದ್ದರಿಂದ ಕಾಡು ಕೂಡ ಸಾಕಷ್ಟು ಒಣಗಿರುತ್ತದೆ ಇದರಿಂದಾಗಿ ಕಾಡಿಗೆ ಬೆಂಕಿ ಬೀಳುತ್ತದೆ ಎಂಬುದು ಇವರ ವಾದ.

ಇಂತಹ ವಾದ ಪ್ರತಿವಾದಗಳ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳಾದರೂ ಆದಿವಾಸಿಗಳು ಕತ್ತಲಿನಲ್ಲಿ ಬಾಳುವಂತಾಗಿದೆ.

**೪.೩.೬. ರಾಷ್ಟ್ರೀಯ ಅರಣ್ಯ ಸಂರಕ್ಷಣಾ ಕಾಯಿದೆ ಮತ್ತು ಮರಗಳ ಸಂರಕ್ಷಣಾ ಕಾಯಿದೆ**

ಅರಣ್ಯ ಇಲಾಖೆಗೆ ಮಾರ್ಗದರ್ಶಿ ಈ 'ರಾಷ್ಟ್ರೀಯ ಅರಣ್ಯ ಸಂರಕ್ಷಣಾ ಕಾಯಿದೆ'. ಅರಣ್ಯ ಇಲಾಖೆ ಮೇಲ್ಮಟ್ಟದ ಅಧಿಕಾರಿಗಳಿಂದ ಹಿಡಿದು ಕೆಳ ಹಂತದ ಸಿಬ್ಬಂದಿ ವರ್ಗಕ್ಕೆ ಇದೇ ನಿರ್ದೇಶಕ. ಪರಿಸ್ಥಿತಿ ಹೀಗಿರುವಾಗ ಅರಣ್ಯ ಹಕ್ಕುಗಳ ಕಾಯಿದೆಯಲ್ಲಿ ಹೇಳಿರುವಂತೆ ಆದಿವಾಸಿಗಳಿಗೆ ತಾವು ವಾಸಿಸುವ ಜಾಗ, ಉಳುಮೆ ಮಾಡುತ್ತಿದ್ದ ಭೂಮಿ ಮತ್ತು ಅರಣ್ಯ ಕಿರು ಉತ್ಪನ್ನಗಳ ಮೇಲಿನ ಅಧಿಕಾರವನ್ನು ಬಿಟ್ಟು ಕೊಡಲು ತಯಾರಿಲ್ಲ. ಹೀಗಾಗಿ ಆದಿವಾಸಿಗಳ ವೈಯಕ್ತಿಕ ಭೂಮಿ ಹಕ್ಕು, ಸಮುದಾಯ ಹಕ್ಕುಗಳು ಕಾಯಿದೆಗೆ ಮಾತ್ರ ಸೀಮಿತವಾಗಿ ಅನುಷ್ಠಾನಕ್ಕೆ ದೊಡ್ಡ ಸವಾಲಾಗಿದೆ.

**೪.೩.೭. ರಾಷ್ಟ್ರೀಯ ಉದ್ಯಾನವನಗಳು ಮತ್ತು ಅಭಯಾರಣ್ಯಗಳು**

ಭಾರತದಲ್ಲಿ ೨೦೦೭ ರಲ್ಲಿ ೧೪ ಜೀವವೈವಿಧ್ಯ ತಾಣಗಳು, ೯೬ ರಾಷ್ಟ್ರೀಯ ಉದ್ಯಾನವನಗಳು, ೫೧೦ ವನ್ಯಜೀವಿ ಅಭಯಾರಣ್ಯಗಳು, ೨೮ ಹುಲಿ ಧಾಮಗಳು, ೨೫ ಆನೆಧಾಮಗಳು ಘೋಷಿಸಲ್ಪಟ್ಟವು. ಇವು ರಕ್ಷಿತಾರಣ್ಯದ ಶೇಕಡಾ ೫ ರಷ್ಟನ್ನು ಆಕ್ರಮಿಸಿದವು. ಮತ್ತು ಈ ಎಲ್ಲಾ ಪ್ರದೇಶಗಳು ನಿಷೇಧ ಹೇರಲ್ಪಟ್ಟವು. ವನ್ಯ ಪ್ರಾಣಿಗಳು ದಿನೇದಿನೆ ನಾಶವಾಗುತ್ತಿರುವುದಕ್ಕೆ ಕಾರಣ ಅವುಗಳ ತವರಾಗಿರುವ ಕಾಡು ಕರಗುತ್ತಿರುವುದು ಸತ್ಯ. ಉಳಿದಿರುವ ವನ್ಯಜೀವಿಗಳನ್ನಾದರೂ ರಕ್ಷಿಸಬೇಕೆಂಬ ಉದ್ಧೇಶದೊಂದಿಗೆ ಸರಕಾರ ಕಾಡನ್ನು ಸಂರಕ್ಷಿಸಿ ಅಲ್ಲಿ ವನ್ಯಜೀವಿಗಳ ವಾಸವನ್ನು ಸುರಕ್ಷಿತ ಗೊಳಿಸಲು ವನ್ಯಧಾಮ, ಅಭಯಾರಣ್ಯ, ಹುಲಿದಾಮಗಳನ್ನು ನಿರ್ಮಾಣ

ಮಾಡುತ್ತಿದೆ. ಇದು ಪ್ರಾಣಿಗಳಿಗೆ ಆಶ್ರಯ ನೀಡುವ ವಿಚಾರ, ಒಳ್ಳೆಯದೇ. ಆದರೆ, ಇದಕ್ಕಾಗಿ ಸ್ಥಳೀಯ ಜನರನ್ನು ಅವರ ಹಳ್ಳಿಗಳಿಂದ ಒಕ್ಕಲೆಬ್ಬಿಸುವುದು ಸರಿಯೇ? ಅವರಲ್ಲಿ ಭಯದ ವಾತಾವರಣವನ್ನು ನಿರ್ಮಾಣ ಮಾಡಿ, ನಿರಂತರವಾಗಿ ಅವರ ಮನಸ್ಸಿನಲ್ಲಿ ಅಸ್ಥಿರತೆಯ ಭಾವನೆಯನ್ನು ನೆಲೆಗೊಳ್ಳುವಂತೆ ಮಾಡುವ ಯೋಜನೆಗಳಿಂದ ವನ್ಯಜೀವಿಗಳ ಉಳಿವು ಸಾಧ್ಯವೇ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಏಕೆಂದರೆ ಇಂತಹ ಕಡೆ ವಾಸ ನೆಡೆಸುತ್ತಾ ಬಂದಿರುವ "ಈ ಬುಡಕಟ್ಟು ಜನಾಂಗದವರು ತಮ್ಮದೇ ಆದ ವಿಶಿಷ್ಟ ಜೀವನ ಶೈಲಿಯನ್ನು ರೂಢಿಸಿಕೊಂಡು ಬಂದಿರುತ್ತಾರೆ. ಪ್ರಾಕೃತಿಕ ಸಂಪತ್ತನ್ನು ಮಿತವಾಗಿ ಬಳಸುತ್ತಾ ಬಂದಿರುವ ಇವರ ಬದುಕನ್ನು ಅಭಯಾರಣ್ಯಕ್ಕಾಗಿ ತ್ಯಾಗ ಮಾಡಬೇಕಾಗಿ ಬಂದಿದೆ. ಶ್ರೀಮಂತರಿಗೆ, ಮಧ್ಯಮ ವರ್ಗದವರಿಗೆ ವನ್ಯಜೀವಿಗಳ ತಾಣಕ್ಕೆ ಭೇಟಿ ಕೊಡುವುದು ಒಂದು ಹವ್ಯಾಸ, ಮನರಂಜನೆ. ಆದರೆ ಅಲ್ಲಿಯೇ ವಾಸಿಸುವ ಬುಡಕಟ್ಟು ಜನರಿಗೆ ಅದೊಂದು ಜೀವನ ಕ್ರಮ. ಪಟ್ಟಣದಲ್ಲಿ ಶ್ರೀಮಂತರ ಬಡಾವಣೆಗಳನ್ನು ಸರಕಾರಕ್ಕೆ ಬಿಟ್ಟುಕೊಡಬೇಕು ಎಂದು ಎಲ್ಲಾದರೂ ಒಕ್ಕಲೆಬ್ಬಿಸಿದ ದಾಖಲೆ ಇದೆಯೇ? ಆದರೆ, ಕಾಡಿನ ಮೂಲ ನಿವಾಸಿಗಳನ್ನು ಕ್ರಮೇಣವಾಗಿ ಒಕ್ಕಲೆಬ್ಬಿಸುವ ಕ್ರಿಯೆ ಅಭಯಾರಣ್ಯದ ಘೋಷಣೆಯೊಂದಿಗೆ ತಳಕು ಹಾಕಿಕೊಂಡಿದೆ."[೨೯] ಇದು ಅರಣ್ಯ ಹಕ್ಕುಗಳ ಕಾಯಿದೆಗೆ ತದ್ವಿರುದ್ಧವಾದುದಾಗಿದೆ. ಅಲ್ಲದೆ ಆದಿವಾಸಿಗಳ ಪ್ರಶ್ನೆಯೆಂದರೆ "ತಲೆತಲಾಂತರದಿಂದ ವಾಸಿಸುತ್ತಿದ್ದ ಕಾಡಿನಿಂದ ಒಕ್ಕಲೆಬ್ಬಿಸುವರೇ? ನಾವು ಎಲ್ಲಿಗೆ ಹೋಗಬೇಕು? ನಮ್ಮ ಕಾಡಿನಲ್ಲಿ ತಿರುಗಾಡುವುದಕ್ಕೂ ಅರಣ್ಯ ಇಲಾಖೆಯ ಅನುಮತಿ ಬೇಕೆ? ಇಂತಹ ಹಲವು ಪ್ರಶ್ನೆಗಳು ಅಭಯಾರಣ್ಯಗಳ ಸುತ್ತ ವಾಸಿಸುವ ಮೂಲನಿವಾಸಿಗಳ ಜೀವನ ವ್ಯಥೆಯನ್ನು ಬಿಂಬಿಸುತ್ತವೆ. ವನ್ಯಜೀವಿಗಳ ಉಳಿವಿಗಾಗಿ ತಮ್ಮ ವಾಸಸ್ಥಳವನ್ನೇ ಬಲಿಕೊಡಬೇಕಾಗಿ ಬಂದಾಗ ಅವರ ಮನಸ್ಸಿನಲ್ಲಿ ಮೂಡುವ ಅಸ್ಥಿರ ಭಾವನೆಗಳನ್ನು ತಿಳಿಯುವುದು ಅಸಾಧ್ಯ."[೩೦] ಇಂತಹ ಮನೋಭಾವ ಅರಣ್ಯ ಅವಲಂಭಿತರಲ್ಲಿ ಇರುವಾಗ "ಅಭಯಾರಣ್ಯದ ಸುತ್ತಮುತ್ತ ವಾಸಿಸುವ ಜನರ ಸಹಕಾರವಿಲ್ಲದೆ ಯಾವ ಯೋಜನೆಯೋ ಸಫಲವಾಗದು. ವನ್ಯಜೀವಿಗಳ ಬಗ್ಗೆ ಅಪಾರವಾದ ಪಾರಂಪರಿಕ ಜ್ಞಾನ ಹೊಂದಿದ ಈ ಮೂಲ ನಿವಾಸಿಗಳನ್ನು ಯೋಜನೆಗಳಲ್ಲಿ ತೊಡಗಿಸಿಕೊಂಡು, ಅವರೂ ವನ್ಯಜೀವಿಗಳ ರಕ್ಷಣೆಯಲ್ಲಿ ಕೈ ಜೋಡಿಸಿದಾಗ ಮಾತ್ರ ಭಯ ನಿವಾರಣೆಯಾಗಿ, ಅಭಯಾರಣ್ಯದ ಪರಿಕಲ್ಪನೆ ಪೂರ್ಣ ಪ್ರಮಾಣದಲ್ಲಿ ಜಾರಿಗೊಳ್ಳಲು ಮತ್ತು ಜನಸ್ನೇಹಿಯಾಗಿ ಉಳಿಯಲು ಸಾಧ್ಯ."[೩೧] ಇಲ್ಲವಾದಲ್ಲಿ ಬಲವಂತವಾಗಿ "ಈ ಹಿಂದೆ ನಾಗರಹೊಳೆಯಿಂದ ಹೊರಹಾಕಲ್ಪಟ್ಟ ೨೦೦ ಮೂಲ ನಿವಾಸಿಗಳ ಕುಟುಂಬ ಇಂದಿಗೂ ತಮಗೆ ನೀಡಿದ ಸ್ಥಳದ ಅಧಿಕೃತ ಪಟ್ಟಾಗಳಿಲ್ಲದೆ ತೊಳಲಾಡುತ್ತಿದ್ದಾರೆ. ಅರಣ್ಯ ಇಲಾಖೆ ಆಶ್ರಯದ ಭರವಸೆ ನೀಡಿ ಅವರನ್ನು ಅಭಯಾರಣ್ಯದಿಂದ ಹೊರ ಹಾಕಿತು. ಆದರೆ, ಕಂದಾಯ ಇಲಾಖೆಯವರು ಅವರಿಗೆ ನೀಡಿದ ಜಮೀನಿಗೆ ಅಧಿಕೃತ ಹಕ್ಕು ಪತ್ರ ನೀಡದ ಕಾರಣ ಅವರ ಬದುಕು

ಅತಂತ್ರವಾಗಿದೆ."[೩೨] ಇಂತಹ ಉದಾಹರಣೆಗಳಿರುವ ಸಂದರ್ಭದಲ್ಲಿ ಆದಿವಾಸಿಗಳಿಗೆ ಅರಣ್ಯದಿಂದ ಹೊರ ಹೋಗಲು ಹೇಳುವುದು ಎಷ್ಟು ಸರಿ. ಒಂದು ವರದಿಯಂತೆ "ಒಮ್ಮೆ ಅಭಯಾರಣ್ಯ, ಹುಲಿ ಯೋಜನೆ ಜಾರಿ ನಂತರ ಕೇಂದ್ರ ಸರಕಾರದಿಂದ ಪ್ರತಿವರ್ಷ ಕೋಟ್ಯಂತರ ರೂಪಾಯಿ ಅನುದಾನ ಹರಿದು ಬರುತ್ತದೆ. ಅದರಲ್ಲಿ ಹೆಚ್ಚಿನ ಪಾಲು ಅರಣ್ಯ ಇಲಾಖೆಯ ಸಿಬ್ಬಂಧಿ ವೇತನಕ್ಕೆ ಖರ್ಚು ಮಾಡಿ, ಉಳಿದ ಹಣದಲ್ಲಿ ಅರಣ್ಯಕ್ಕೆ ಅಪಾಯಕಾರಿಯಾದ ರಸ್ತೆ, ಕಟ್ಟಡಗಳ ನಿರ್ಮಾಣ ಆಗುತ್ತದೆ. ಅಂದರೆ, ಈ ಯೋಜನೆಗಳಿಂದ ಇಲಾಖೆಗೆ ಅನುಕೂಲವೆ ಹೊರತು, ವನ್ಯಜೀವಿಗಳ ಸುರಕ್ಷತೆಗೆ, ಸಾಮಾನ್ಯ ಜನರ ಭಯ ನಿವಾರಣೆಗೆ ಯೋಜನೆಯ ಹಣ ಖರ್ಚಾಗುವುದಿಲ್ಲ."[೩೩] ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಅಭಯಾರಣ್ಯಗಳಿರಲಿ, ರಾಷ್ಟ್ರೀಯ ಉದ್ಯಾನವನಗಳಿರಲಿ ಯಾವುವೂ ಕೂಡ ಆದಿವಾಸಿಗಳ ಬಗೆಗೆ ಗಮನ ಹರಿಸುವುದಿಲ್ಲ, ಅವುಗಳ ಮುಖ್ಯ ಉದ್ಧೇಶ ಅರಣ್ಯ ಮತ್ತು ವನ್ಯ ಪ್ರಾಣಿಗಳ ಸಂರಕ್ಷಣೆ. ಇದಕ್ಕಾಗಿ ಅರಣ್ಯವಾಸಿಗಳ ಎತ್ತಂಗಡಿ. ಇಂತಹ ಸಂದರ್ಭದಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ಬಗೆಗೆ ಅರಣ್ಯ ಇಲಾಖೆ ಸಿಬ್ಬಂದಿ ಯೋಚಿಸಲೂ ಹೋಗುವುದಿಲ್ಲ. ಅಲ್ಲದೆ ಈ ಕಾಯಿದೆ ಅವರಿಗೆ ಒಂದು ಕಂಟಕ ಎಂದೇ ಭಾವಿಸುತ್ತಾರೆ. ಇಂತಹ ಮನೋಭಾವವಿರುವ ಅಧಿಕಾರಿಶಾಹಿಗಳಿಂದ ಕಾಯಿದೆಯ ತ್ವರಿತ ಮತ್ತು ಪರಿಣಾಮಕಾರಿ ಅನುಷ್ಠಾನವನ್ನು ನಿರೀಕ್ಷಿಸುವುದು ಕಷ್ಟದಾಯಕವಾದುದಾಗಿದೆ. ಹಾಗಾಗಿ ಇದೊಂದು ಸವಾಲಾಗಿದೆ.

### ೪.೩.೮. ರಾಷ್ಟ್ರೀಯ ವನ್ಯಪ್ರಾಣಿ ಸಂರಕ್ಷಣಾ ಕಾಯಿದೆ

ಜನಸಾಮಾನ್ಯರು ವನ್ಯಜೀವಿ ಸಂರಕ್ಷಣೆಯನ್ನು ನೋಡುವ ದೃಷ್ಟಿಕೋನ ಬೇರೆಯಿರುತ್ತದೆ. ಕಾಡಿನಿಂದ ಆಚೆ ಇರುವ ವನ್ಯಜೀವಿ ಸಂರಕ್ಷಕರಿಗೆ ಹುಲಿ, ಆನೆ, ಚಿರತೆ, ಕಾಟಿ ಇನ್ನಿತರ ಪ್ರಾಣಿ, ಪಕ್ಷಿಗಳ ಉಳಿವನ್ನು ಅವರದೇ ನಿರ್ದಿಷ್ಟಕೋನದಿಂದ ನೋಡುತ್ತಾರೆ. ಆದರೆ ವನ್ಯಜೀವಿ ಸಂರಕ್ಷಣೆಯಿಂದ ಬಾಧಿತರಾದವರು ಇದೇ ವಿಷಯವನ್ನು ವಿಭಿನ್ನ ಮನೋಭಾವ ಮತ್ತು ದೃಷ್ಟಿಕೋನದಿಂದ ನೋಡುತ್ತಾರೆ. ಆದಾಗ್ಯೂ ಇಲ್ಲಿ ಗಮನಿಸಬೇಕಾದ ಅಂಶಗಳೆಂದರೆ "ವನ್ಯಜೀವಿಗಳನ್ನು ಸುರಕ್ಷಿತವಾಗಿಡಲು, ಅವುಗಳ ಸಂತತಿ ಬೆಳೆಯಲು ವ್ಯಾಪಕವಾದ ಕಾಡಿನ ಅವಶ್ಯಕತೆಯನ್ನು ಯಾರೂ ಅಲ್ಲಗಳೆಯುವುದಿಲ್ಲ. ಆದರೆ, ವನ್ಯ ಜೀವಿಗಳಿಗೆ ವಾಸಸ್ಥಾನ ಕಲ್ಪಿಸುವ ಹುಮ್ಮಸ್ಸಿನಲ್ಲಿ ನಾವು ಅಲ್ಲಿ ತಲೆತಲಾಂತರದಿಂದ ವಾಸ ಮಾಡಿಕೊಂಡು ಬರುತ್ತಿರುವ ಮೂಲನಿವಾಸಿಗಳಾದ ಜೇನುಕುರುಬರು, ಬೆಟ್ಟಕುರುಬರು, ಸೋಲಿಗರು ಇವರ ಬಗ್ಗೆ ಚಿಂತಿಸಿದ್ದೇವೆಯೇ?"[೩೪] ಎಂಬ ಮೂಲ ಪ್ರಶ್ನೆ ಹುಟ್ಟಿಕೊಳ್ಳುತ್ತದೆ.

೧೯೭೨ ರಲ್ಲಿ ರಾಜ್ಯಗಳ ಬೇಡಿಕೆಯಂತೆ ಕೇಂದ್ರ ಸರ್ಕಾರ ವನ್ಯ ಜೀವಿ ಸಂರಕ್ಷಣೆ ಕಾಯಿದೆ ೧೯೭೨ ನ್ನು ಪಾಸುಮಾಡಿತು. ಆದರೆ ಇದು ನೇರವಾಗಿ ಅರಣ್ಯಕ್ಕೆ

ಸಂಬಂಧಿಸಿದ್ದಿರಲಿಲ್ಲ. ಆದರೆ ಕಾಯಿದೆ ಕೆಲವು ವಿಶೇಷ ಪರಿಣಾಮ ಬೀರಿತು. ಮುಖ್ಯವಾಗಿ ಅರಣ್ಯ ನಿರ್ವಹಣೆ ಮತ್ತು ಅರಣ್ಯವಾಸಿಗಳು, ಅರಣ್ಯ ಅವಲಂಬಿತರ ಜೀವನಾಧಾರ ಮತ್ತು ನಿರಂತರತೆ ಮೇಲೆ ಪರಿಣಾಮ ಬೀರಲ್ಪಟ್ಟವು. ಹೆಸರೇ ಹೇಳುವಂತೆ ಕಾಯಿದೆಯ ಮುಖ್ಯ ಉದ್ದೇಶ ಅಥವಾ ಕಾಯಿದೆ ಬೆಳಕು ಚೆಲ್ಲುವುದು ವನ್ಯಜೀವಿ ಸಂರಕ್ಷಣೆ ಮತ್ತು ಅಭಿವೃದ್ಧಿ. ಸಸ್ಯ ಮತ್ತು ಪ್ರಾಣಿ ಸಂಕುಲ ರಕ್ಷಣೆ ಹಾಗೂ ಜೀವಿಗಳ ಶೀಲ ಸ್ವಭಾವದ ಜೊತೆಗೆ ಪರಿಸರದ ನಿರಂತರತೆಯನ್ನು ಕಾಪಾಡುವುದು. ಅರಣ್ಯವಾಸಿ, ಅರಣ್ಯ ಅವಲಂಭಿತ ಸಮುದಾಯಗಳು ಮತ್ತು ಅವರ ಗ್ರಾಹಕ ಹಕ್ಕುಗಳು ಹಾಗೂ ವನ್ಯಜೀವಿ ಸಂರಕ್ಷಣೆಯಲ್ಲಿ ಈ ಸಮುದಾಯಗಳು ಯಾವ ರೀತಿಯಲ್ಲಿ ಸಹಾಯವಾಗಿದೆ ಎಂಬ ಅಂಶಗಳ ಮೇಲೆ ಗಮನ ಕೇಂದ್ರೀಕರಿಸಲೇ ಇಲ್ಲ.

ಪ್ರಸ್ತುತ ವನ್ಯಜೀವಿ ಸಂರಕ್ಷಣಾ ಕಾಯಿದೆ ವನ್ಯಜೀವಿ ಸಂರಕ್ಷಣೆ ಮಾಡುವಲ್ಲಿ ಕೆಲವು ಕಾನೂನಾತ್ಮಕ ಅವಕಾಶ ಪಡೆದಿದೆ. ಇದು ಅರಣ್ಯ ಇಲಾಖೆಗೆ ಒಂದು ಬಹುದೊಡ್ಡ ಅವಕಾಶ. ಜೊತೆಗೆ ಅರಣ್ಯವಾಸಿಗಳ ಕುರಿತು ಅವರ ಕಾನೂನಾತ್ಮಕ ಅವಕಾಶಗಳನ್ನು, ಹಕ್ಕುಗಳನ್ನು ರಕ್ಷಿಸುವಲ್ಲಿ ಅಂತಿಮ ಸೂಚನೆಯನ್ನು ಇನ್ನೂ ಕೂಡ ಜಾರಿಗೊಳಿಸಿಲ್ಲ. ಇದು ಪಾರಂಪರಿಕ ಅರಣ್ಯವಾಸಿಗಳ ಬದುಕಿನ ದಿಕ್ಕನ್ನು ಬದಲಿಸಿದೆ. ಸರ್ಕಾರ ವನ್ಯಜೀವಿ ಸಂರಕ್ಷಣಾ ಕಾಯಿದೆಗೆ ೨೦೦೩ ರಲ್ಲಿ ತಿದ್ದುಪಡಿ ಮುಖಾಂತರ ಎರಡು ವರ್ಷಗಳ ಕಾಲಾವಕಾಶವನ್ನು ನೀಡಿ ತಮ್ಮ ಹಕ್ಕುಬಾಧ್ಯತೆ ಸ್ಥಾಪಿಸಲು ಅವಕಾಶ ನೀಡಿತು. ನಂತರ ಇದಕ್ಕೆ ಅವಕಾಶವಿಲ್ಲದಂತೆ ಮಾಡಿತು.

ಈ ಅಧಿನಿಯಮದ ಅಧ್ಯಾಯ ಮೂರರಲ್ಲಿ ವನ್ಯಪ್ರಾಣಿಗಳ ಬೇಟೆ ಕುರಿತು ಹೇಳಲಾಗಿದೆ. ಕಲಮು 11 (1) (ಎ) (ಬಿ) ಮತ್ತು 11 (2) ರಲ್ಲಿ ಕೆಲವೊಂದು ವಿಶೇಷ ಸಂದರ್ಭಗಳಲ್ಲಿ ವನ್ಯಪ್ರಾಣಿಗಳ ಬೇಟೆಯನ್ನು ಅನುಮತಿಸಲಾಗಿದೆ. ಆದರೆ ಯಾವುದೇ ಒಬ್ಬ ಆದಿವಾಸಿ ಸಮುದಾಯದವನು ಆತ್ಮರಕ್ಷಣೆಗಾಗಿ ಸದ್ಭಾವನೆಯಿಂದ ಪ್ರಾಣಿ ಕೊಂದಿದ್ದರೂ ಕೂಡ ಅಂತಹವನನ್ನು ಶಿಕ್ಷಿಸದೇ ಬಿಡಲಾಗುತ್ತಿಲ್ಲ.

ವನ್ಯಜೀವಿ ಅಧಿನಿಯಮದ ಅಧ್ಯಾಯ ಮೂರು ಎ ರಲ್ಲಿ ನಿರ್ದಿಷ್ಟಪಡಿಸಲಾದ ಸಸ್ಯಗಿಡಗಳ ರಕ್ಷಣೆ ಕುರಿತು ಹೇಳಲಾಗಿದೆ. ಈ ಅಧ್ಯಾಯದ 17ಎ (ಎ) ಉಪಬಂದದಲ್ಲಿ ಹೇಳಿರುವಂತೆ, ಉದ್ದೇಶಪೂರ್ವಕವಾಗಿ, ಯಾವುದೇ ಅರಣ್ಯದಲ್ಲಿದ್ದ ಮತ್ತು ಕೇಂದ್ರ ಸರ್ಕಾರದಿಂದ ಅಧಿಸೂಚನೆ ಹೊರಡಿಸಿ ನಿರ್ದಿಷ್ಟಪಡಿಸಿದ ಪ್ರದೇಶದಲ್ಲಿನ ನಿರ್ದಿಷ್ಟಪಡಿಸಿದ ಸಸ್ಯಗಿಡಗಳನ್ನು ಕೀಳತಕ್ಕದ್ದಲ್ಲ, ಕತ್ತರಿಸತಕ್ಕದ್ದಲ್ಲ ಮತ್ತು ಹಾಳು ಮಾಡತಕ್ಕದ್ದಲ್ಲ. 17ಎ (ಬಿ) ಉಪಬಂದದಲ್ಲಿ ಹೇಳಿರುವಂತೆ, ಅಂಥ ಯಾವುದೇ ಸಸ್ಯಗಿಡಗಳನ್ನು ತಾನು ಹೊಂದತಕ್ಕದ್ದಲ್ಲ, ಮಾರಾಟ ಮಾಡತಕ್ಕದ್ದಲ್ಲ, ದಾನ ಮಾಡತಕ್ಕದ್ದಲ್ಲ ಅಥವಾ ಸಾಗಾಟ ಮಾಡತಕ್ಕದ್ದಲ್ಲ. ಆದರೆ, ಅಧ್ಯಾಯ ನಾಲ್ಕರ ಕೆಲವು

ಉಪಬಂಧಗಳಿಗೆ ಒಳಪಟ್ಟು, ಬುಡಕಟ್ಟು ಜನಾಂಗದವರು, ಅಂಥ ಸಸ್ಯ/ಗಿಡಗಳನ್ನು ಕೀಳುವುದು, ಮುಂತಾದವುಗಳನ್ನು ಈ ಕಲಮು ತಡೆಯುವುದಿಲ್ಲ. ಆದರೆ ಅವರು ಅಂಥ ಸಸ್ಯ/ಗಿಡಗಳನ್ನು ತಮ್ಮ ವೈಯಕ್ತಿಕ ಉಪಯೋಗಕ್ಕಾಗಿ ಸದ್ಭಾವನೆಯಿಂದ ತೆಗೆದುಕೊಂಡಿರಬೇಕು. ಒಟ್ಟಾರೆ, ಬುಡಕಟ್ಟು ಜನಾಂಗದವರನ್ನು ಹೊರತುಪಡಿಸಿ, ಬೇರೆ ಯಾರೂ ಯಾವುದೇ ಸಸ್ಯ/ಗಿಡಗಳನ್ನು ಕೀಳದಂತೆ, ನಾಶಪಡಿಸದಂತೆ ಈ ಕಲಮು ನಿರ್ಬಂಧಿಸುತ್ತದೆ. ಆದರೆ ಹೆಚ್ಚಿನ ಜನರಿಗೆ ಇದರ ಮಾಹಿತಿ ಇಲ್ಲದಿರುವುದು ಆದಿವಾಸಿಗಳನ್ನು ಶೋಷಣೆಗೆ ಗುರಿಪಡಿಸಿದೆ.

ಅದೇ ರೀತಿಯಾಗಿ ವನ್ಯಜೀವಿ ಅಧಿನಿಯಮದ ಅನುಸೂಚಿ 20 ರಲ್ಲಿ ಹಕ್ಕುಗಳ ನಿಷೇಧ ಕುರಿತು ಹೇಳಲಾಗಿದೆ. ಕಲಮು 18 ರ ಕೆಳಗೆ ಯಾವುದೇ ಒಂದು ಪ್ರದೇಶವನ್ನು ಅಭಯಾರಣ್ಯವೆಂದು ಘೋಷಿಸಿದ ನಂತರ, ಆ ಅಧಿಸೂಚನೆಯಲ್ಲಿ ಹೇಳಲಾದ ಪ್ರದೇಶದಲ್ಲಿ, ಉತ್ತರಾಧಿಕಾರ, ಮರಣಶಾಸನವಿಲ್ಲದ, ಮರಣಶಾಸನದಿಂದ ಹೊರತುಪಡಿಸಿ ಬೇರೆ ಯಾವುದೇ ರೀತಿಯ ಹಕ್ಕು ಉದ್ಭವಿಸತಕ್ಕದ್ದಲ್ಲ/ಇರತಕ್ಕದ್ದಲ್ಲ. ಎಂದು ಹೇಳಿರುವುದನ್ನು ಗಮನಿಸಬಹುದಾಗಿದೆ. ಇದು ಅತೀ ಗೊಂದಲದ ವಿಷಯವೇ ಸರಿ ಏಕೆಂದರೆ, ಮರಣಶಾಸನವನ್ನು ಗಮನಿಸುವುದೇ ಆದರೆ ಎಷ್ಟು ಜನ ಆದಿವಾಸಿಗಳು ತಾವು ತಮ್ಮ ಆಸ್ತಿಯ ಕುರಿತು ಮರಣಶಾಸನ ಬರೆದಿಡುತ್ತಾರೆ ಎಂದು ನೋಡ ಹೊದರೆ ನಮಗೆ ನಿರಾಸೆ ಖಂಡಿತ ಏಕೆಂದರೆ ಅವರಲ್ಲಿ ಆಸ್ತಿಯ ಕಲ್ಪನೆಯೇ ಇಲ್ಲದಂತ ಸಂದರ್ಭದಲ್ಲಿ ಇನ್ನು ಮುಂದಿನ ಪೀಳಿಗೆಗೆ ಮರಣಶಾಸನ ಮಾಡುವ ಪ್ರಸಂಗಗಳು ಇಲ್ಲವೇ ಇಲ್ಲ ಎಂದರೂ ತಪ್ಪಾಗಲಾರದು. ಈ ಕಲಮಿನ ಒಳ ಉದ್ಧೇಶ ಆದಷ್ಟು ಅರಣ್ಯವಾಸಿಗಳನ್ನು ಅರಣ್ಯದಿಂದ ಹೊರತಳ್ಳುವುದಾಗಿದೆ.

ವನ್ಯಜೀವಿ ಅಧಿನಿಯಮದ ಅನುಸೂಚಿ ೨೪ ರಲ್ಲಿ ಹೇಳಿರುವಂತೆ ಭೂ ಅರ್ಜನೆ ಅಧಿನಿಯಮ, ೧೮೯೪ ರಲ್ಲಿ ಹೇಳಲಾದಂತೆ ಪರಿಹಾರ ಪಡೆದು, ಬಿಟ್ಟುಕೊಡುವ ಬಗ್ಗೆ ಒಪ್ಪಂದ ಮಾಡಿಕೊಂಡಿದ್ದರೆ, ಅಂಥ ಒಪ್ಪಂದವನ್ನು ಹೊರತುಪಡಿಸಿ, ಕಲೆಕ್ಟರನು ಭೂಮಿಯನ್ನು ಅಥವಾ ಹಕ್ಕುಗಳನ್ನು ವಶಪಡಿಸಿಕೊಳ್ಳಬಹುದು. ಇದೂ ಕೂಡ ಆದಿವಾಸಿಗಳಿಗೆ ವ್ಯತಿರಿಕ್ತ ಪರಿಣಾಮ ಬೀರುವಂತದ್ದಾಗಿದೆ. ಈ ಕಲಮು ಹೇಳುವಂತೆ ಅರಣ್ಯವಾಸಿಗಳು ತಾವು ಹೊಂದಿದ ಭೂಮಿಯ ವೈಯಕ್ತಿಕ ಹಕ್ಕುಗಳನ್ನು ಸರ್ಕಾರದ ಅಧಿನಿಯಮಗಳಿಗೆ ಒಳಪಟ್ಟು ಬಿಟ್ಟು ಕೊಡಬೇಕಾಗಿದೆ. ಒಂದು ವೇಳೆ ಅಂಥ ಒಪ್ಪಂದ ಸಾಧ್ಯವಾಗದಿದ್ದರೆ ಕಲೆಕ್ಟರನು ಒತ್ತಾಯ ಪೂರ್ವಕವಾಗಿ ಅಂಥ ಭೂಮಿಯನ್ನು ವಶಪಡಿಸಿಕೊಳ್ಳಬಹುದಾಗಿದೆ. ಇಲ್ಲಿ ವ್ಯಕ್ತಿ ಹಕ್ಕುಗಳಿಗೆ ಯಾವುದೇ ಕವಡೆ ಕಾಸಿನ ಬೆಲೆ ಇಲ್ಲ ಎಂದು ತಿಳಿದುಬರುತ್ತದೆ. ಇಂತಹ ಸಂದರ್ಭದಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ವ್ಯರ್ಥವೆನಿಸುತ್ತದೆ.

ವನ್ಯಜೀವಿ ಅಧಿನಿಯಮದ ಅನುಸೂಚಿ ೩೧ ಹೇಳುವಂತೆ 'ಮುಖ್ಯ ವನ್ಯಪ್ರಾಣಿ ರಕ್ಷಕ ಅಥವಾ ಅಧಿಕೃತ ಅಧಿಕಾರಿಯ ಪೂರ್ವಸಮ್ಮತಿ ಇಲ್ಲದೆ ಯಾವುದೇ ವ್ಯಕ್ತಿಯು, ಯಾವುದೇ ಅಸ್ತ್ರದೊಂದಿಗೆ ಅಭಯಾರಣ್ಯವನ್ನು ಪ್ರವೇಶಿಸತಕ್ಕದ್ದಲ್ಲ.' ಈ ಕಲಮಿನಿಂದಾಗಿ ಆದಿವಾಸಿಗಳು ತಮ್ಮ ಆತ್ಮರಕ್ಷಣೆಗಾಗಿ ಬಳಸುವ ಕೆಲವು ಅಸ್ತ್ರಗಳನ್ನು ಕಾಡಿನೊಳಗೆ ತೆಗೆದುಕೊಂಡು ಹೊಗುವಂತಿಲ್ಲದಾಗಿದೆ ಒಂದು ವೇಳೆ ಈ ರೀತಿಯ ಅಸ್ತ್ರಗಳೊಂದಿಗೆ ಅಮಾಯಕ ವ್ಯಕ್ತಿಗಳು ಸಿಕ್ಕಿಬಿದ್ದರೆ ಅಂತಹವರ ಮೇಲೆ ಮೊಕದ್ದಮೆಗಳನ್ನು ದಾಖಲಿಸಿ ಪೊಲೀಸ್ ಸ್ಟೇಷನ್ ಮತ್ತು ನ್ಯಾಯಾಲಯಗಳಿಗೆ ಅಲೆಯುವಂತೆ ಮಾಡಲಾಗುತ್ತಿದೆ.

ಮುಂದುವರೆದು ವನ್ಯಜೀವಿ ಅಧಿನಿಯಮದ ಅನುಸೂಚಿ 35(7) ರಲ್ಲಿ ಈ ರಾಷ್ಟ್ರೀಯ ಉದ್ಯಾನವನದಲ್ಲಿ ಪಶುವನ್ನು ಮೇಯಿಸುವುದನ್ನು ಅನುಮತಿಸತಕ್ಕದ್ದಲ್ಲ/ ಅನುಮತಿಸಲ್ಪಟ್ಟಿಲ್ಲ ಮತ್ತು ರಾಷ್ಟ್ರೀಯ ಉದ್ಯಾನವನದಲ್ಲಿ ಪ್ರವೇಶಿಸಲು ಅಧಿಕಾರ ಹೊಂದಿದ ವ್ಯಕ್ತಿಯು ತನ್ನ ಸಂಚಾರಕ್ಕಾಗಿ ಉಪಯೋಗಿಸುವ ಪಶುವನ್ನು ಹೊರತುಪಡಿಸಿ ಬೇರೆ ಯಾವುದೇ ಪಶುವು ಆ ಉದ್ಯಾನವನವನ್ನು ಪ್ರವೇಶಿಸತಕ್ಕದ್ದಲ್ಲ. ಇದು ಆದಿವಾಸಿಗಳ ಆಹಾರವನ್ನು ಕಿತ್ತುಕೊಳ್ಳುವ ಮಾದರಿಯಾಗಿದೆ. ಒಂದು ಸಾರಿ ಯಾವುದೇ ಪ್ರದೇಶ ರಾಷ್ಟ್ರೀಯ ಉದ್ಯಾನವನವೆಂದು ಘೋಷಿಲ್ಪಟ್ಟರೆ ಅಲ್ಲಿ ಅರಣ್ಯವಾಸಿಗಳು ಮತ್ತು ಆದಿವಾಸಿಗಳು ಪಶು, ಪ್ರಾಣಿ ಮತ್ತು ಪಕ್ಷಿಗಳನ್ನು ಸಾಕಾಣಿಕೆ ಮಾಡುವುದು ದುಸ್ತರವಾಗುತ್ತದೆ/ದುಸ್ತರವಾಗುತ್ತಿದೆ. ಇಂತಹ ಸಂದರ್ಭದಲ್ಲಿ ಆದಿವಾಸಿಗಳ ಸಮುದಾಯ ಹಕ್ಕುಗಳಿಗೆ ಕೊಡಲಿಪೆಟ್ಟು ಬೀಳುತ್ತದೆ.

ವನ್ಯಜೀವಿ ಅಧಿನಿಯಮದ ಅಧ್ಯಾಯ ೬ ರಲ್ಲಿ ೫೦ (೧) ನೇ ಕಲಮಿನ ಪ್ರಕಾರ ಪ್ರವೇಶ, ಶೋಧನೆ, ಬಂಧನ ಮತ್ತು ದಸ್ತಗಿರಿ ಮಾಡುವ ಅಧಿಕಾರ ನೀಡಿದೆ ಇದರ ಪ್ರಕಾರ "ಜಾರಿಯಲ್ಲಿದ್ದ ಯಾವುದೇ ಇತರ ಕಾನೂನಿನಲ್ಲಿ ಏನನ್ನೇ ಹೇಳಲಾಗಿದ್ದರೂ ನಿರ್ದೇಶಕನು ಅಥವಾ ಅವನಿಂದ ಈ ಬಗ್ಗೆ ಅಧಿಕಾರ ಪಡೆದ ಯಾವುದೇ ಇತರ ಅಧಿಕಾರಿಯು ಅಥವಾ ಯಾವುದೇ ಅರಣ್ಯಾಧಿಕಾರಿಯು ಅಥವಾ ಸಬ್‌ಇನ್‌ಸ್ಪೆಕ್ಟರಿಗಿಂತ ಕೆಳಗಿನವನಲ್ಲದ ಯಾವುದೇ ಅರಣ್ಯಾಧಿಕಾರಿಯು, ಈ ಅಧಿನಿಯಮದ ವಿರುದ್ಧ ಯಾವುದೇ ವ್ಯಕ್ತಿಯು ಅಪರಾಧ ಮಾಡಿದ್ದಾನೆ ಎಂದು ಅಭಿಪ್ರಾಯ ಪಟ್ಟರೆ"[೩೫] ಈ ಮೇಲಿನ ಅಧಿಕಾರ ಚಲಾಯಿಸಬಹುದಾಗಿದೆ. ಈ ಕಲಮಿನ ಅಧಿಕಾರವನ್ನು ಗಮನಿಸಿದರೆ ಜಾರಿಯಲ್ಲಿರುವ ಇತರೆ ಯಾವುದೇ ಕಾನೂನುಗಳು ಇದರ ಮುಂದೆ ನಿಷ್ಪ್ರಯೋಜಕವಾಗಿ ಕಾಣುತ್ತವೆ, ಇಂತಹ ಸಂದರ್ಭದಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ಕೂಡ ಇಲ್ಲಿ ತನ್ನ ಅಸ್ತಿತ್ವವನ್ನು ಕಳೆದು ಕೊಳ್ಳುತ್ತದೆ. ಇಂತಹ ಪರಸ್ಪರ ವಿರೋಧಿ ಅಂಶಗಳು ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನಕ್ಕೆ ಸವಾಲುಗಳಾಗಿವೆ.

### ೪.೩.೯. ಬುಡಕಟ್ಟು ಸಂಘಟನೆಗಳ ಮೂಲ ಬೇಡಿಕೆಗಳು

ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನದಲ್ಲಿ ಬುಡಕಟ್ಟು ಸಂಘಟನೆಗಳ ಪಾತ್ರ ಬಹಳಷ್ಟಿದೆ. ಆದರೆ ಈ ಸಂಘಟನೆಯಲ್ಲಿರುವ ಸದಸ್ಯರ ಅರೆ ಬರೆ ಜ್ಞಾನ, ಅವರ ಒಳಜಗಳಗಳು, ವಿಭಿನ್ನ ಮನೋಭಾವಗಳು, ಆರ್ಥಿಕ ದುರ್ಬಲತೆ ಅವರನ್ನು ವಿಘಟನೆ ಮಾಡುತ್ತಿವೆ. ಪರಿಸ್ಥಿತಿ ಹೀಗಿರುವಾಗ ಅವರಿಗೆ ಕಾಯಿದೆ ಬಗೆಗೆ ಅರಿವು ಮೂಡಿಸಿ, ಒಕ್ಕೂರಿಲಿನಿಂದ ಕೆಲಸ ಮಾಡಿಸುವ ಅವಶ್ಯಕತೆ ಇದೆ. ಆದರೆ ಕೆಲವು ಸ್ಥಳೀಯ ಪಟ್ಟಭದ್ರ ಹಿತಾಸಕ್ತಿಗಳು ಇವರನ್ನು ಒಂದುಗೂಡದಂತೆ ಮಾಡುತ್ತಿವೆ. ಅಲ್ಲದೆ ಈಗಲೂ ಪುನರ್ವಸತಿ ನೆಪದಲ್ಲಿ ೧೦ ಲಕ್ಷದ ಪ್ಯಾಕೇಜ್ ನೀಡುವ ಆಮಿಷಗಳು ಆದಿವಾಸಿಗಳನ್ನು ವಿಚಲಿತರನ್ನಾಗಿಸುತ್ತಿವೆ. ಆದಿವಾಸಿಗಳಲ್ಲಿ ನಾವು ಸೋಲಿಗರು, ನೀವು ಜೇನುಕುರಬರು, ಅವರು ಬೆಟ್ಟಕುರುಬರು, ಎಂದು ತಮ್ಮಲ್ಲಿಯೇ ಪಂಗಡಗಳಿರುವುದು ಒಗ್ಗಟ್ಟನ್ನು ತಡೆಯುತ್ತವೆ. ಹೀಗಾಗಿ ಯಾರೂ ತಮ್ಮ ಹಕ್ಕುಗಳನ್ನು ಒಕ್ಕೂರಲಿನಿಂದ ಕೇಳುತ್ತಿಲ್ಲ ಇದೂ ಕೂಡ ಅರಣ್ಯ ಹಕ್ಕುಗಳ ಕಾಯಿದೆಯ ಹಿನ್ನಡೆಗೆ ಕಾರಣವಾಗಿದೆ. ಈ ಅಂಶವನ್ನು ದತ್ತಾಂಶಗಳ ವಿಶ್ಲೇಷಣೆಯಲ್ಲಿ ಗಮನಿಸಬಹುದಾಗಿದೆ.

### ೪.೩.೧೦. ಸ್ವಯಂ ಸೇವಾ ಸಂಸ್ಥೆಗಳ ದೃಷ್ಟಿಕೋನ

ಸ್ವಯಂ ಸೇವಾ ಸಂಸ್ಥೆಗಳು ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನಕ್ಕೆ ಇರುವ ಸವಾಲುಗಳ ಕುರಿತು ತಮ್ಮದೇ ವಿಭಿನ್ನ ನಿಲುವುಗಳನ್ನು ವ್ಯಕ್ತಪಡಿಸಿವೆ.

#### ೪.೩.೧೦.೧ ನಿಸರ್ಗ ಫೌಂಡೇಶನ್

ನಂಜುಂಡಯ್ಯ[೩೩] ಇವರು ಹೇಳುವುದು

ಅ. ಇಲ್ಲಿ ಅನುಷ್ಠಾನ ಮಾಡಲೇ ಬೇಕೆಂಬ ಒತ್ತಡವಿಲ್ಲ. ರಾಜಕೀಯ ಇಚ್ಚಾಶಕ್ತಿ ಕೊರತೆ. ಆದಿವಾಸಿ ಪರ ರಾಜಕೀಯ ವ್ಯಕ್ತಿಗಳಿಲ್ಲ. ಆದಿವಾಸಿಗಳು ಸದ್ಯ ಎಲ್ಲೇ ವಾಸ ಮಾಡುತ್ತಿರಲಿ ಅದಕ್ಕೆ ಕಾರಣ ಅರಣ್ಯ ಇಲಾಖೆಯಾದ್ದರಿಂದ ಅವರ ಮೂಲ ನೆಲೆಯಲ್ಲೆ ಅವರಿಗೆ ಭೂಮಿ ದೊರಕಿಸಿಕೊಡಬೇಕು. ಒಂದು ವೇಳೆ ಅಂತಹ ಕಡೆ ಸಾಧ್ಯವಿಲ್ಲದಿದ್ದಾಗ ಬೇರೆಡೆ ಅಷ್ಟೇ ಜಮೀನು ನೀಡಬೇಕು. ಆದರೆ ಇದು ಸಾಧ್ಯವಾಗುತ್ತಿಲ್ಲ.

ಆ. ಅರಣ್ಯ ಇಲಾಖೆಯೇ ವಿಳಂಬಕ್ಕೆ ಮೂಲ ಕಾರಣ. ಈ ಕಾಯಿದೆ ಜನರ ಸಹಭಾಗಿತ್ವಕ್ಕೆ ಹೆಚ್ಚು ಒತ್ತು ನೀಡುತ್ತದೆ. ಆದರೆ ಅರಣ್ಯ ಇಲಾಖೆ ಇದಕ್ಕೆ ಅವಕಾಶ ಕೊಡಲು ನಿರಾಕರಿಸುತ್ತದೆ. ಯಾಕೆಂದರೆ ಅವರು ಅರಣ್ಯ ಸಂರಕ್ಷಣೆ ಎಂದು ಹೇಳುತ್ತಾ ಅರಣ್ಯವನ್ನು ವಿನಾಶದಂಚಿನತ್ತ ಕೊಂಡೊಯ್ದಿದ್ದಾರೆ. ಮತ್ತು ಅರಣ್ಯದ

ಮೇಲಿನ ತಮ್ಮ ಹಿಡಿತವನ್ನು ಬಿಟ್ಟುಕೊಡಲು ತಯಾರಿಲ್ಲ ಹಾಗಾಗಿ ಕಾಯಿದೆ ಅನುಷ್ಠಾನವಾಗದಂತೆ ನೋಡಿಕೊಳ್ಳುತ್ತಿದ್ದಾರೆ.

ಇ. ಇತರೆ ಪಾರಂಪರಿಕ ಎಂಬ ಪದ ಕಾಯಿದೆಯಲ್ಲಿರುವುದು ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯಲ್ಲಿ ದುರುಪಯೋಗವಾಗಲ್ಲ. ಆದರೆ ಚಿಕ್ಕಮಗಳೂರು, ಶಿವಮೊಗ್ಗ, ಮಡಿಕೇರಿ ಇಲ್ಲಿ ದುರುಪಯೋಗವಾಗುವ ಸಾಧ್ಯತೆ ಇದೆ ಮತ್ತು ಉಳ್ಳವರಿಗೆ ಹೆಚ್ಚು ಅನುಕೂಲವಾಗುತ್ತದೆ. ಆದರೆ ಈ ಅಂಶವನ್ನು ಅರಣ್ಯ ಇಲಾಖೆ ಒಪ್ಪದೆ ತಪ್ಪು ತಿಳುವಳಿಕೆಯಿಂದ ಕಾಯಿದೆ ಅನುಷ್ಠಾನಕ್ಕೆ ವಿಳಂಭ ಮಾಡಿದೆ.

ಈ. ಕರ್ನಾಟಕದಲ್ಲಿ ಬಹಳಷ್ಟು ಆದಿವಾಸಿ ಪಂಗಡಗಳಿರುವುದರಿಂದ ಈಗ ಒಬ್ಬರಿಗೆ ಕೊಟ್ಟರೆ ಎಲ್ಲರಿಗೂ ಕೊಡಬೇಕಾಗುವುದು ಎಂದು ವಿಳಂಬ ಮಾಡಲಾಗುತ್ತಿದೆ. ಆದರೆ ಇದು ತಪ್ಪು. ಯಾರದೋ ಒತ್ತಡಕ್ಕೆ ಮಣಿದು ಮೂಲತಃ ಸಮಸ್ಯೆ ಹೊಂದಿದವರಿಗೆ ಭೂಮಿ ನೀಡದಿರುವುದು ಎಷ್ಟು ಸರಿ. ಹಾಗಾಗಿ ಮೊದಲು ಇವರ ಸಮಸ್ಯೆ ಬಗೆಹರಿಸಿ ಉಳಿದದ್ದನ್ನು ಮುಂದೆ ನೋಡಬೇಕು.

ಉ. ಆದಿವಾಸಿಗಳ ಪುನರ್ವಸತಿ ನೀತಿ ಹೇಗಿದೆಯೆಂದರೆ ಮೂಲ ಬೇರು (ರೂಟ್ ಲೆಸ್) ಇಲ್ಲದಂತಹ ವ್ಯವಸ್ಥೆ. ಅವರ ನಂಬುಗೆಯ ಸ್ಥಳ, ಜಮ್ಮ, ಮನೆ ಎಲ್ಲವನ್ನೂ ಬಿಟ್ಟು ಬಂದಾಗ ಅವರ ಜೀವನ ಪದ್ಧತಿ, ಆಹಾರ, ವಿಹಾರ, ಪರಿಸರ, ನೀರು, ಗಾಳಿ, ಬೆಳಕು, ಮನೆ ಭೂಮಿ, ಸ್ವಚ್ಛಂದ ಹಾರಾಟದ ಬದುಕು ಇವುಗಳನ್ನೆಲ್ಲಾ ಕಸಿದು ಕೊಂಡು ನಾವು ಯಾವುದೊ ಗೊತ್ತು ಗುರಿಯಿಲ್ಲದ ಕಡೆ ನೆಲೆ ಕಂಡು ಕೊಳ್ಳುವುದು ಕಷ್ಟ. ಒಬ್ಬ ಆದಿವಾಸಿ ಹೇಳುವ ಪ್ರಕಾರ ನಾವು ಹೇಗೆ ಒಂದು ೬೦ ವರ್ಷದ ಮರವನ್ನು ಇಲ್ಲಿಂದ ಕಿತ್ತು ಬೇರೆಡೆ ನೆಟ್ಟು ಬೆಳಸಲಾಗುವುದಿಲ್ಲವೂ ಹಾಗೆ ನಾವು ಹುಟ್ಟಿ ಬೆಳೆದು ಬಂದ ಸ್ಥಳ ಬಿಟ್ಟು ಹೋಗಲು ಸಾಧ್ಯವಿಲ್ಲ. ಹಾಗಾಗಿ ಆದಿವಾಸಿಗಳು ತಾವು ಇದ್ದಲ್ಲಿಯೇ ಇರಲು ಬಯಸುತ್ತಾರೆ. ಇದನ್ನು ಅರಣ್ಯ ಇಲಾಖೆ ಸಹಿಸುತ್ತಿಲ್ಲ.

ಊ. ಕಳೆದ ೩೦ ವರ್ಷದಲ್ಲಿ ಕಾಡಿನ ಸಂಪರ್ಕ ಇಲ್ಲದ ಮಕ್ಕಳು ಈಗ ಅರಣ್ಯ ಹಕ್ಕುಗಳ ಕಾಯಿದೆಯಿಂದ ಸಮುದಾಯ ಹಕ್ಕುಗಳನ್ನು ನೀಡಿದರೆ ಅದರ ಸದುಪಯೋಗವಾಗುತ್ತದೆಯೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಾ ನೀವು ಯಾವುದೇ ಹಾಡಿಯ ಮಕ್ಕಳನ್ನು ಕಾಡಿಗೆ ಕರೆದು ಕೊಂಡು ಹೋಗಿ ಬಿಡಿ ಇಂತಹ ಗಿಡ, ಸೊಪ್ಪು, ಗಡ್ಡೆ, ಗೆಣಸು, ನಾರು ಬೇರು ತರಲು ತಿಳಿಸಿ ಒಂದು ವೇಳೆ ಅವರು ತರದಿದ್ದರೆ ಹಕ್ಕುಗಳನ್ನು ನೀಡಬೇಡಿ. ಅಲ್ಲದೆ ನಾವುಗಳು ನಗರದಲ್ಲಿದ್ದು ನಮ್ಮ ಹಳ್ಳಿಗಳಿಗೆ ಹೋಗಿ ಬರುವಂತೆ, ಹೊರದೇಶದಲ್ಲಿದ್ದರೂ ನಮ್ಮ ದೇಶದ ವ್ಯಾಮೋಹ ಬಿಡದವರಂತೆ. ಕಾಡಿನ ಜನರು ಕಾಡನ್ನೇ ತಾಯಿ ಎಂದು ನಂಬಿದವರು ಅವರು

ಕಾಡಿನಲ್ಲೆ ಇರಲು ಬಯಸುತ್ತಾರೆ. ಹಾಗಾಗಿ ಅವರ ಮೂಲ ಬೇರು ಅಲ್ಲಿಯೇ ಇರಲು ಬಿಡಿ ಅವರ ಮಕ್ಕಳಿಗೆ ಬೇಕಾದರೆ ಶಿಕ್ಷಣ, ಉದ್ಯೋಗ ನೀಡಿ ಅವರು ಉದ್ಯೋಗ ಮಾಡುತ್ತಾ ತಮ್ಮ ತಾಯ್ನಾಡಿಗೆ ಬಂದು ಹೋಗುತ್ತಾರೆ. ಅದು ಬಿಟ್ಟು ಅವರಿಗೆ ರೂಟ್ ಲೆಸ್ ಮಾಡಿದರೆ ಬೇರಿಲ್ಲದ ಮರದಂತೆ ಅವರ ಜೀವನ ಬರಡಾಗುತ್ತದೆ. ಹೀಗಾಗಿ ನಾವು ಅವರಿಗೆ ಕಾಡು ಬಿಟ್ಟು ಕೊಡಬೇಕಾಗಿದೆ. ಅಲ್ಲ ಅವರ ಕಾಡನ್ನು ಅವರಿಗೇ ಒಪ್ಪಿಸಬೇಕಾಗಿದೆ. ಅದರ ಜೋಪಾನ ನಮ್ಮದು ಎನ್ನುತ್ತಾರೆ. ಕಾಡು ಹಾಳಾಗಿದ್ದೇ ಅರಣ್ಯ ಇಲಾಖೆಯವರಿಂದ ಆದಿವಾಸಿಗಳಿಂದಲ್ಲ ಎಂಬುದು ಈಗ ಜಗಜ್ಜಾಹೀರಾಗಿದೆ. ಆದರೂ ಅರಣ್ಯ ಇಲಾಖೆಯವರು ಇದನ್ನು ಒಪ್ಪಲು ತಯಾರಿಲ್ಲ ಇದನ್ನು ನಾವು ಅರಣ್ಯ ಇಲಾಖೆಯ ಕೆಲವು ದಪ್ಪ ಚರ್ಮದ ಸಿಬ್ಬಂದಿಗೆ ಮನದಟ್ಟುಮಾಡಬೇಕಾಗಿದೆ. ಅಲ್ಲದೆ ೫೦೦೦ ವರ್ಷ ಕಾಡಿನಲ್ಲಿ ಬಾಳಿದ ಒಂದು ಸಮುದಾಯದ ಜ್ಞಾನ ಕೇವಲ ೩೦ ವರ್ಷಗಳ ಸಂಪರ್ಕ ಕಡಿತದಿಂದ ಅದು ಮರೆತು ಹೋಗುತ್ತದೆ ಎಂದರೆ ತಪ್ಪಾಗುತ್ತದೆ. ಇದು ಕೆಲವರಿಗೆ ಅರ್ಥವಾಗುತ್ತಿಲ್ಲ.

ಎ. ಆದಿವಾಸಿಗಳಿಂದ ಮಾತ್ರ ಅರಣ್ಯ ಸಂರಕ್ಷಣೆ ಸಾಧ್ಯ, ಎಲ್ಲಿ ಆದಿವಾಸಿಗಳಿದ್ದಾರೋ ಅಲ್ಲಿ ಅರಣ್ಯ ಇದೆ, ನೀರಿನ ಮೂಲ ಇದೆ, ಖನಿಜ ಸಂಪತ್ತಿದೆ, ಭೂಮಿ ಫಲವತ್ತಿದೆ. ಇದನ್ನು ಮನಗಂಡೆ ಭಾರತ ಸರ್ಕಾರ ಈ ಕಾಯಿದೆ ಜಾರಿಗೆ ತಂದಿದೆ. ಆದರೆ ೬೦ ವರ್ಷ ಗಳಿಂದ ರಾಜ್ಯಭಾರ ಮಾಡಿದ ಇಲಾಖೆ ಇಂದು ಅದನ್ನು ಬಿಟ್ಟು ಕೊಡುವಲ್ಲಿ ಮುಂದೆ ಬರುತ್ತಿಲ್ಲ. ಆದರೆ ಎಲ್ಲಾ ಅಧಿಕಾರಿಗಳೂ ಇದೇ ರೀತಿ ಇಲ್ಲ ಕೆಲವು ಅಧಿಕಾರಿಗಳು ಆದಿವಾಸಿ ಪರವಾಗಿ ಆಲೋಚಿಸುತ್ತಾರೆ.

ಐ. ಈ ಕಾಯಿದೆ ಬಂದಿದ್ದರೂ ಕೂಡ ಈಗಲೂ ಅರಣ್ಯ ಇಲಾಖೆಯವರು ಪುನರ್ವಸತಿ ಮಾಡುವುದಾಗಿ ಕೆಲವು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಅರಣ್ಯವಾಸಿಗಳನ್ನು ಎತ್ತಂಗಡಿ ಮಾಡಿಸಲು ಹೋರಾಡುತ್ತಿದ್ದಾರೆ. ಈಗಾಗಲೇ ಅರಣ್ಯಗಳಿಂದ ಹೊರಹಾಕಲ್ಪಟ್ಟಿರುವ ಆದಿವಾಸಿಗಳಿಗೆ ಸಮುದಾಯ ಹಕ್ಕುಗಳಿಗೆ ಅರ್ಜಿ ಹಾಕಲಾಗುತ್ತಿದೆ. ವರ್ಷದ ಒಂದೆರೆಡು ತಿಂಗಳು ತಮ್ಮ ಮೂಲ ಸ್ಥಳಕ್ಕೆ ಹೋಗಿ ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹಿಸಿ ಬರುವಂತೆ ವ್ಯವಸ್ಥೆ ಮಾಡಲಾಗುತ್ತಿದೆ. ಆದರೆ ಇದು ಪರಿಣಾಮಕಾರಿಯಲ್ಲ. ಹೀಗೆ ಹಲವು ಅಂಶಗಳು ಕಾಯಿದೆಯ ಅನುಷ್ಠಾನಕ್ಕೆ ತೊಡಕಾಗಿವೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

### ೪.೩.೧೦.೨. ಡೀಡ್ ಸಂಸ್ಥೆ

ಶ್ರೀಕಾಂತ[೩೭] ಇವರು ಹೇಳುವಂತೆ,

ಅ. ಮರ ಕಾಯುವವ ಮತ್ತು ಭೂಮಿ ಕಾಯುವವರ ನಡುವೆ ಜನ ಕಾಯುವವನಿಗೆ ಧೀರತ್ವ ಇಲ್ಲದಂತಾಗಿದೆ. ಇವರ ನಡುವೆ ಕೃಶವಾಗಿದೆ. ಅರಣ್ಯ ಇಲಾಖೆ ಮತ್ತು ಕಂದಾಯ ಇಲಾಖೆಗಳ ದರ್ಪ, ದಾರ್ಷ್ಟ್ಯ, ಶ್ರೀಮಂತಿಕೆ, ಅಧಿಕಾರ ಪ್ರಯೋಗ ಚಾಣಾಕ್ಷತೆ, ಕುಶಾಗ್ರಮತಿ ಸಮಾಜ ಕಲ್ಯಾಣ ಇಲಾಖೆಗೆ ಇಲ್ಲ.

ಆ. ಅರಣ್ಯ ಹಕ್ಕುಗಳ ಉಪಸಮಿತಿ ಅಧ್ಯಕ್ಷರು ಅರಣ್ಯ ಇಲಾಖೆ ಸಿಬ್ಬಂದಿ ನೀಡಿದ ತಪ್ಪು ಮಾಹಿತಿಯಿಂದಾಗಿ ಆದಿವಾಸಿಗಳು ಪ್ರಸ್ತುತ ಅರಣ್ಯದಲ್ಲಿ ವಾಸವಿಲ್ಲ ಎಂಬ ಕಾರಣಕ್ಕೆ ವೈಯಕ್ತಿಕ ಮತ್ತು ಸಾಮುದಾಯಿಕ ಅರಣ್ಯ ಹಕ್ಕುಗಳ ಅರ್ಜಿಗಳನ್ನು ಕಾನೂನುಬಾಹಿರವಾಗಿ ವಜಾ ಮಾಡಿದ್ದಾರೆ.

ಇ. ಅರಣ್ಯದಲ್ಲಿಲ್ಲ ಎಂಬ ಕಾರಣಕ್ಕೆ ಅವರಿಗೆ ಕಾನೂನಿನ ಸವಲತ್ತುಗಳನ್ನು ನೀಡದೇ ಇರುವುದು ತಪ್ಪು. ಆದಿವಾಸಿಗಳನ್ನು ೧೯೭೨ ರಲ್ಲಿ ವನ್ಯಜೀವಿ ಸಂರಕ್ಷಣಾ ಕಾಯಿದೆ ಅಡಿ ಅರಣ್ಯದಿಂದ ಹೊರಹಾಕಿದ್ದೇ ಅರಣ್ಯ ಇಲಾಖೆಯವರಾದ್ದರಿಂದ ಇದು ಆದಿವಾಸಿಗಳ ತಪ್ಪಲ್ಲ ಹಾಗಾಗಿ ಈ ಕಾರಣಕ್ಕಾಗಿ ಅರ್ಜಿ ತಿರಸ್ಕರಿಸುವಂತಿಲ್ಲ. ಆದರೂ ಅರ್ಜಿಗಳು ತಿರಸ್ಕೃತಗೊಂಡಿವೆ.

ಈ. ಕಾಯಿದೆ ಹೇಳುವ ಪ್ರಕಾರ ಸರ್ಕಾರಿ ಯೋಜನೆಗಳಿಂದ ಬಾದೆಗೊಳಪಟ್ಟಿದ್ದರೆ ಸೆಕ್ಷನ್ ೩ (೧) (ಎಂ) ಪ್ರಕಾರ ಅಂತಹವರು ಈ ಕಾಯಿದೆಯಿಂದ ದೊರೆಯುವ ಸವಲತ್ತುಗಳಿಗೆ ಅರ್ಹರು ಹಾಗಾಗಿ ಇವರು ಅರ್ಜಿ ಸಲ್ಲಿಸಿರುತ್ತಾರೆ ಮತ್ತು ಇವರಿಗೆ ನ್ಯಾಯಯುತವಾಗಿ ದೊರಕುವ ಸೌಲಭ್ಯಗಳನ್ನು ಹೊದಗಿಸಿಕೊಡಬೇಕು. ಆದರೆ ಇದು ಸಾಧ್ಯವಾಗುತ್ತಿಲ್ಲ.

ಉ. ಇದು ಅಧಿಕಾರಿಗಳಿಗೆ ಅಸಡ್ಡೆ, ನಿರ್ಲಕ್ಷಿತ ವಿಷಯ. ಆದಿವಾಸಿಗಳಿಗೆ ಕಾಡು ಕೊಟ್ಟರೆ ಕಾಡು ಇಲ್ಲದಂತೆ ಆಗುತ್ತದೆ ಎಂಬುದು ಅಧಿಕಾರಿ ವರ್ಗದ ಅನಿಸಿಕೆಯಾಗಿದೆ.

ಋ. ಎಲ್ಲ ಆಸ್ತಿಯು ಒಂದು ಕಾಲಕ್ಕೆ ರಾಜರದ್ದೋ ಸರ್ಕಾರದ್ದೋ ಆಗಿತ್ತು. ರೈತರ ಜಮೀನು, ಕಾಫಿ, ಟೀ, ರಬ್ಬರ್ ಪ್ಲಾಂಟೇಶನ್, ಕಾರ್ಖಾನೆಗಳ ಜಾಗ ಹೀಗೆ ಎಲ್ಲವೂ ಮೊದಲು ಸರ್ಕಾರಿ ಸ್ವತ್ತಾಗೇ ಇತ್ತು ಉಳುವವನೆ ಭೂಮಿಯ ಒಡೆಯ ಎಂದು ಅವರವರ ಹೆಸರಿಗೆ ಜಮೀನು ನೀಡಿದ್ದಾರೆ. ಆದರೆ ಆದಿವಾಸಿಗಳಿಗೆ ಅವರ ಉಳುಮೆ ಜಮೀನನ್ನು ಬಿಟ್ಟುಕೊಡಲು ತಡಮಾಡಲಾಗುತ್ತಿದೆ.

ಎ. ಸಂಸತ್ತಿನಲ್ಲಿ ಚರ್ಚಿಸಿ ಕಾಯಿದೆ ಜಾರಿಗೆ ತಂದಿದ್ದರೂ ಅದನ್ನು ಅನುಷ್ಠಾನಗೊಳಿಸದೆ. ಈ ಕಾಯಿದೆಯಿಂದ ಅರಣ್ಯಕ್ಕೆ ತೊಂದರೆ ಆಗುತ್ತದೆ ಎಂದು ವಿಳಂಬಮಾಡಲು ಇವರೇನು ಸಂಸತ್ತಿಗಿಂತ ಮೇಲಿನವರೇ? ಎಲ್ಲರಿಗೂ ಭೂಮಿ ಇದೆ ಆದಿವಾಸಿಗಳಿಗೆ ಅನ್ಯಾಯವಾಗಿದೆ ಹಾಗಾಗಿ ಅವರಿಗೆ ಭೂಮಿ ಕೊಡಬೇಕು ಎಂಬುದು ಕೇಂದ್ರ ಸರ್ಕಾರದ ನಿಲುವು. ಅದನ್ನು ಅನುಷ್ಠಾನಗೊಳಿಸುವುದು ಅಧಿಕಾರಿವರ್ಗದ ಕರ್ತವ್ಯ. ಆದರೆ ತಮ್ಮ ಕರ್ತವ್ಯ ಸರಿಯಾಗಿ ನಿರ್ವಹಿಸುತ್ತಿಲ್ಲ.

ಏ. ಉಪವಿಭಾಗ ಸಮಿತಿ ಅರಣ್ಯ ಇಲಾಖೆ ಸಿಬ್ಬಂದಿಯಿಂದ ಮಾಹಿತಿ ಪಡೆದು ನಿರ್ಧಾರ ತೆಗೆದುಕೊಳ್ಳುವ ಬದಲು ತಾವೇ ಸ್ಥಳ ಪರಿಶೀಲನೆ ಮಾಡಿದರೆ ನೈಜತೆ ತಿಳಿಯುತ್ತದೆ. ಅರಣ್ಯದಿಂದ ಹೊರಹಾಕಿದ್ದಾರೋ ಇಲ್ಲವೂ? ಯಾವಾಗ ಮತ್ತು ಯಾವ ಕಾರಣಕ್ಕೆ ಹೊರಹಾಕಿದ್ದಾರೆ. ಸದ್ಯದ ಅವರ ಪರಿಸ್ಥಿತಿ ಹೇಗಿದೆ ಇದೆಲ್ಲವೂ ತಿಳಿದುಬರುತ್ತದೆ. ಅಲ್ಲದೆ ಹೈಕೋರ್ಟ ನೇಮಿಸಿದ ಒಂದು ಸಮಿತಿ ಆದಿವಾಸಿಗಳನ್ನು ಕಾಡಿನಿಂದ ಹೊರಹಾಕಿದ್ದಾರೆ ಎಂದು ವರದಿ ನೀಡಿದೆ. ಇವರು ಅದನ್ನು ಅಧ್ಯಯನ ಮಾಡಬಹುದಿತ್ತು. ಇದಾವುದನ್ನೂ ಮಾಡದೆ ಆದಿವಾಸಿಗಳಿಗೆ ಮತ್ತೆ ಮತ್ತೆ ಅನ್ಯಾಯ ಮಾಡಲಾಗುತ್ತಿದೆ.

ಐ. ಈಗಾಗಲೇ ಪುನರ್ವಸತಿಗೊಂಡವರು ಕೇವಲ ಒಂದು, ಎರೆಡು, ಮೂರು ಎಕರೆ ಪಡೆದು ಕೊಂಡಿರುತ್ತಾರೆ. ಆದರೆ ಕಾಯಿದೆಯಲ್ಲಿ ಹತ್ತು ಎಕರೆ ಪಡೆಯಲು ಅವಕಾಶ ಇದೆ. ಅಲ್ಲದೆ ಕಾಡಿನಲ್ಲಿ ದೊರೆಯತ್ತಿದ್ದ ಉತ್ತಮ ಆಹಾರ ನೀರುಗಳಿಂದ ಆದಿವಾಸಿಗಳ ಆರೋಗ್ಯ ಉತ್ತಮ ಸ್ಥಿತಿಯಲ್ಲಿತ್ತು. ಈಗ ಅವರ ಸರಾಸರಿ ಜೀವಿಸುವ ಆಯುಷ್ಯ ಕ್ಷೀಣಿಸಿದೆ ಇದಕ್ಕೆ ಹೊಣೆ ಯಾರು? ಕೇವಲ ರೇಷನ್ ಅಕ್ಕಿಯಿಂದ ಶಕ್ತಿ ಬರಲ್ಲ. ಕುಡಿಯುವ ನೀರು, ಸೇವಿಸುವ ಗಾಳಿ, ನೋಡುವ ಪರಿಸರದಿಂದಲೂ ಶಕ್ತಿ ಮತ್ತು ಉತ್ಸಾಹ ಮನುಷ್ಯನಲ್ಲಿ ತುಂಬುತ್ತದೆ. ಇದೆಲ್ಲವನ್ನು ಪಡೆದುಕೊಳ್ಳಲು ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ ಬಹಳ ಅವಶ್ಯಕ. ಆದರೆ ಅಧಿಕಾರಿಗಳ ಕ್ಷುಲ್ಲಕ ಮನಸ್ಥಿತಿಯಿಂದ ಇದು ಸಾಧ್ಯವಾಗುತ್ತಿಲ್ಲ.

ಒ. ಸಮುದಾಯ ಹಕ್ಕು ಕೊಡಲೂ ಅರಣ್ಯ ಇಲಾಖೆಗೆ ಮನಸ್ಸಿಲ್ಲ. ೧೧೫ ಅರ್ಜಿ ಹಾಕಿರವಲ್ಲಿ ಕೇವಲ ೧೯ ಹಾಡಿಗಳಿಗೆ ಈ ಸೌಲಭ್ಯ ಕಲ್ಪಿಸಲಾಗಿದೆ. ಉಳಿದ ಹಾಡಿಗಳಿಗೆ ಇನ್ನೂ ನೀಡಿಲ್ಲ ಇನ್ನೂ ಹಲವು ಹಾಡಿಗಳು ಅರ್ಜಿಯನ್ನೆ ಸಲ್ಲಿಸಿಲ್ಲ. ಇದು ಸಮಾಜ ಕಲ್ಯಾಣ ಇಲಾಖೆ ಕೆಲಸ ಅವರು ಅರ್ಜಿ ಸಲ್ಲಿಸಲು ಏರ್ಪಾಡು ಮಾಡಬೇಕಾಗಿದೆ. ಇದನ್ನು ಇಲಾಖೆ ಮಾಡುತ್ತಿಲ್ಲ.

ಓ. ಈ ಕಾಯಿದೆಯಿಂದ ವನ್ಯಪ್ರಾಣಿಗಳಿಗೆ ಯಾವುದೇ ತೊಂದರೆ ಇಲ್ಲ. ಪ್ರಾಣಿಗಳು ತಮ್ಮ ಪಾಡಿಗೆ ಇರುತ್ತವೆ ಆದಿವಾಸಿಗಳು ತಮ್ಮ ಪಾಡಿಗೆ ಇರುತ್ತಾರೆ. ಕಾಡು ಎಲ್ಲರಿಗೂ

ಸೇರಿದ್ದು. ಆದರೆ ಅರಣ್ಯ ಇಲಾಖೆ ಸಿಬ್ಬಂದಿ ವನ್ಯಪ್ರಾಣಿಗಳಿಗೆ ತೊಂದರೆಯಾಗುತ್ತದೆ. ಎಂಬ ಸಬೂಬು ಹೇಳುತ್ತಿದ್ದಾರೆ.

ಔ. ಆದಿವಾಸಿಗಳ ಜಮೀನು ಹಕ್ಕು ಮಾರುವಂತದ್ದಲ್ಲ. ಕಾಡು ಮತ್ತು ಪ್ರಾಣಿಗಳನ್ನು ಕಾಪಾಡುವುದೇ ಕಾಯಿದೆಯ ಉದ್ದೇಶ. ಇಲ್ಲಿ ಆದಿವಾಸಿಗಳನ್ನು ಕಾಪಾಡುವ ಅವರನ್ನು ಅಭಿವೃದ್ಧಿ ಪಡಿಸುವ ಯಾವುದೇ ಉದ್ದೇಶ ಇಲ್ಲ ಎಂಬುದೂ ಆದಿವಾಸಿಗಳನ್ನು ಹಿಂದೇಟು ಹಾಕುವಂತೆ ಮಾಡಿದೆ.

ಅಂ. ಸಾಮೂಹಿಕ ಹಕ್ಕುಗಳ ಜೊತೆಗೆ ನಾಗರೀಕ ಸೌಲಭ್ಯಗಳ ಒಂದು ಸೆಕ್ಷನ್ ೩ (೨) ಇದೆ. ಅದರ ಪ್ರಕಾರ ಮನೆ, ನೀರು, ವಿದ್ಯುತ್, ಶಾಲೆ ಇತ್ಯಾದಿ ನಾಗರೀಕ ಸೌಲಭ್ಯ ಕಲ್ಪಿಸಬೇಕು ಆದರೆ ಸಮುದಾಯ ಹಕ್ಕು ಕೊಟ್ಟ ಹಾಡಿಗಳಲ್ಲಿಯೂ ಈ ಸೌಲಭ್ಯ ಕಲ್ಪಿಸಲಾಗಿಲ್ಲ. ಜೊತೆಗೆ ಅರಣ್ಯ ಕಿರು ಉತ್ಪನ್ನಗಳ ಸಂಗ್ರಹದಲ್ಲೂ ಒಂದು ನಿರ್ದಿಷ್ಟ ವ್ಯಾಪ್ತಿವರೆಗೂ ಕಾಡಿನಲ್ಲಿ ಬಿಡುತ್ತಾರೆ. ಇದು ತಪ್ಪು. ಇಂತಹ ನಿರ್ಬಂದಗಳ ಹಿನ್ನೆಲೆಯಲ್ಲಿ ಆದಿವಾಸಿಗಳು ಕಾಯಿದೆಯ ಬಗೆಗೆ ಅತೃಪ್ತರಿದ್ದಾರೆ.

ಅಃ. ಮೈಸೂರು ಜಿಲ್ಲೆಯಲ್ಲಿ ಸಮಾರು ೮೦೦ ಜನರಿಗೆ ಒಂದು, ಎರೆಡು ಗುಂಟೆ ಜಮೀನನ್ನು ಅಳತೆ ಮಾಡಿ ಹಕ್ಕು ಪತ್ರ ನೀಡಲು ತಯಾರಿ ಮಾಡಿದ್ದರು. ಆದರೆ ಇಷ್ಟು ಕಡಿಮೆ ಜಮೀನಿನಲ್ಲಿ ಕೇವಲ ನಮ್ಮನ್ನು ಊಳಲು ಕೊಟ್ಟಿದ್ದೀರಿ ಎಂದು ಆದಿವಾಸಿಗಳು ಇದನ್ನು ತಿರಸ್ಕರಿಸಿದ್ದಾರೆ.

ಕ. ಗಿರಿಜನರಿಗೆ ಈ ಹಕ್ಕುಗಳನ್ನು ಕೊಟ್ಟ ಮೇಲೆ ಅದರ ಸದ್ಬಳಕೆಯ ಬಗ್ಗೆ ಗಮನ ಹರಿಸಬೇಕು ಮತ್ತು ಅವರಿಗೆ ಜಾಗೃತಿ ಮೂಡಿಸಬೇಕು. ಭೂಮಿ ಪರಬಾರೆ ಮಾಡುವಂತಿಲ್ಲ, ಪ್ರಾಣಿ ಕೊಲ್ಲುವಂತಿಲ್ಲ, ಮರ ಕಡಿಯುವಂತಿಲ್ಲ ಎಂಬ ಜಾಗೃತಿ ಮೂಡಿಸುವುದು ಸರ್ಕಾರದ ಕೆಲಸ. ನೆಲ ಕಾಡನ್ನು ಸವರಿದರೆ ಕಾಡಿಗೆ ಒಳ್ಳೆಯದು. ಇದನ್ನು ಮಾಡುತ್ತಿಲ್ಲ. ಬದಲಿಗೆ ಆದಿವಾಸಿಗಳು ಕಾಡನ್ನು ಹಾಳು ಮಾಡುತ್ತಾರೆ. ಕಾಡಿಗೆ ಬೆಂಕಿ ಹಾಕುತ್ತಾರೆ ಎಂಬ ವದಂತಿ ಹಬ್ಬಿಸುತ್ತಿದ್ದಾರೆ.

ಖ. ಕೇವಲ ಕಾಡಿನ ತುಂಬಾ ಹುಲಿಗಳಿದ್ದರೆ ಹುಲಿಗೆ ಆಹಾರ ಇರುವುದಿಲ್ಲ. ಬರೀ ಜಿಂಕೆಗಳಿದ್ದರೆ ಕಾಡು ಅಭಿವೃದ್ಧಿಯಾಗುವುದಿಲ್ಲ. ಹಾಗಾಗಿ ಮಾಂಸಹಾರಿ ಸಸ್ಯಹಾರಿ ಪ್ರಾಣಿಗಳು ಸಮ ಪ್ರಮಾಣದಲ್ಲಿರಬೇಕು. ಇದಕ್ಕಾಗಿ ಕಾಡಿನಲ್ಲಿ ಹಣ್ಣು ಹಂಪಲು ಗಿಡಗಳು ಮತ್ತು ಹುಲ್ಲುಗಾವಲು ಎಲ್ಲವೂ ಸಮ ಪ್ರಮಾಣದಲ್ಲಿರಬೇಕು. ನೆಡುತೋಪುಗಳಿಂದ ಇದು ಸಾಧ್ಯವಿಲ್ಲ. ಇದು ಅರಣ್ಯ ಇಲಾಖೆಗೆ ಇನ್ನೂ ಅರ್ಥವಾಗಬೇಕಿದೆ. ಇಲ್ಲದಿದ್ದರೆ ಕಾಡಿನಲ್ಲಿ ಯಾವುದೇ ಅರಣ್ಯ ಉಪ ಉತ್ಪನ್ನಗಳು ದೊರೆಯದು. ಆಗ ಆದಿವಾಸಿಗಳು ಅರಣ್ಯದ ಕಡೆ ತಿರುಗಿಯೂ ನೋಡರು.

ಗ. ಕಾಡಿಗೆ ಬೆಂಕಿ ಆದಿವಾಸಿಗಳಿಂದ ಬೀಳುವುದಿಲ್ಲ. ಬದಲಾಗಿ ಗೊತ್ತಿಲ್ಲದೆ ಬೆಂಕಿ ಆಕಸ್ಮಿಕವಾಗಿ ಬೀಳಬಹುದು. ಕಾಡುಕೋಣ ರಭಸದಿಂದ ಒಡುವಾಗ ಅದರ ಗೊರಸು ಮತ್ತು ಕಲ್ಲಿನ ನಡುವೆ ತಿಕ್ಕಾಟದಿಂದ, ಒಣಗಿದ ಬಿದಿರಿನ ತಿಕ್ಕಾಟದಿಂದ, ಅಥವಾ ದ್ವೇಷದಿಂದಲೂ ಯಾರಾದರೂ ಕಾಡಿಗೆ ಬೆಂಕಿ ಹಾಕಬಹುದಾಗಿದೆ. ಆದರೆ ಇದನ್ನು ಆದಿವಾಸಿಗಳ ಮೇಲೆ ಹಾಕಲಾಗುತ್ತಿದೆ. ಇದು ಆದಿವಾಸಿಗಳನ್ನು ರೊಚ್ಚಿಗೆಬ್ಬಿಸುತ್ತಿದೆ.

**೪.೩.೧೦.೩. ಪರಿವರ್ತನಾ ಸಂಸ್ಥೆ**

ರಾಜೇಗೌಡ[೩೮] ಇವರ ಪ್ರಕಾರ

ಅ. ಅರಣ್ಯ ಹಕ್ಕುಗಳ ಕಾಯಿದೆಯನ್ನು ಸಂಸತ್ತಿನಲ್ಲಿ ದೀರ್ಘವಾಗಿ ಚರ್ಚಿಸಿ ಅರಣ್ಯ ಮತ್ತು ಆದಿವಾಸಿಗಳಿಬ್ಬರಿಗೂ ಅನುಕೂಲವಾಗಲಿ ಎಂಬ ಉದ್ದೇಶದಿಂದ ತರಲಾಯಿತು. ಏಕೆಂದರೆ ಆದಿವಾಸಿಗಳಲ್ಲದೆ ಇತರರು ಕೂಡ ಹಿಂದಿನಿಂದಲೂ ಅರಣ್ಯ ಭೂಮಿಯನ್ನು ಹಸನು ಮಾಡಿ ಸಾಗುವಳಿ ಮಾಡುತ್ತಾ ಬಂದಿದ್ದಾರೆ. ಆದರೆ ಆದಿವಾಸಿಯೇತರರು ಹಿಂದಿನ ರಾಜರ ಕಾಲದಲ್ಲಿ ಮತ್ತು ಬ್ರಿಟಿಷ್ ಆಡಳಿತದ ಸಂದರ್ಭದಲ್ಲಿ ತಾವು ಉಳುಮೆ ಮಾಡುತ್ತಿದ್ದ ಜಮೀನಿಗೆ ದಾಖಲೆಗಳನ್ನು ಸೃಷ್ಟಿಸಿ ತಮ್ಮ ಹೆಸರಿಗೆ ಹಕ್ಕು ಪತ್ರ ಮಾಡಿಸಿಕೊಂಡರು. ಆದರೆ ಆದಿವಾಸಿಗಳಲ್ಲಿ ಎಂದಿಗೂ ಸ್ವಂತ ಭೂಮಿಯ ಕಲ್ಪನೆ ಇರಲಿಲ್ಲ. ಭೂಮಿ, ಅರಣ್ಯ, ಪ್ರಾಣಿ ಸಂಪತ್ತು ಇದು ಸಮುದಾಯದ್ದು ಎಂಬ ಭಾವನೆ ಇತ್ತು. ಹಾಗಾಗಿ ಇವರು ಯಾವ ರಾಜನ ಬಳಿಯೂ ಹೋಗಲಿಲ್ಲ ಮತ್ತು ಯಾವ ವಸಹಾತು ಶಾಹಿ ಆಡಳಿತಗಾರನ ಬಳಿಯೂ ತೆರಳಿ ಭೂಮಿಯನ್ನು ಸ್ವಂತ ಮಾಡಿಕೊಳ್ಳುವ ಗೊಡವೆಗೆ ಹೋಗಲಿಲ್ಲ. ಹೀಗಾಗಿ ಅವರು ಇಂದು ತಮ್ಮ ವಾಸನೆಲೆ ಅಥವಾ ಸಾಗುವಳಿ ಭೂಮಿಗೆ ದಾಖಲೆ ಹೊದಗಿಸಲಾಗುತ್ತಿಲ್ಲ. ಆದರೆ ಅರಣ್ಯ ಇಲಾಖೆಗೆ ದಾಖಲೆ ಬೇಕು. ಇದು ದೊಡ್ಡ ಸವಾಲು.

ಆ) ಆದಿವಾಸಿಗಳನ್ನು ಸಾಮಾನ್ಯ ಜನರಂತೆ ನೋಡಲಾಯಿತು. ಮತ್ತು ಅವರಿಗೆ ಮನೆ ಅನ್ನ ಕೊಟ್ಟರೆ ಸಾಕೆಂದು ಭಾವಿಸಿ ಪರಿಸರ ನೆಪವೊಡ್ಡಿ ಕಾಡಿನಿಂದ ಹೊರ ಹಾಕಲಾಯಿತು. ನಂತರ ಗಿಡ ಮರ ಕಡಿಮೆಯಾಗುತ್ತಿವೆ ಎಂಬ ಕಾರಣಕ್ಕೆ ಪರಿಸರ ಸಮತೋಲನಕ್ಕಾಗಿ ಅರಣ್ಯ ಸಂರಕ್ಷಣಾ ಕಾಯಿದೆ ತಂದರು. ತದನಂತರದಲ್ಲಿ ಅರಣ್ಯದಲ್ಲಿ ಮರಗಿಡ ಎಷ್ಟು ಪ್ರಾಮುಖ್ಯವೂ ವನ್ಯಮೃಗಗಳೂ ಕೂಡ ಅಷ್ಟೇ ಮುಖ್ಯ ಎಂದು ತಿಳಿದು ವನ್ಯಮೃಗ ಸಂರಕ್ಷಣಾ ಕಾಯಿದೆ ತಂದರು. ಆದರೆ ಈ ಎರೆಡೂ ಕಾಯಿದೆಗಳನ್ನು ಪರಿಣಾಮಕಾರಿ ಅನುಷ್ಠಾನ ಮಾಡಿದರೂ ಅರಣ್ಯ ಕ್ಷೀಣಿಸುತ್ತಿರುವುದನ್ನು ಗಮನಿಸಿದ ಸರ್ಕಾರ ಅರಣ್ಯ ಸುಸ್ಥಿತಿಯಲ್ಲಿರಬೇಕಾದರೆ ಗಿಡ–ಮರ– ಪ್ರಾಣಿ ಎಷ್ಟು ಮುಖ್ಯವೋ ಅಷ್ಟೇ ಮುಖ್ಯ ಆದಿವಾಸಿಗಳು

ಅರಣ್ಯದಲ್ಲಿರುವುದು ಎಂಬುದನ್ನು ಅರಿಯಿತು. ಈ ಹಿನ್ನೆಲೆಯಲ್ಲಿ ಅರಣ್ಯ ಹಕ್ಕುಗಳ ಮಾನ್ಯತಾ ಕಾಯಿದೆ ತರಲಾಗಿದೆ. ಇದನ್ನು ಅರಣ್ಯ ಇಲಾಖಾ ಸಿಬ್ಬಂದಿ ಅರ್ಥಮಾಡಿಕೊಳ್ಳುತ್ತಿಲ್ಲ ಹಾಗಾಗಿ ಕಾಯಿದೆ ಅನುಷ್ಠಾನ ಸವಾಲಾಗಿದೆ.

ಇ) ಈ ಕಾಯಿದೆಯ ಪೂರ್ವ ಪೀಠಿಕೆಯಲ್ಲಿ ಹೇಳಿರುವಂತೆ, ಆದಿವಾಸಿಗಳಿಗೆ ಸ್ವಾತಂತ್ರ ಪೂರ್ವ ಅಂದರೆ ಬ್ರಿಟಿಷ್ ಇಂಡಿಯಾ ಮತ್ತು ಸ್ವಾತಂತ್ರ ಭಾರತದಲ್ಲಿ ಅನ್ಯಾಯವಾಗಿದೆ. ಈ ಐತಿಹಾಸಿಕ ಅನ್ಯಾಯವನ್ನು ಸರಿಪಡಿಸಲು ಕಾಯಿದೆಯನ್ನು ಜಾರಿಗೊಳಿಸಲಾಗುತ್ತಿದೆ. ವೈಯಕ್ತಿಕ ಭೂಮಿ ಹಕ್ಕು ನೀಡಲು ಷರತ್ತು ಏನೆಂದರೆ ಅವರ ಪಾರಂಪರಿಕ ರೀತಿಯ ವ್ಯವಸಾಯ ಪದ್ಧತಿ ಅನುಸರಿಸಬೇಕೆ ಹೊರತು ತಾವು ನಾಗರೀಕ ಸಂಪರ್ಕ ಹೊಂದಿ ಕಲಿತಿರುವ ಹೊಸ ಮಾದರಿ ಅಂದರೆ ಯಂತ್ರ ಮತ್ತು ರಾಸಾಯನಿಕ ಗೊಬ್ಬರ ಬಳಸುವಂತೆ ಇಲ್ಲ ಎಂಬುದಾಗಿದೆ. ಹಾಗೆಯೇ ಸಮುದಾಯ ಹಕ್ಕಿಗೆ ಯಾವುದೇ ವ್ಯಾಪ್ತಿಯ ಪರಿಮಿತಿ ಇಲ್ಲದೆ ಅವರು ಮೊದಲು ಯಾವ ರೀತಿ ಕಾಡೊಳಗೆ ಅಲೆದು ಕಿರು ಉತ್ಪನ್ನ ಸಂಗ್ರಹಿಸಿ ಜೀವನ ಮಾಡುತ್ತಿದ್ದರೋ ಅದಕ್ಕೆ ಅವಕಾಶ ಕಲ್ಪಿಸಲಾಗಿದೆ. ಆದರೆ ಅರಣ್ಯ ಇಲಾಖೆ ಪರಿಮಿತಿ ವಿಧಿಸುತ್ತಿದೆ. ಇದರಿಂದಾಗಿ ಆದಿವಾಸಿಗಳ ತೊತ್ತಿನ ಚೀಲ ತುಂಬುತ್ತಿಲ್ಲ. ಹಾಗಾಗಿ ಅವರು ವ್ಯಾಪಿಯನ್ನು ಮೀರಬೇಕಾಗುತ್ತದೆ. ಆಗ ಅರಣ್ಯ ಇಲಾಖೆಗೂ ಆದಿವಾಸಿಗಳಿಗೂ ಜಗಳಗಳು ಪ್ರಾರಂಭವಾಗುತ್ತವೆ. ಇದು ಕಾಯಿದೆಯ ಅನುಷ್ಠಾನದ ವೈಫಲ್ಯವಲ್ಲದೆ ಮತ್ತೇನೂ ಅಲ್ಲ. ಇಂತಹ ವೈರುದ್ಯಗಳು ಸವಾಲಾಗಿವೆ.

ಈ) ಉತ್ತರ ಭಾರತಕ್ಕೆ ಹೋಲಿಸಿದರೆ ದಕ್ಷಿಣ ಭಾರತದಲ್ಲಿ ಅನುಷ್ಠಾನ ಬಹಳ ನಿಧಾನ ಗತಿಯಲ್ಲಿ ಸಾಗಿದೆ. ತಮಿಳುನಾಡಿನಲ್ಲಿ ಪರಿಸರ ಕುರಿತು ಹೈಕೋರ್ಟನಲ್ಲಿ ಮೊಕದ್ದಮೆ ಇರುವುದರಿಂದ ಅವರು ಒಂದು ಹೆಜ್ಜೆ ಮುಂದಿಟ್ಟಿಲ್ಲ. ಆಂದ್ರದಲ್ಲಿ ಉತ್ತಮವಾಗಿ ಅನುಷ್ಠಾನವಾಗುತ್ತಿದೆ. ಕೇರಳ ಮತ್ತು ಕರ್ನಾಟಕದಲ್ಲಿ ಸಾಕಷ್ಟು ನಿಧಾನ ವಾಗುತ್ತಿದೆ. ಇದಕ್ಕೆ ಅಧಿಕಾರಿವರ್ಗದ ನಿಧಾನಗತಿ ಮನಸ್ಥಿತಿ ಕಾರಣ.

ಉ) ಬ್ರಿಟಿಷ್ ಆಡಳಿತದಲ್ಲಿ ಷೆಡ್ಯೂಲ್ ೫ ಮತ್ತು ಷೆಡ್ಯೂಲ್ ೬ ಹಾಗೂ ನಾನ್ ಷೆಡ್ಯುಲ್ ಎಂದು ಅರಣ್ಯ ಪ್ರದೇಶಗಳನ್ನು ವಿಂಗಡಿಸಿದ್ದರು. ಷೆಡ್ಯೂಲ್ ೫ ರಲ್ಲಿ ಅರೆ ಆಡಳಿತವಿತ್ತು. ಅಂದರೆ ಅವರು ವಾಸಿಸುವ ಪ್ರದೇಶದಲ್ಲಿ ಅಲ್ಪಸ್ವಲ್ಪ ಆಡಳಿತದಲ್ಲಿ ಸರ್ಕಾರ ಭಾಗಿಯಾಗುತ್ತಿತ್ತು. ಷೆಡ್ಯೂಲ್ ೬ ಪ್ರದೇಶದಲ್ಲಿ ಆದಿವಾಸಿಗಳು ಸಂಪೂರ್ಣ ಸ್ವಾತಂತ್ರ ಹೊಂದಿದ್ದರು. ನಾನ್ ಷೆಡ್ಯುಲ್ ಪ್ರದೇಶ ಸಂಪೂರ್ಣ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತ್ತು. ಆದರೆ ಇಂದು ಸಂಪೂರ್ಣ ಅರಣ್ಯ ಪ್ರದೇಶ ಅರಣ್ಯ ಇಲಾಖೆಯ ಅಧೀನಕ್ಕೊಳಪಟ್ಟಿದೆ. ಅರಣ್ಯ ಇಲಾಖೆ ಅರಣ್ಯವನ್ನು

ಬಿಟ್ಟುಕೊಡಲು ಮನಸ್ಸು ಮಾಡುತ್ತಿಲ್ಲ ಇದು ಕಾಯಿದೆಯ ಅನುಷ್ಠಾನಕ್ಕಿರುವ ದೊಡ್ಡ ಸವಾಲಾಗಿದೆ.

ಋ)೫೦ ಪ್ರತಿಶತ ಭೂಮಿ ಮರಗಳಿಂದ ಆವೃತವಾಗಿರಬೇಕೆಂಬ ಸುಪ್ರಿಮ್ ಕೋರ್ಟ ಆದೇಶವನ್ನಿಟ್ಟುಕೊಂಡು ಅರಣ್ಯ ಇಲಾಖೆ ಈ ಕಾಯಿದೆ ಅನುಷ್ಠಾನಕ್ಕೆ ಆದ್ಯತೆ ನೀಡುತ್ತಿಲ್ಲ.

ಎ) ಆದಿವಾಸಿಗಳ ಪೂರ್ವಜರು ಅರಣ್ಯವನ್ನು ಸಾವಿರಾರು ವರ್ಷ ಅನುಭವಿಸಿದ್ದಾರೆ. ಪಿತ್ರಾರ್ಜಿತ ಆಸ್ತಿ ತಮ್ಮ ವಂಶಸ್ಥರಿಗೆ ಸಿಗಬೇಕು ಎನ್ನುವ ನಿಯಮದ ಪ್ರಕಾರ ಅರಣ್ಯ ಆದಿವಾಸಿಗಳದಾಗಬೇಕು. ಆದರೆ ಅವರ ಬಳಿ ದಾಖಲೆಗಳಿಲ್ಲ. ಅನುಭವಿಸುವಾಗ ನಮಗೂ ಅವರಿಗೂ ವ್ಯತ್ಯಾಸವೆಂದರೆ ನಾವು ಸಂಪೂರ್ಣ ನಾಶ ಮಾಡುತ್ತೇವೆ. ಆದರೆ ಅವರು ಇನ್ನೂ ಕಾಡನ್ನು ಇಟ್ಟಕೊಂಡು ಅನುಭವಿಸಿದ್ದಾರೆ. ಈ ನಿಟ್ಟಿನಲ್ಲಿ ಆದಿವಾಸಿಗಳು ಅವರ ಹಕ್ಕಿಗೆ ಅರ್ಹರು. ಹಾಗಾಗಿ ಅವರ ಸೊತ್ತನ್ನು ಅವರಿಗೆ ಬಿಟ್ಟುಕೊಡುವುದು ನ್ಯಾಯಯುತವಾದುದು. ಮತ್ತು ಇವತ್ತು ಅಲ್ಪಸ್ವಲ್ಪ ಪರಿಸರ ಸಮತೋಲನ ಇದೆ ಎಂದರೆ ಅದಕ್ಕೆ ಆದಿವಾಸಿಗಳು ಕಾರಣ ಹಾಗಾಗಿ ನಾವು ಅವರಿಗೆ ಧನ್ಯವಾದ ತಿಳಿಸಬೇಕು. ಇದು ಅರಣ್ಯ ಇಲಾಖೆಯವರಿಗೆ ಅರ್ಥವಾಗದ್ದರಿಂದ ಕಾಯಿದೆ ಅನುಷ್ಠಾನ ವಿಳಂಭವಾಗುತ್ತಿದೆ.

ಏ) ಆದಿವಾಸಿಗಳು ನಮ್ಮ ಪೂರ್ವಜರು, ಸಾವಿರಾರು ವರ್ಷಗಳ ಹಿಂದೆ ಸ್ವಲ್ಪ ಜನ ಅರಣ್ಯದಿಂದ ಬಂದು ಒಂದೆಡೆ ನೆಲೆ ನಿಂತು ಜೀವನ ಮಾಡಿದರು. ಇದರಿಂದಾಗಿ ಒಂದೆಡೆ ಜನಸಂಖ್ಯೆ ಬೆಳೆದು ನಾಗರೀಕತೆ ಬೆಳೆದಿದೆ. ಆದರೆ ಕೆಲವು ಜನ ಕಾಡಿನಲ್ಲೇ ಉಳಿದಿದ್ದರಿಂದ ಅವರು ಕಾಡಿನ ಸಂಸ್ಕೃತಿಯನ್ನು ಉಳಿಸಿಕೊಂಡಿದ್ದಾರೆ. ನಾವು ಅದಕ್ಕೆ ಗೌರವ ಮತ್ತು ಮನ್ನಣೆ ನೀಡಬೇಕು. ಅವರಿಗೂ ಬದುಕಲು ಅವಕಾಶ ನೀಡಬೇಕು. ಆದರೆ ಬಂಡವಾಳಶಾಹಿಗಳಿಗೆ ಇದು ಅರ್ಥವಾಗದು. ಇದು ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನಕ್ಕಿರುವ ಮತ್ತೊಂದು ದೊಡ್ಡ ಸವಾಲು.

ಐ) ಆದಿವಾಸಿ ತಳಿ ಉಳಿಯ ಬೇಕಾಗಿದೆ ಏಕೆಂದರೆ ಅವರಲ್ಲಿ ತಮ್ಮದೇ ಆದ ವಿಶೇಷ ದೈಹಿಕ ಶಕ್ತಿ ಮತ್ತು ಚೈತನ್ಯ ಇದೆ. ಆದರೆ ಸ್ವಾತಂತ್ರ್ಯಾನಂತರ ಆದಿವಾಸಿಗಳು ನಾಗರೀಕ ಸಮಾಜದ ಸಂಪರ್ಕ ಹೊಂದಿ ತಮ್ಮ ಮೂಲ ಶಕ್ತಿ ಕಳೆದು ಕೊಂಡಿದ್ದಾರೆ ಇದಕ್ಕೆ ಕಾರಣ ವಿಷಯುಕ್ತ ಆಹಾರ ಮತ್ತು ಜೀವನ ಪದ್ಧತಿ. ಅಲ್ಲದೆ ಅವರಲ್ಲಿಯೂ ಕಾಡಿನ ಬಗ್ಗೆ ಕೆಲವರಿಗೆ ಜ್ಞಾನವೇ ಇಲ್ಲ. ಆದಿವಾಸಿಗಳ ಇತ್ತೀಚಿನ ತಲೆಮಾರಿನ ಕೆಲವರಿಗೆ ಕಾಡಿನ ಪ್ರಾಣಿ ಬಗ್ಗೆ ಸ್ವಲ್ಪ ಭಯ ಇದೆ. ಇದನ್ನು ಆಧಾರವಾಗಿಟ್ಟುಕೊಂಡು ಸಮುದಾಯ ಹಕ್ಕುಗಳನ್ನು ಮಾನ್ಯ ಮಾಡುವಲ್ಲಿ ವಿಳಂಭ ನೀತಿ ಅನುಸರಿಸಲಾಗುತ್ತಿದೆ.

೭) ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕವಾಗಿ ದುರ್ಬಲರಾಗಿರುವ ಇವರು ಅಲ್ಪಸಂಖ್ಯಾತರಾಗಿದ್ದಾರೆ. ಇವರನ್ನು ಪರಿಶಿಷ್ಟ ಪಂಗಡ ಎಂಬ ಒಂದು ವರ್ಗದಡಿ ಅಭಿವೃದ್ಧಿ ಮಾಡುವುದು ಕಷ್ಟ ಹಾಗಾಗಿ ಇವರಿಗೆ ಪ್ರತ್ಯೇಕ ಮೀಸಲು ಮತ್ತು ಶಿಕ್ಷಣ ವ್ಯವಸ್ಥೆ ಬೇಕಾಗಿದೆ. ಆರ್ಥಿಕ ಅಭಿವೃದ್ಧಿಗಾಗಿ ಯಾವುದೇ ಇತರೆ ಮೂಲಗಳು ಇವರಿಗೆ ಗೊತ್ತಿಲ್ಲ ಹಾಗಾಗಿ ಈ ಕಾಯಿದೆಗೆ ಆದ್ಯತೆ ನೀಡಿ ಅನುಷ್ಠಾನ ಮಾಡಬೇಕು. ಆದರೆ ಅರಣ್ಯ ಇಲಾಖೆ ಸಿಬ್ಬಂದಿ ಸರ್ಕಾರಿ ಆದೇಶ ಪಾಲಿಸುತ್ತಿಲ್ಲ ಎಂದು ಹೇಳುವುದು ಇಲ್ಲಿ ಮೂರ್ಖತನ. ಏಕೆಂದರೆ ಅರಣ್ಯ ಇಲಾಖೆ ಕೂಡ ಸರ್ಕಾರದ ಒಂದು ಭಾಗ ಹೀಗಿರುವಾಗ ಸರ್ಕಾರದ ನಿರ್ದೇಶನ ಪಾಲಿಸಬೇಕಾಗುತ್ತದೆ. ಆದರೆ ಸರಿಯಾದ ನಿರ್ದೇಶನ ಬೇಕಾಗಿದೆ. ಇದು ಸಾಧ್ಯವಾಗತ್ತಿಲ್ಲ.

೮) ಜಿಲ್ಲಾಧಿಕಾರಿಗಳು ಇಚ್ಚಾಶಕ್ತಿ ತೋರಿದರೆ ಇದು ಸಾಧ್ಯ, ಆದರೆ ಮೈಸೂರಿನಲ್ಲಿ ಯಾವ ಜಿಲ್ಲಾಧಿಕಾರಿಯೂ ಬಹಳ ದಿನ ಉಳಿಯುತ್ತಿಲ್ಲ ಇದು ಸಮಸ್ಯೆಯಾಗಿದೆ. ಎಷ್ಟೊ ಅಧಿಕಾರಿಗಳಿಗೆ ಈ ಕಾಯಿದೆ ಅರ್ಥ ಕೂಡ ಆಗಿಲ್ಲ. ಇಲಾಖೆ ಯಾವುದೇ ಇರಲಿ ಇದು ಸರ್ಕಾರದ ಕೆಲಸ ಹಾಗಾಗಿ ಇಲಾಖೆಗಳ ಮದ್ಯೆ ಇರುವ ಒಳಜಗಳ ಮತ್ತು ಪ್ರತೀಷ್ಠೆಯನ್ನು ಮದ್ಯೆ ತರಲಾಗುತ್ತಿದೆ. ಅರಣ್ಯ ಇಲಾಖೆಯ ಸಿಬ್ಬಂಧಿ, ಇತರ ಸರ್ಕಾರಿ ಇಲಾಖಾ ಅಧಿಕಾರಿಗಳಿಗೆ ಆದಿವಾಸಿ ಜನಜೀವನ ಮತ್ತು ಅವರ ಸಂಸ್ಕೃತಿ ಬಗ್ಗೆ ಜ್ಞಾನವಿದ್ದರೆ ಇಷ್ಟೆಲ್ಲಾ ಸಮಸ್ಯೆ ಆಗದು. ಜೊತೆಗೆ ರಾಜಕೀಯ ಇಚ್ಚಾಶಕ್ತಿ ಕೊರತೆ ಇದೆ.

೯) ಪುನರ್ವಸತಿ ಮಾಡುವಾಗ ಅವರು ವಾಸವಿದ್ದ ಸ್ಥಳದಲ್ಲೇ ಮಾಡಬೇಕು ಮತ್ತು ಅವರ ಸಂಬಂಧಿಕರು ಒಟ್ಟಿಗೆ ಇರುವಂತೆ ನೋಡಿಕೊಳ್ಳುವುದು ಒಳ್ಳೆಯದು. ಅದು ಬಿಟ್ಟು ನೂರಾರು ಕಿಲೋಮೀಟರ್ ದೂರದವರೆಗೆ ಅವರನ್ನು ಸ್ಥಳಾಂತರಿಸಿದರೆ ಅವರ ಸಂಸ್ಕೃತಿ ಮೇಲೆ ಕೆಟ್ಟ ಪರಿಣಾಮವಾಗಿ ಅವರು ಹೊಂದಾಣಿಕೆ ಮಾಡಿಕೊಳ್ಳುವಲ್ಲಿ ವಿಫಲರಾಗುತ್ತಾರೆ. ಇಂತಹ ವೈಫಲ್ಯತೆಗಳು ಈ ಕಾಯಿದೆಯನ್ನು ಅನುಮಾನದ ದೃಷ್ಟಿಯಿಂದ ನೋಡುವಂತೆ ಮಾಡಿವೆ.

೧೦)ಕಾಯಿದೆ ಅನುಷ್ಠಾನ ಮಾಡುವ ಅಧಿಕಾರ ಹೊಂದಿರುವವರಲ್ಲಿ ಸಂಯೋಜನೆ ಮತ್ತು ಪರಸ್ಪರ ಸಹಕಾರ ಇಲ್ಲ. ಆದಿವಾಸಿಗಳಲ್ಲಿ ಸಂಘಟನೆ ಇಲ್ಲ. ಜೀವನಕ್ಕೆ ಹೋರಾಟ ಮಾಡಬೇಕಾದ ಪರಿಸ್ಥಿತಿ. ಆದಿವಾಸಿಗಳಿಗೆ ಇದು ನಿಮ್ಮ ಆಸ್ತಿ ಎಂದು ಹೇಳುವಲ್ಲಿ ನಾವು ಸೊತಿದ್ದೇವೂ ಗೊತ್ತಿಲ್ಲ. ನಿಮಗೆ ಒಂದು ಮನೆ ಸಿಗುತ್ತೆ ಅಂದರೂ ಸಿರಿ ಪಡಲ್ಲ, ಮಕ್ಕಳು ಓದುತ್ತಾರೆ ಎಂಬುದಕ್ಕೂ ಸಂಭ್ರಮ ಪಡುವುದಿಲ್ಲ.

ಒಂದು ರೀತಿಯ ನಿರ್ಲಿಪ್ತತೆ ಆದಿವಾಸಿಗಳಲ್ಲಿ ಇದೆ. ಇದು ಕಾಯಿದೆಯ ಅನುಷ್ಠಾನಕ್ಕಿರುವ ದೊಡ್ಡ ತಡೆ.

ಅಃ)ಈ ಕಾಯಿದೆ ಅನುಷ್ಠಾನದಿಂದ ಆದಿವಾಸಿಗಳ ಮುಖಾಂತರ ಇಡೀ ಮನುಕುಲಕ್ಕೆ ಒಳ್ಳೆಯದಾಗುತ್ತದೆ. ಆದಿವಾಸಿಗಳಲ್ಲಿದ್ದ ಯಜಮಾನ ಪದ್ಧತಿ ಹಾಳಾಗಿ ಹೋಗಿರುವುದರಿಂದ ಮದ್ಯಪಾನದಂತಹ ಸಾಮಾಜಿಕ ಪಿಡುಗು ಅವರನ್ನು ಬಲಿತೆಗೆದುಕೊಂಡಿದೆ. ಒಂದು ವೇಳೆ ನಾವು ಅರಣ್ಯ ಹಕ್ಕುಗಳ ಕಾಯಿದೆಯನ್ನು ಯಶಸ್ವಿಯಾಗಿ ಜಾರಿಗೊಳಿಸಿದರೆ ಇಂತಹ ಸಮಸ್ಯೆಗಳನ್ನು ತೊಲಗಿಸಬಹುದು. ಆದಿವಾಸಿಗಳಿಗೆ ಕೇವಲ ಸಮುದಾಯ ಹಕ್ಕುಗಳನ್ನು ನೀಡಿದರೆ ಸಾಲದು, ಈಗಿನ ಕಾಲಕ್ಕೆ ತಕ್ಕಂತೆ ಅಗತ್ಯ ಸಂಗ್ರಹಣ ಕೌಶಲ್ಯ, ಅರಣ್ಯ ಕಿರು ಉತ್ಪನ್ನಗಳನ್ನು ವೃದ್ಧಿಸುವ ಕೌಶಲ್ಯಗಳನ್ನು ಸಂಬಂಧಪಟ್ಟ ಕಂದಾಯ ಇಲಾಖೆ, ಸಮಾಜ ಕಲ್ಯಾಣ ಇಲಾಖೆ ಒದಗಿಸಬೇಕು. ಆದರೆ ಇದು ಸಾಧ್ಯವಾಗುತ್ತಿಲ್ಲ.

ಕ) ಪರಿಸರಕ್ಕೆ ತೊಂದರೆಯಾಗದಂತೆ ಅರಣ್ಯವನ್ನು ಅಭಿವೃದ್ಧಿಪಡಿಸಬೇಕು. ವೈಯಕ್ತಿಕ ಹಕ್ಕು ಪ್ರಕಾರ ಭೂಮಿ ನೀಡಿದರೂ ಅಲ್ಲಿ ತೋಟಗಾರಿಕ ಬೆಳೆ ಬೆಳೆಯಲು ತರಬೇತಿ ನೀಡಿ ಸೌಲಭ್ಯ ಕಲ್ಪಿಸಿದರೆ ಅದು ಅರಣ್ಯವಾಗಿಯೇ ಉಳಿದು ಕೊಳ್ಳುತ್ತದೆ. ಮತ್ತು ಆದಿವಾಸಿಗಳ ಆದಾಯ ಹೆಚ್ಚುತ್ತದೆ. ಅಲ್ಲದೆ ಆ ೧೦ ಎಕರೆ ಜಮೀನು ಒಬ್ಬ ವ್ಯಕ್ತಿ ಅಥವಾ ಕುಟುಂಬದ ಹಿಡಿತದಲ್ಲಿರುವುದರಿಂದ ಸ್ವಂತ ಆಸ್ತಿ ಎಂಬ ಪರಿಕಲ್ಪನೆ ಬೆಳೆಯುತ್ತದೆ. ಮತ್ತು ಅದನ್ನು ಜೋಪಾನ ಮಾಡಿದರೆ ತಮ್ಮ ಮುಂದಿನ ಪೀಳಿಗೆಗೆ ಅಧಿಕಾರ ವರ್ಗಾಯಿಸಲ್ಪಡುವುದರಿಂದ ಮತ್ತಷ್ಟು ಮುತುವರ್ಜಿಯಿಂದ ಆ ನಿರ್ದಿಷ್ಟ ಪ್ರದೇಶವನ್ನು ಕಾಪಾಡುತ್ತಾರೆ. ಇದರಿಂದ ನಾವು ವೈವಿಧ್ಯಮಯ ಕಾಡನ್ನು ಮುಂದಿನ ೩೦-೪೦ ವರ್ಷಗಳಲ್ಲಿ ನಮ್ಮ ಪೀಳಿಗೆಗೆ ಕೊಡಬಹುದು. ಆದರೆ ಇಂತಹ ದೂರ ದೃಷ್ಟಿ ಅಧಿಕಾರಿ ವರ್ಗದಲ್ಲಿಲ್ಲ. ಇತರೆ ಪಾರಂಪರಿಕ ಎಂಬ ಪದ ದುರುಪಯೋಗವಾಗುತ್ತದೆ ಎಂಬುದೂ ಕೂಡ ಕಾಯಿದೆಯ ಅನುಷ್ಠಾನದ ವಿಳಂಬಕ್ಕೆ ಕಾರಣವಾಗಿದೆ.

**೪.೩.೧೦.೪. ಪ್ರತಿಭೆ**

ಪ್ರಸನ್ನ[೩೯] ಇವರ ಪ್ರಕಾರ ಕಳೆದು ಹೋದಂತಹ ಆಶಯಗಳನ್ನು ಪುನಃ ಚಿಗುರಿಸುವಂತಹ ಒಂದು ಕಾನೂನು, ಕಳೆದು ಕೊಂಡಂತಹದ್ದನ್ನು ಪುನಃ ಪಡೆಯುವ ಒಂದು ಅವಕಾಶ. ಇದನ್ನು ಎಲ್ಲರೂ ಸೇರಿ ನನಸಾಗಿಸಬೇಕಾಗಿದೆ. ಕಾಯಿದೆ ಚೆನ್ನಾಗಿದೆ. ಕಾರ್ಯದಲ್ಲಿ ಶೂನ್ಯ. ಏಕೆಂದರೆ ಸಮಾಜ ಕಲ್ಯಾಣ ಇಲಾಖೆಯವರು ಹಾಡಿಗಳಿಗೆ ಹೋಗಿ ಮಾಹಿತಿ ನೀಡಿ ಅನುಷ್ಠಾನ ಮಾಡಬೇಕಾಗಿದೆ. ಆದರೆ ಅರಣ್ಯ ಇಲಾಖೆ ಮತ್ತು ಸಮಾಜ ಕಲ್ಯಾಣ ಇಲಾಖೆ ನಡುವೆ ಸಮನ್ವಯ ಇಲ್ಲದಾಗಿದೆ. ಅಧಿಕಾರಿ ವರ್ಗ ಮತ್ತು

ರಾಜಕೀಯ ವ್ಯಕ್ತಿಗಳಲ್ಲಿ ಆದಿವಾಸಿಗಳಿಗೆ ಏನಾದರೂ ಮಾಡಲೇಬೇಕು ಎಂಬ ಮನೋಭಾವನೆ ಇಲ್ಲ. ಆದಿವಾಸಿಗಳಲ್ಲೇ ಒಡಕುಗಳಿವೆ. ಅವರಲ್ಲಿ ಒಗ್ಗಟ್ಟಿಲ್ಲ. ಸ್ವಯಂ ಸೇವಾ ಸಂಸ್ಥೆಗಳ ಬಗ್ಗೆ ಕೆಲವರು ಅಪಪ್ರಚಾರ ಮಾಡುತ್ತಾರೆ. ಆದಿವಾಸಿಗಳಿಗೆ ಅರ್ಜಿ ಭರ್ತಿ ಮಾಡಲು ತಿಳುವಳಿಕೆ ಇಲ್ಲದಾಗಿದೆ. ಸಮುದಾಯ ತುಂಡು ತುಂಡಾಗಿವೆ. ಅರಣ್ಯ ಇಲಾಖೆಯವರು ಎದುರಿಸುವ ತಂತ್ರಗಾರಿಕೆಯನ್ನು ಅನುಸರಿಸುತ್ತಾರೆ ಮತ್ತು ಅದರಲ್ಲಿ ಅವರು ಪಳಗಿದ್ದಾರೆ. ಸ್ವಯಂ ಸೇವಾ ಸಂಸ್ಥೆಗಳ ಮೇಲೂ ಮೊಕದ್ದಮೆ ದಾಖಲಿಸುತ್ತಾರೆ.

ಚಿಲಕನಳ್ಳಿ ಕಾಲೊನಿಯಲ್ಲಿ ೩ ಕುಟುಂಬಗಳಿಗೆ ಸೇರಿ ೨೦ ಎಕರೆ ಜಮೀನನ್ನು ಈ ಮೊದಲು ನೀಡಲಾಗಿದೆ ಆದರೆ ಅವರಿಗೆ ಕೊಟ್ಟಿರುವ ಜಮೀನಿಗೂ ಇವರ ವಾಸಸ್ಥಳಕ್ಕೂ ೪-೫ ಕಿಲೋಮೀಟರ್ ಇದೆ. ಅಲ್ಲದೆ ಇವರ ಜಮೀನಿನ ಪಕ್ಕ ಇರುವ ಇತರೆ ನಾಗರೀಕ ಸಮುದಾಯ ಇವರಿಗೆ ಉಳುಮೆ ಮಾಡಲು ಬಿಡುತ್ತಿಲ್ಲ. ತೊಂದರೆ ಕೊಡುತ್ತಿದ್ದಾರೆ. ಆದಿವಾಸಿಗಳಿಗೆ ಭೂಮಿ ನೀಡಿದರೆ ಅರಣ್ಯ ಕಡಿದು ಉಳುಮೆ ಮಾಡುತ್ತಾರೆ ಎಂಬ ಮನೋಭಾವ ಅರಣ್ಯ ಇಲಾಖೆಯವರಲ್ಲಿದೆ. ಆದರೆ ಕಾಯಿದೆಯಲ್ಲಿ ಎಲ್ಲೂ ಮರ ಕಡಿದು ನೆಲ ಬೋಳ ಮಾಡಿ ಉಳುಮೆ ಮಾಡಲು ಅವಕಾಶ ನೀಡಿಲ್ಲ. ಅರಣ್ಯ ನಾಶ ಆಗಿದೆ ಅಥವಾ ಅರಣ್ಯವನ್ನು ನಾವು ಕಳೆದುಕೊಳ್ಳುತ್ತಿದ್ದೇವೆ ಎಂದರೆ ಇದಕ್ಕೆ ಅರಣ್ಯ ಇಲಾಖೆಯೇ ಕಾರಣ. ಆದಿವಾಸಿಗಳು ಎಂದಿಗೂ ನಮಗೆ ಕಾರು, ಬೈಕು, ಟಿ.ವಿ, ಬೇಕು, ಕಾಂಕ್ರೀಟ್ ರಸ್ತೆ ಬೇಕು, ಮನೆ ಬೇಕು ಎಂದು ಕೇಳಿಲ್ಲ. ಬದಲಾಗಿ. ಅವರಿಗೆ ಕಾಡಿನಲ್ಲಿ ಸ್ವತಂತ್ರವಾಗಿ ಬಿಟ್ಟರೆ ಸಾಕೆಂದು ಕೇಳುತ್ತಾರೆ. ಆದಿವಾಸಿಗಳಿಗೆ ಭೂಮಿ ಕೊಟ್ಟ ಮೇಲೆ ಕೈತೋಟದ ಬಗ್ಗೆ ಮಾಹಿತಿ ಮತ್ತು ತರಬೇತಿ ನೀಡುವುದು ಒಳ್ಳೆಯದು. ಭೂಮಿಯ ಹಕ್ಕು ಪತ್ರ ಇಲ್ಲದೆ ಬದುಕು ಸಾಗಿಸುವುದು ನಿತ್ಯ ಆತಂಕದ್ದು. ಆದಿವಾಸಿಗಳ ಹೆಸರು ಬಳಸಿ ನಾಗರೀಕರು ಅರಣ್ಯ ಉಪ ಉತ್ಪನ್ನಗಳನ್ನು ತಮ್ಮ ಅನುಕೂಲಕ್ಕೆ ಬಳಸಿಕೊಳ್ಳುವ ಸಾಧ್ಯತೆ ಇದೆ. ಆದಿವಾಸಿಗಳಿರುವ ಹಾಡಿಯ ಬಳಿ ಒಂದೆರೆಡು ಮುಂದುವರೆದ ವ್ಯಾಪಾರಿ ಕುಟುಂಬಗಳು ವಾಸ ಮಾಡುತ್ತಿರುತ್ತವೆ ಅವರು ಆದಿವಾಸಿಗಳು ತಂದಂತಹ ಅರಣ್ಯ ಕಿರು ಉತ್ಪನ್ನಗಳನ್ನು ಅತೀ ಕಡಿಮೆ ಬೆಲೆಗೆ ಸಂಗ್ರಹಿಸುತ್ತಾರೆ. ಮತ್ತು ಮದ್ಯಪಾನ ಕೂಡ ಅವರಿಗೆ ಸರಬರಾಜು ಮಾಡುತ್ತಾರೆ. ಸಂಗ್ರಹಿಸಿದ ಕಿರು ಉತ್ಪನ್ನಗಳನ್ನು ಲ್ಯಾಂಪ್ಸ್‌ಗೆ ಮಾರಾಟ ಮಾಡಬೇಕೆಂದು ಇದೆ. ಆದರೆ ಎಲ್ಲಾ ಕಡೆ ಲ್ಯಾಂಪ್ಸ್ ಇಲ್ಲ. ಅರಣ್ಯ ಇಲಾಖೆಯವರು ರೇಸಾರ್ಟನವರಿಗೆ ಅರಣ್ಯ ಬಿಟ್ಟು ಕೊಡಲು ತಯಾರಿದ್ದಾರೆ. ಮತ್ತು ಹಲವು ರೆಸಾರ್ಟಗಳು ಅರಣ್ಯದಲ್ಲಿ ತಲೆ ಎತ್ತಿವೆ. ಆದರೆ ಆದಿವಾಸಿಗಳಿಗೆ ಭೂಮಿ ನೀಡಲು ಹಿಂದೇಟು ಹಾಕುತ್ತಾರೆ. ಅದಕ್ಕಾಗಿ ಅಧಿಕಾರಿ ವರ್ಗ, ಆದಿವಾಸಿ ನಾಯಕರು, ರಾಜಕೀಯ ವ್ಯಕ್ತಿಗಳ ಜೊತೆಗೆ ಮಾಧ್ಯಮ ಜೊತೆಗೂಡಿ ಕೆಲಸ ಮಾಡಿದರೆ ಅರಣ್ಯ ಹಕ್ಕುಗಳ ಕಾಯಿದೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಬಹುದು. ಆದರೆ ಇದು ಸಾಧ್ಯವಾಗುತ್ತಿಲ್ಲ. ಹಾಗಾಗಿ ಕಾಯಿದೆ ಅನುಷ್ಠಾನ ವಿಳಂಬವಾಗಿದೆ.

### ೪.೩.೧೦.೫. ಧೀನ ಬಂಧು

ಜಿ.ಎಸ್.ಜಯದೇವ[೪೦] ಇವರು ಹೇಳುವಂತೆ ಅರಣ್ಯ ಇಲಾಖೆ ಅಧಿಕಾರಿಗಳಿಗೆ ಆದಿವಾಸಿಗಳ ಪಾರಂಪರಿಕ ಜ್ಞಾನದ ಅರಿವಿಲ್ಲ. ಅಲ್ಲದೆ ಈ ಕಾಯಿದೆಯನ್ನು ಆದಿವಾಸಿಗಳ ಪರ ಎತ್ತಿಕಟ್ಟಲಾಗಿದೆ. ಇದರಿಂದ ಆದಿವಾಸಿಗಳು ಒಂದು ರೀತಿಯ ಭ್ರಮೆಯಲ್ಲಿದ್ದಾರೆ. ಇದರ ಬಗೆಗೆ ಸಂಪೂರ್ಣ ಮಾಹಿತಿಯನ್ನು ಆದಿವಾಸಿಗಳಿಗೆ ನೀಡಲಾಗಿಲ್ಲ. ಅರ್ಜಿ ಸಲ್ಲಿಸುವ ಬಗೆಗೆ ಕೆಲವರಿಗೆ ಗೊಂದಲವಿದೆ. ಅರಣ್ಯ ಭೂಮಿಯನ್ನು ಕಂದಾಯ ಭೂಮಿಯನ್ನಾಗಿ ಪರಿವರ್ತಿಸುವ ನಿರ್ದಿಷ್ಟ ನಿಯಾಮವಳಿಗಳಿಲ್ಲ. ಅರಣ್ಯ ಇಲಾಖೆ ಒಂದಕ್ಕೆ ಇಬ್ಬಗೆ ನೀತಿ ಇರುವ ಎರಡು ವಿಶಿಷ್ಟ ಕಾಯಿದೆಗಳನ್ನು ಅನುಷ್ಠಾನ ಮಾಡಲು ಸ್ಪಷ್ಟ ಆದೇಶ ಇಲ್ಲ. ಇಂತಹ ಹಲವು ಅಂಶಗಳು ಕಾಯಿದೆಯ ಪರಿಣಾಮಕಾರಿ ಅನುಷ್ಠಾನಕ್ಕೆ ತೊಡಕುಗಳಾಗಿವೆ.

### ೪.೪.ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದಲ್ಲಿನ ಪ್ರಕ್ರಿಯೆಗಳು ಮತ್ತು ಇತರ ಅಡೆತಡೆಗಳು

ಆದಿವಾಸಿಗಳು ಮತ್ತು ಇತರ ಪಾರಂಪರಿಕ ಅರಣ್ಯವಾಸಿಗಳನ್ನು ಗುರುತಿಸುವಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ಮೂಲತಃ ಮೂರು ಹಂತಗಳ ಪ್ರಕ್ರಿಯೆಯನ್ನು ಒಳಗೊಂಡಿದೆ. ಇದು ಕಾಯಿದೆಯ ಅನುಷ್ಠಾನಕ್ಕಿರುವ ಆರಂಭಿಕ ಸವಾಲು.

ಹಕ್ಕು ಸ್ಥಾಪಿಸುವ ಉಪಕ್ರಮ (ಮೊದಲ ಹೆಜ್ಜೆ) ಹಕ್ಕು ಸ್ಥಾಪಿಸುವಲ್ಲಿ ಪ್ರಮಾಣಿಸಿ ನೋಡುವುದು ಮತ್ತು ಹಕ್ಕುಗಳನ್ನು ಪ್ರಾಮಾಣಿಕರಿಸುವಲ್ಲಿನ ಕುರುಹುಗಳನ್ನು ಇದು ಒಳಗೊಂಡಿದೆ. ವೈಯಕ್ತಿಕ ಅರಣ್ಯ ಹಕ್ಕುಗಳು ಅಥವಾ ಸಮುದಾಯ ಅರಣ್ಯ ಹಕ್ಕುಗಳಿಗೆ ಹಕ್ಕು ಸಾಧಿಸಬಹುದಾಗಿದೆ. ಹಕ್ಕು ಸ್ಥಾಪಿಸುವ ಮೊದಲ ಹೆಜ್ಜೆಯಾಗಿ ಅರ್ಹ ಮತ್ತು ಆಸಕ್ತಿ ಉಳ್ಳ ವ್ಯಕ್ತಿ ಅರ್ಜಿ ಭರ್ತಿ ಮಾಡಿ ಗ್ರಾಮ ಮಟ್ಟದ ಅರಣ್ಯ ಹಕ್ಕುಗಳ ಸಮಿತಿಗೆ ಸಲ್ಲಿಸಬೇಕು.

ಈ ರೀತಿಯ ಹಕ್ಕಿಗಾಗಿ ಇಡೀ ದೇಶದೆಲ್ಲೆಡೆ ಸಾಮಾನ್ಯ ವ್ಯವಸ್ಥೆ ಇದೆ. ಆದರೆ ಯಾರು ಹಕ್ಕು ಸ್ಥಾಪಿಸಲು ಬಯಸುತ್ತಾರೋ ಅವರಿಗೆ ಇದರ ಅರಿವಿನ ಅಗತ್ಯವಿದೆ. ಆದರೆ ಈ ಕಾಯಿದೆ ಅನುಷ್ಠಾನದ ಸಂದರ್ಭದಲ್ಲಿ ಅನಕ್ಷರಸ್ಥರು, ಅಪಾಯದ ಅಂಚಿನಲ್ಲಿರುವವರು, ದೀನ ದುರ್ಬಲರು, ಶಕ್ತಿಹೀನ ಸಮುದಾಯಗಳನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು. ಈ ಸಮುದಾಯಗಳಿಗೆ ಇದರ ಬಗ್ಗೆ ಅರಿವು ಮೂಡಿಸದಿದ್ದರೆ ಪ್ರಯತ್ನ ವಿಫಲವಾಗುತ್ತದೆ. ಅವರು ತಮ್ಮ ಹಕ್ಕು ಸ್ಥಾಪಿಸುವಲ್ಲಿ ಸಹಾಯ ಮತ್ತು ಸಹಕಾರ ನೀಡಬೇಕು. ರಾಜ್ಯ ಸರ್ಕಾರಗಳು ತನ್ನ ಅಧೀನದ ಸಮೂಹ ಮಾಧ್ಯಮ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಮುಖಾಂತರ ಈ ಕಾಯಿದೆ ಕುರಿತು ಜಾಗೃತಿ/ಅರಿವು ಮೂಡಿಸುವುದು ಅಗತ್ಯವಿದೆ. ಆದರೆ ಇದು ಆಗುತ್ತಿಲ್ಲ.

ಭಾರತೀಯ ಅರಣ್ಯ ಸರ್ವೇಕ್ಷಣಾಲಯದ (ಫಾರೆಸ್ಟ್ ಸರ್ವೆ ಆಫ್ ಇಂಡಿಯಾ) ಮುಖಾಂತರ ಸರ್ಕಾರ ಅರಣ್ಯದೊಳಗಿನ ಮತ್ತು ಅರಣ್ಯದಂಚಿನಲ್ಲಿ ಎಷ್ಟು ಗ್ರಾಮಗಳಿವೆ ಎಂಬ ಮಾಹಿತಿಯನ್ನು ರಾಜ್ಯ ಸರ್ಕಾರಗಳಿಗೆ ಹೊದಗಿಸಬೇಕು. ಹಾಗೆಯೇ ರಾಜ್ಯ ಸರ್ಕಾರಗಳು ಕ್ರಿಯಾಯುಕ್ತವಾಗಿ ವೈಯಕ್ತಿಕ ಅರಣ್ಯ ಹಕ್ಕುಗಳನ್ನು ಮತ್ತು ಸಮುದಾಯ ಹಕ್ಕುಗಳನ್ನು ಸಂಬಂಧ ಪಟ್ಟವರಿಗೆ ಹೊದಗಿಸಬೇಕು. ಈ ರೀತಿಯಾಗಿ ಸಕ್ಸೆನಾ ಸಮಿತಿ ಶಿಫಾರಸ್ಸು ಮಾಡಿದೆ.

ರಾಜ್ಯ ಸರ್ಕಾರ ಕೂಡ ಕಾನೂನಿನ ಪ್ರಕಾರ ಅರ್ಹ ಫಲಾನುಭವಿಗಳ ಪಟ್ಟಿ ತಯಾರಿಸಿ ಅವರಿಗೆ ನೀಡಬೇಕಾದ ಸವಲತ್ತುಗಳನ್ನು ದೊರಕಿಸಿಕೊಡಬೇಕು. ರಾಜ್ಯ ಆಡಳಿತ ಯಂತ್ರವು ಅರಣ್ಯ ಹಕ್ಕುಗಳ ಕಾಯಿದೆಗೆ ಸಂಬಂಧ ಪಟ್ಟ ಅಗತ್ಯ ದಾಖಲೆಗಳನ್ನು ಸೃಷ್ಟಿಸಿ ಕಾನೂನಾತ್ಮಕ ಅರ್ಹ ಫಲಾನುಭವಿಗಳ ಮನೆ ಬಾಗಿಲಿಗೆ ತಲುಪಿಸುವ ಜವಾಬ್ದಾರಿಯನ್ನು ಹೊಂದಿದೆ. ಈ ನಿಟ್ಟಿನಲ್ಲಿ ನಾಗರೀಕ ಸಂಘಟನೆಗಳು ಸೃಜನಾತ್ಮಕ ಮತ್ತು ಕ್ರಿಯಾತ್ಮಕ ನಡೆಯನ್ನು ಅನುಸರಿಸಬೇಕು. ಇದನ್ನು ಜಾಗೃತಿ ಕಾರ್ಯಕ್ರಮಗಳು ಹಾಗೂ ಸ್ಥಳೀಯ ಭಾಷೆಯಲ್ಲಿ ಭಿತ್ತಿ ಪತ್ರ ಹಂಚುವ ಮೂಲಕ ಮಾಡಬೇಕು. ಇದೂ ಕೂಡ ಸಾಧ್ಯವಾಗುತ್ತಿಲ್ಲ.

ಗ್ರಾಮ ಸಭಾ, ಉಪವಿಭಾಗ ಮಟ್ಟ, ಜಿಲ್ಲಾ ಮಟ್ಟದ ಅಧಿಕಾರಿಗಳು ಇದಕ್ಕೆ ಪೂರಕ ಪುರಾವೆಗಳ ಆಧಾರದ ಮೇಲೆ ದಾಖಲಾತಿ ಸೃಷ್ಟಿಸಿ ಸರ್ಕಾರಿ ಆಡಳಿತ ಯಂತ್ರದೊಂದಿಗೆ ವಕಾಲತ್ತು ವಹಿಸುವುದು. ಸಕ್ಸೇನಾ ಸಮಿತಿ ಗುರುತಿಸಿರುವಂತೆ ಅರಣ್ಯ ದಾಖಲೆಗಳು, ನಕಾಶೆಗಳು ಮತ್ತು ಕೆಲಸದ ಯೋಜನೆಗಳು ಯಾವುವೂ ಅರಣ್ಯ ಹಕ್ಕು ಸಮಿತಿಗೆ ಲಭ್ಯವಿಲ್ಲ. ಇವುಗಳು ಸುಲಲಿತವಾಗಿ ದೊರೆಯುವಂತೆ ಮಾಡಬೇಕು ಎಂಬುದು ಸಮಿತಿ ಆಶಯ.

ಸಕ್ಸೇನಾ ಸಮಿತಿ ಶಿಫಾರಸ್ಸು ಮಾಡಿದಂತೆ ಸರಳವಾಗಿ ಹಕ್ಕು ಚಲಾಯಿಸುವುದನ್ನು ಹೇಗೆ ಕಡತ ತಯಾರಿಸಬೇಕು ಎಂಬ ಮಾರ್ಗದರ್ಶಿ ಸೂತ್ರ ನೀಡಿದೆ. ಇದು ಸ್ಥಳೀಯ ಭಾಷೆಯಲ್ಲಿದ್ದು ಸಮಗ್ರವಾಗಿ ಮಾಹಿತಿಯನ್ನು ಒಳಗೊಂಡಿರಬೇಕು ಮತ್ತು ಯಾರು ಇದಕ್ಕೆ ಅರ್ಹರು ಮತ್ತು ಯಾವ ಯಾವ ಕಾನೂನಾತ್ಮಕ ಪುರಾವೆಗಳು/ಸಾಕ್ಷಿಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು ಎಂಬ ಮಾಹಿತಿ ನೀಡಬೇಕು ಎಂಬುದನ್ನು ಸೂಚಿಸಿದೆ. ಆದರೆ ಕಾಯಿದೆ ಅನುಷ್ಠಾನ ಮಾಡುತ್ತಿರುವವರು ಇದರ ಕಡೆ ಗಮನ ಹರಿಸಿಲ್ಲ.

ಗ್ರಾಮ ಸಭಾ/ಅರಣ್ಯ ಹಕ್ಕು ಸಮಿತಿಯಲ್ಲಿ ಕ್ಲೇಮಿಗೆ ಒಂದು ಸಾರಿ ಪ್ರಕ್ರಿಯೆ ಪ್ರಾರಂಭಗೊಂಡ ನಂತರ ಅದಕ್ಕೆ ಸರಿಯಾದ ದಾಖಲೆಗಳನ್ನಿಡುತ್ತಾ ಸಾರ್ವಜನಿಕವಾಗಿ ಮಾಹಿತಿ ದೊರೆಯುವಂತೆ ನೋಡಿಕೊಳ್ಳಬೇಕಾಗುತ್ತದೆ. ಯಾವುದೇ ಬದಲಾವಣೆ ಇದ್ದರೂ ಅದು ಗ್ರಾಮ ಸಭಾ ಅಥವಾ ಅರಣ್ಯ ಹಕ್ಕು ಸಮಿತಿಯಲ್ಲಿ ನಡೆಯಬೇಕು.

ಸಕ್ಸೇನಾ ವರದಿ ಹೇಳುವಂತೆ ಅರ್ಜಿಯೊಂದಿಗೆ ವಿಶೇಷ ತಂತ್ರಜ್ಞಾನಗಳೊಂದಿಗೆ ಸರ್ವೆಮಾಡಿದ ಮಾಹಿತಿ ಲಗತ್ತಿಸುವುದು. ರಿಮೋಟ್ ಸೆನ್ಸಿಂಗ್, ಗ್ಲೋಬಲ್ ಪೋಷೆಸಿಂಗ್ ಸಿಸ್ಟಮ್, ಮತ್ತು ಜಿಯೋಗ್ರಫಿಕ್ ಇನ್ಪರ್ಮೇಶನ್ ಸಿಸ್ಟಮ್ ಇವುಗಳು ನಿಕರವಾದ ಗಡಿ ಗುರುತಿಸಿ ನೈಜ ಭೌತಿಕ ಪರಿಸ್ಥಿತಿ ಅರಿಯಬಹುದು. ಜೊತೆಗೆ ಪಾರದರ್ಶಕ ಮತ್ತು ರಕ್ಷಣಾಕ್ರಮ ಅನುಸರಿಸಲು ಸಹಾಯವಾಗುತ್ತದೆ. ಹಲವು ರಾಜ್ಯಗಳು ಗ್ಲೋಬಲ್ ಪೋಷೆಸಿಂಗ್ ಸಿಸ್ಟಮ್ ತಾಂತ್ರಿಕತೆಯನ್ನು ಉಪಯೋಗಿಸಿವೆ. ಮಹಾರಾಷ್ಟ್ರ ಮಾತ್ರ ರಿಮೋಟ್ ಸೆನ್ಸಿಂಗ್, ಗ್ಲೋಬಲ್ ಪೋಷೆಸಿಂಗ್ ಸಿಸ್ಟಮ್, ಮತ್ತು ಜಿಯೋಗ್ರಫಿಕ್ ಇನ್ಪರ್ಮೇಶನ್ ಸಿಸ್ಟಮ್ ಈ ಮೂರೂ ತಾಂತ್ರಿಕತೆಯನ್ನು ಬಳಸಿದೆ. ಇದೆ ರೀತಿ ಇಡೀ ದೇಶದಲ್ಲಿ ಮೂರೂ ಪದ್ಧತಿಗಳನ್ನು ಬಳಸಿದರೆ ಒಳ್ಳೆಯದು ಎಂದು ಸಕ್ಸೇನಾ ಅಭಿಪ್ರಾಯಪಡುತ್ತಾರೆ. ಆದರೆ ಎಲ್ಲಾ ಕಡೆ ಇದನ್ನು ಪಾಲಿಸುತ್ತಿಲ್ಲ. ಇದು ಕಾಯಿದೆಯ ಅನುಷ್ಠಾನದ ವಿಳಂಭಕ್ಕೆ ಮತ್ತೊಂದು ಕಾರಣವಾಗಿದೆ. ಈ ನಿಟ್ಟಿನಲ್ಲಿ ನೋಡಿದಾಗ ಕರ್ನಾಟಕದ ಮೈಸೂರು ಮತ್ತು ಚಾಮರಾಜ ನಗರ ಜಿಲ್ಲೆಗಳಲ್ಲಿ ಇದನ್ನು ಬಳಸುವುದು ಅವಶ್ಯಕ.

ಒಂದು ಸಾರಿ ಗ್ರಾಮ ಸಭಾ ಮತ್ತು ಅರಣ್ಯ ಹಕ್ಕು ಸಮಿತಿಯಲ್ಲಿ ಕ್ಲೇಮಿನ ಅರ್ಜಿ ಪರಿಶೀಲನೆ ನಂತರ ಅದು ಗ್ರಾಮಸಭಾ ನಡಾವಳಿಯಲ್ಲಿ ಪಾಸಾಗುತ್ತದೆ. ನಂತರ ಅದು ಉಪ–ವಿಭಾಗ ಸಮಿತಿ ಮಟ್ಟಕ್ಕೆ ಹೋಗುತ್ತದೆ. ಅಲ್ಲಿ ಪರಿಶೀಲನೆ ನಂತರ ಜಿಲ್ಲಾ ಮಟ್ಟದ ಸಮಿತಿಗೆ ಹೋಗುತ್ತದೆ. ಮತ್ತೊಮ್ಮೆ ಎಲ್ಲವನ್ನೂ ಪರಿಶೀಲಿಸಿ ಕಾಯಿದೆಗೆ ವಿರೋಧವಾಗುವಂತಹ ಅಂಶ ಇದ್ದರೆ ಒಂದು ನಿಗಧಿತ ಸಮಯ ನೀಡಿ ಪುನಃ ಪರಿಶೀಲಿಸಲು ವಾಪಸ್ಸು ಕಳಿಸಲು ಅವಕಾಶ ಇದೆ. ಎಲ್ಲವೂ ಸರಿ ಇದ್ದರೆ ಅರ್ಜಿದಾರರಿಗೆ ಅದನ್ನು ಪೂರೈಸಬೇಕು. ಅಲ್ಲದೆ ಮಧ್ಯಂತರದಲ್ಲಿ ಎಲ್ಲಾದರೂ ಮೋಸವಾಗುವಂತಹ ಸಂದರ್ಭ ಇರುವುದರಿಂದ ಪ್ರತಿ ಹಂತದ ಮಾಹಿತಿ ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಆದರೆ ಇದನ್ನು ಮಾಡುತ್ತಿಲ್ಲ.

ಹೀಗೆ ಹಲವು ಕಾರಣಗಳು ಅರಣ್ಯ ಹಕ್ಕುಗಳ ಕಾಯಿದೆಯ ಪರಿಣಾಮಕಾರಿ ಅನುಷ್ಠಾನಕ್ಕೆ ಸವಾಲುಗಳಾಗಿವೆ.

**ಉಪಸಂಹಾರ**

ಯಾವುದೇ ಜನಾಂಗವನ್ನು ಅಭಿವೃದ್ಧಿ ಮಾಡುತ್ತೇವೆ ಎಂದು ಹೊರಟಾಗ ಮೊದಲು ಅಭಿವೃದ್ಧಿ ಎಂದರೇನು? ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಬೇಕು ಜೊತೆಗೆ ಆ ಜನಾಂಗದ ಸಂಸ್ಕೃತಿ ಏನು? ಭಾಷೆ ಯಾವುದು? ಬದುಕುವ ವಿಧಾನ ಹೇಗೆ? ಇವುಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ನಗರದ ಜನ ರೆಸಾರ್ಟಗಳಿಗೆ ಬಂದು ಉತ್ತಮ ಗಾಳಿ ನಿಶ್ಯಬ್ದ ವಾತವರಣದಲ್ಲಿ ಬದುಕಲು ಬಯಸುತ್ತಾರೆ. ಅಂತದ್ದರಲ್ಲಿ ಅಲ್ಲಿಯೇ ಹುಟ್ಟಿ ಬೆಳೆದ

ಸಮುದಾಯವನ್ನು ಬೇರೆಡೆ ವರ್ಗಾಯಿಸಿ, ಸಾಲಾಗಿ ಮನೆ ಕಟ್ಟಿ ಕೊಟ್ಟರೆ ಅದು ಅವರ ಜೀವನ ಕ್ರಮಕ್ಕೆ ವಿರುದ್ಧವಾದದ್ದು. ಅವರ ಸ್ವಾಭಿಮಾನಕ್ಕೆ ಅಪಮಾನವಾಗುವಂತಹ ಬದುಕನ್ನು ಅವರು ಇಷ್ಟಪಡುವುದಿಲ್ಲ. ಅವರಿಗೆ ಕಾಡೇ ಸ್ವರ್ಗ. ಪುನರ್ವಸತಿ ಎಂದರೆ ಒಂದಷ್ಟು ಕುದುರೆ ಲಾಯದಂತಹ ಮನೆಗಳನ್ನು ಕಟ್ಟಿಕೊಟ್ಟು, ಒಂದು ಸಮುದಾಯ ಭವನ, ರಸ್ತೆ, ಆಶ್ರಮ ಶಾಲೆ ಕಟ್ಟಿಸಿ ಕೊಟ್ಟು ಪುನರ್ವಸತಿ ಮಾಡಿದ್ದೇವೆ ಎಂದರೆ ಸಾಲದು. ಆದಿವಾಸಿಗಳು ಪರಿಸರ ಸ್ನೇಹಿ ಜೀವನ ನಡೆಸುತ್ತಿದ್ದರು, ಉತ್ತಮಗಾಳಿ, ಸೂರ್ಯ ಚಂದ್ರರ ಬೆಳಕು, ಹಕ್ಕಿಗಳ ಕಲರವ, ಅಮೃತದಂತಹ ಜಲಧಾರೆ, ಆರೋಗ್ಯಪೂರ್ಣ ಆಹಾರ, ಗಡ್ಡೆ ಗೆಣಸು, ಜೇನು, ಹಣ್ಣು ಹಂಪಲು, ಗಿಡಮೂಲಿಕೆ ಇವುಗಳನ್ನು ಬಳಸಿ ಬದುಕುತ್ತಿದ್ದರು ಅಭಿವೃದ್ಧಿ ಹೆಸರಿನಲ್ಲಿ ನಾವು ಇವುಗಳನ್ನೆಲ್ಲಾ ಕಿತ್ತುಕೊಂಡಿದ್ದೇವೆ. ಹಾಗಾಗಿ ಇದನ್ನು ಪುನರ್ನಿರ್ಮಿಸುವ ಅವಶ್ಯಕತೆ ಇದೆ. ಅರಣ್ಯದಲ್ಲಿ ವಾಸಿಸುತ್ತಿರುವ ಆದಿವಾಸಿ ಜನಾಂಗದವರಿಗೆ ಬದುಕಲು ಆಸರೆ ನೀಡುತ್ತಿರುವುದೇ ಕಾಡು. ಅಲ್ಲಿ ಸಿಗುವ ನೆಲ್ಲಿಕಾಯಿ, ಜೇನು, ಸೀಗೆಕಾಯಿ, ರಾಳ, ಅಂಟುವಾಳ, ಸೊಪ್ಪು, ಗೆಡ್ಡೆ, ಗೆಣಸು ಮತ್ತು ಇತರ ಹಣ್ಣು ಹಂಪಲನ್ನು ಶೇಖರಿಸಿ, ಮಾರಾಟ ಮಾಡಿ ಬಂದ ಹಣವೇ ಅವರ ಜೀವನಕ್ಕೆ ಆಧಾರ. ವನ್ಯಜೀವಿ ಧಾಮಗಳಲ್ಲಿ ಈ ಅರಣ್ಯ ಉಪ ಉತ್ಪನ್ನಗಳನ್ನು ಶೇಖರಿಸಬಹುದಾಗಿದೆ. ಆದರೆ, ಒಮ್ಮೆ ರಾಷ್ಟ್ರೀಯ ಉದ್ಯಾನವನ, ಅಭಯಾರಣ್ಯ ಹಾಗೂ ಹುಲಿ ಯೋಜನೆ ಎಂಬುದು ಘೋಷಣೆಯಾದ ನಂತರ ಆ ಪ್ರದೇಶದ ಕಾಡಿನಲ್ಲಿ ಲಭ್ಯವಿರುವ ಅರಣ್ಯ ಉಪ ಉತ್ಪನ್ನಗಳನ್ನು ಜನರು ಸಂಗ್ರಹಿಸಿ ಮಾರಾಟ ಮಾಡುವಂತಿಲ್ಲ. ಇಂತಹ ಅನ್ಯಾಯವನ್ನು ಸರಿಪಡಿಸಲು ಜಾರಿಗೆ ತಂದ ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದ ಹಲವು ಸವಾಲುಗಳನ್ನು ಈ ಮೇಲೆ ಚರ್ಚಿಸಲಾಗಿದೆ. ಮುಖ್ಯವಾಗಿ ಅರಣ್ಯ ಇಲಾಖೆ ಸಿಬ್ಬಂಧಿಗಳ ಬೇಜವಾಬ್ದಾರಿತನ ಮತ್ತು ಅತಿರೇಕತೆ. ಸಮಾಜ ಕಲ್ಯಾಣ ಇಲಾಖೆಯ ಅಸಾಯಕತೆ. ಲೋಕೋಪಯೋಗಿ ಮತ್ತು ವಿದ್ಯುತ್ ಮಂಡಳಿಗಳ ಜಾರಿಕೊಳ್ಳುವಿಕೆ. ಇವು ಕಾರಣಗಳಾಗಿದ್ದು ಇವುಗಳಿಗೆ ಮುಂದಿನ ಅಧ್ಯಾಯದಲ್ಲಿ ಪರಿಹಾರಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

**ಕೊನೆ ಟಿಪ್ಪಣಿ:**

೧. ಪಾಂಡುರಂಗ ಹೆಗಡೆ, *ಆಸರೆ ತಪ್ಪಿಸುವ ಅಭಯಾರಣ್ಯ*, ವಿಜಯ ಕರ್ನಾಟಕ, ೧೯ ಅಕ್ಟೋಬರ್ ೨೦೧೩, ಸಂಪುಟ ೧೪, ಸಂಚಿಕೆ ೨೯೯, ಪುಟ ೮.

೨. ಅದೇ.

೩. ಬೋರಲಿಂಗಯ್ಯ.ಹಿ.ಚಿ., *ಅರಣ್ಯದ ನಡುವೆ ಆಧ್ಯಾತ್ಮ ಮತ್ತು ಅಟ್ಟಹಾಸ*, ಬುಡಕಟ್ಟು ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ-೫, ಸಂಚಿಕೆ-೨, ೨೦೦೮, ಪುಟ ೦೨.

೪. ಪಾಂಡುರಂಗ ಹೆಗಡೆ, *ಆಸರೆ ತಪ್ಪಿಸುವ ಅಭಯಾರಣ್ಯ*, ವಿಜಯ ಕರ್ನಾಟಕ, ೧೯ ಅಕ್ಟೋಬರ್ ೨೦೧೩, ಸಂಪುಟ ೧೪, ಸಂಚಿಕೆ ೨೯೯, ಪುಟ ೮.

೫. ಪ್ರಜಾ ವಾಣಿ, ೨೭ ಸೆಪ್ಟೆಂಬರ್ ೨೦೧೨, ಪುಟ ೦೭.

೬. ಪ್ರವೀಣ್ ಭಾರ್ಗವ್, ವ್ಯವಸ್ಥಾಪಕ ಟ್ರಸ್ಟಿ, ವೈಲ್ಡ್‌ಲೈಫ್ ಫಸ್ಟ್, ಪ್ರಜಾ ವಾಣಿ, ೨೭ ಸೆಪ್ಟೆಂಬರ್ ೨೦೧೨,

೭. ದೀಪಕ್ ಶರ್ಮ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ, ಪ್ರಜಾ ವಾಣಿ, ೨೭ ಸೆಪ್ಟೆಂಬರ್ ೨೦೧೨.

೮. ಶಾಂತಿ, ಕೊಳಂಗೇರಿ, *ನಿಟ್ಟೂರು ಗ್ರಾಮ ಪಂಚಾಯತ್*, ಪ್ರಜಾ ವಾಣಿ, ೨೭ ಸೆಪ್ಟೆಂಬರ್ ೨೦೧೨, ಪುಟ ೦೭.

೯. ಜಿ.ಎಸ್. ರಾಜೇಗೌಡ, ಬುಡಕಟ್ಟು ಜನರ ಸಮಸ್ಯೆಗಳು, *ಆದಿವಾಸಿ ಸಮುದಾಯಗಳ ಬದುಕು-ಬವಣೆ*, ಸಂಪಾದಕರು: ಡಾ.ಸಿ. ಪಾರ್ವತಮ್ಮ ಮತ್ತು ಜಿ.ಎಸ್. ರಾಜೇಗೌಡ, ಗ್ರಾಮೀಣ ಮತ್ತು ಆದಿವಾಸಿ ಅಭಿವೃದ್ಧಿ ಸಂಶೋಧನಾ ಕೇಂದ್ರ,

೧೦. ಹಿ.ಚಿ.ಬೋರಲಿಂಗಯ್ಯ. ಹಿ.ಚಿ., ಅಭಿವೃದ್ಧಿಯ ಬಹುಮುಖತೆ, ಆದಿವಾಸಿ ಆಖ್ಯಾನ, ಸಂ. ಎ.ಎಸ್.ಪ್ರಭಾಕರ್.ಸಿದ್ಧಾರ್ಥ ಪ್ರಕಾಶನ, ೨೦೦೮, ಪುಟ ಸಂಖ್ಯೆ ೪೭೩-೪೭೪, "ನಮ್ಮ ದೇಶದ ಬುಡಕಟ್ಟು ಸಮುದಾಯಗಳನ್ನು ದುಡಿಯುವವರು ಅಥವಾ ಕೂಲಿಕಾರರು ಎಂದು ಪರಿಗಣಿಸಲಾಯಿತೇ ವಿನಹ ಅವರು ಕೂಡ ಉತ್ಪಾದಕರು ಎಂಬ ದೃಷ್ಟಿಯಿಂದ ನೋಡಲೇ ಇಲ್ಲ ಎಂಬುದು ವಿಪರ್ಯಾಸ. ಅವರ ಉತ್ಪಾದನಾ ಚಟುವಟಿಕೆಗಳನ್ನು ನಿರ್ಲಕ್ಷಿಸಿದ್ದಲ್ಲದೇ ಆಧುನಿಕ ಅಭಿವೃದ್ಧಿ ಪರಂಪರೆಯಲ್ಲಿ ಅವರು ಒಂದು ಹೊರೆಯಾಗಿ ಪರಿಣಮಿಸಿದುದು ಇನ್ನೊಂದು ದುರಂತ. ನಮ್ಮ ಸ್ವಾತಂತ್ರ್ಯೋತ್ತರ ಆಡಳಿತ ಅರಣ್ಯವನ್ನು ಒಂದು ಉತ್ಪಾದನಾ ಕ್ಷೇತ್ರ ಎಂದು ಪರಿಗಣಿಸಿತು. ಆದರೆ ಅದನ್ನು ಸಾವಿರಾರು ವರ್ಷಗಳಿಂದ ಕಾಪಾಡಿಕೊಂಡು ಬಂದಿದ್ದ ಅದರೊಳಗಿನ ಬುಡಕಟ್ಟು ಸಮುದಾಯಗಳನ್ನು ಅರಣ್ಯಕ್ಕೆ ಮಾರಕ ಎಂದು ಭಾವಿಸಿತಲ್ಲದೆ, ಅವರನ್ನು ಅರಣ್ಯದಿಂದ ಓಡಿಸುವ ಪ್ರಯತ್ನಗಳನ್ನು ಕೂಡ ಮಾಡಿತು. ಸರ್ಕಾರಿ ಒಡೆತನದ ಅರಣ್ಯ ಇಲಾಖೆ ಅದರೊಳಗೆ ನೌಕರಶಾಹಿಯನ್ನು ಹುಟ್ಟಿಹಾಕಿತು. ಆ ನೌಕರಶಾಹಿ ಭೂಮಾಲೀಕರು ಮತ್ತು ಬಂಡವಾಳಶಾಹಿಗಳ ಪರವಾಗಿದ್ದ ಕಾರಣ ಕಳೆದ ಐವತ್ತು ವರ್ಷಗಳಲ್ಲಿ ಶೇಕಡಾ ಐವತ್ತಕ್ಕಿಂತ ಹೆಚ್ಚು ಅರಣ್ಯವನ್ನು ನಾವು ಕಳೆದುಕೊಂಡೆವು. ಅರಣ್ಯದ ಪಾಲಕರೂ ಅದರ ಉತ್ಪಾದಕರೂ ಆಗಿದ್ದ ಗಿರಿಜನರನ್ನು ಕಡೆಗಣಿಸಿದ್ದೇ ಅರಣ್ಯ ನಾಶಕ್ಕೆ ಕಾರಣ. ಇಂಥ ಅಧಿಕಾರಿಶಾಹಿ ನೀತಿಗಳಿಂದ ನಾವು ಕಳೆದುಕೊಂಡಿದ್ದು ಕೇವಲ ಅರಣ್ಯವನ್ನಲ್ಲ, ಆ ಅರಣ್ಯವನ್ನು ಕುರಿತಾದ ಇಡೀ ಒಂದು ಜ್ಞಾನ ಪರಂಪರೆಯನ್ನು. ನಮ್ಮ ಪಶ್ಚಿಮ ಘಟ್ಟಗಳು ಮತ್ತು ಕರಾವಳಿಯ ಉದ್ದಕ್ಕೆ ಹಬ್ಬಿ ಹರಡಿದ್ದ ಆ ನಿಬಿಡಾರಣ್ಯದಲ್ಲಿ ಅದೆಷ್ಟು ಬಗೆಯ ಔಷಧಿ ಸಸ್ಯಗಳಿದ್ದವು, ಅದೆಷ್ಟು ಬಗೆಯ ಜೀವರಾಶಿಗಳಿದ್ದವು, ಆ ಇಡೀ ಜೀವಜಾಲದ ಅರಿವಿದ್ದ ಗಿರಿಜನರನ್ನು ಸಕ್ರಿಯವಾಗಿ ಬಳಸಿಕೊಂಡಿದ್ದರೆ ಆ ಅರಣ್ಯವೂ ಇರುತ್ತಿತ್ತು, ಆ ಜ್ಞಾನ ಸಂಪತ್ತೂ ಇರುತ್ತಿತ್ತು."

೧೧. ಅದೇ. ಪುಟ ಸಂಖ್ಯೆ ೪೭೫. ಆದರೆ "ಸ್ವಾತಂತ್ರ್ಯಾ ನಂತರ ನಮ್ಮ ಪ್ರಜಾಪ್ರಭುತ್ವದಲ್ಲಿ ನವವಸಹಾತುಗಳಾಗಿ ಅರಣ್ಯವನ್ನು ತಮ್ಮ ಅಧಿಕಾರಿಶಾಹಿ ತೆಕ್ಕೆಗೆ ತೆಗೆದುಕೊಂಡ ಸರ್ಕಾರ ಅಥವಾ ಅರಣ್ಯ ಇಲಾಖೆ ಮಾಡಿದ್ದಾದರೂ ಏನು? ಕೃಷಿ ಮೂಲದ ಬುಡಕಟ್ಟುಗಳನ್ನು ಖಾತೆ-ಪಟ್ಟಾ-ಪಹಣಿ ಇಲ್ಲ ಎಂದು ಹೊರಹಾಕಿದರು. ಜೇನು, ಬಿದಿರು, ಬೆತ್ತ, ಮುಂತಾಗಿ ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸಿ ಬದುಕುತ್ತಿದ್ದ ಅರೆ ಅಲೆಮಾರಿ ಸ್ವರೂಪದ ಬುಡಕಟ್ಟುಗಳನ್ನು ಭದ್ರತೆಯ ಕಾರಣ ಕೊಟ್ಟು ಕಾಡಿನಿಂದ ಆಚೆ ಹಾಕಿದರು. ಬರುಬರುತ್ತಾ ಅಭಯಾರಣ್ಯಗಳ ನೆಪದಲ್ಲಿ ಹೊಸ ಪ್ಲಾಂಟೇಶನ್‌ಗಳ ನೆಪದಲ್ಲಿ ಬುಡಕಟ್ಟುಗಳನ್ನು ಸಂಪೂರ್ಣವಾಗಿ ಅತಂತ್ರರನ್ನಾಗಿಸಿದರು. ವಾಸ್ತವದಲ್ಲಿ ಗಿಡಮರಗಳ ಬಗ್ಗೆ, ಪ್ರಾಣಿಪಕ್ಷಿಗಳ ಬಗ್ಗೆ, ನಿಸರ್ಗದ ಜೀವಜಾಲದ ಬಗ್ಗೆ ಅಪಾರ ಪ್ರೀತಿ ಇಟ್ಟುಕೊಂಡು ಬಂದ ಇವರನ್ನು ಅವುಗಳ ಶತ್ರುಗಳು ಎಂಬಂತೆ ಬಿಂಬಿಸಿದುದು ವಿಪರ್ಯಾಸ."

೧೨. ವಿಶ್ವೇಶ್ವರ ಹೆಗಡೆ , ಪ್ರಜಾವಾಣಿ, ದಿನಾಂಕ ೧೮.೦೨.೨೦೧೪, ಸಂಪುಟ ೨೬,ಸಂಚಿಕೆ ೪೯, ಹುಬ್ಬಳ್ಳಿ-ಧಾರವಾಢ ಪ್ರಕಟಿತ, ಪುಟ ೦೧.

೧೩. ಕಾಗೋಡು ತಿಮ್ಮಪ್ಪ, ವಿಧಾನ ಸಭೆ ಸ್ಪೀಕರ್, ಪ್ರಜಾವಾಣಿ, ದಿನಾಂಕ ೧೮.೦೨.೨೦೧೪, ಸಂಪುಟ ೨೬,ಸಂಚಿಕೆ ೪೯, ಹುಬ್ಬಳ್ಳಿ-ಧಾರವಾಢ ಪ್ರಕಟಿತ, ಪುಟ ೦೧.

೧೪. ಆರ್.ವಿ.ದೇಶಪಾಂಡೆ, ವಿಜಯ ಕರ್ನಾಟಕ, ದಿನಾಂಕ ೧೮.೦೨.೨೦೧೪, ಸಂಪುಟ ೧೫, ಸಂಚಿಕೆ ೫೨, ಹುಬ್ಬಳ್ಳಿ-ಧಾರವಾಢ ಪ್ರಕಟಿತ, ಪುಟ ೧೨.

೧೫. ವಿಶ್ವೇಶ್ವರ ಹೆಗಡೆ, ವಿಜಯ ಕರ್ನಾಟಕ,ದಿನಾಂಕ ೧೮.೦೨.೨೦೧೪, ಸಂಪುಟ ೧೫,ಸಂಚಿಕೆ ೫೨, ಹುಬ್ಬಳ್ಳಿ-ಧಾರವಾಢ ಪ್ರಕಟಿತ, ಪುಟ ೧೨.

೧೬. ಪಾಂಡುರಂಗ ಹೆಗಡೆ, ಹಸಿರು ಮರುಭೂಮಿ, ವಿಜಯ ಕರ್ನಾಟಕ, ೨೦ ಸೆಪ್ಟೆಂಬರ್ ೨೦೧೩, ಸಂಪುಟ ೧೪, ಸಂಚಿಕೆ ೨೭೧, ಪುಟ ೭.

೧೭. ಅದೇ.

೧೮. ಪಾಂಡುರಂಗ ಹೆಗಡೆ, ಹಸಿರು ಮರುಭೂಮಿ, ವಿಜಯ ಕರ್ನಾಟಕ, ೨೦ ಸೆಪ್ಟೆಂಬರ್ ೨೦೧೩, ಸಂಪುಟ ೧೪, ಸಂಚಿಕೆ ೨೭೧, ಪುಟ ಸಂಖ್ಯೆ ೭

೧೯. ಅದೇ.

೨೦. ವಲಯ ಅರಣ್ಯ ಸಂರಕ್ಷಣಾಧಿಕಾರಿ, ಹೆಗ್ಗಡದೇವನ ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ.

೨೧. ಬಾಲಚಂದ್ರ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಹುಣಸೂರು, ಮೈಸೂರು ಜಿಲ್ಲೆ.

೨೨. ಅದೇ.

೨೩. ಬೋರಲಿಂಗಯ್ಯ.ಹಿ.ಚಿ., *ಬೆಂಕಿ ಮತ್ತು ವಿದ್ಯುತ್ ಯುಗಗಳ ನಡುವೆ ಗಿರಿಜನ ಸಂಸ್ಕೃತಿ*, ಗಿರಿಜನ ಸಂಸ್ಕೃತಿ, (ಸಂ) ಪ್ರೊ.ಕಾಳೇಗೌಡ ನಾಗವಾರ ಮತ್ತು ಎನ್.ಹುಚ್ಚಪ್ಪ ಮಾಸ್ತರ, ರಿಜಿಸ್ಟ್ರಾರ್, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ,೨೦೦೦. ಪುಟ ೨೯.

೨೪. ಎ.ಎಸ್.ಪ್ರಭಾಕರ, *ಕರ್ನಾಟಕದಲ್ಲಿ ಆದಿವಾಸಿ ರೈತ ಹೋರಾಟಗಳ ಸ್ವರೂಪ*, ಕಾಗೊಡು ಚಳುವಳಿ, ಸಂಪಾದಕರು, ಹಿ.ಚಿ.ಬೋರಲಿಂಗಯ್ಯ ಮತ್ತು ಎನ್.ಹುಚ್ಚಪ್ಪ ಮಾಸ್ತರ, ಮಲೆನಾಡು ಜಾನಪದ ಲೋಕ,೨೦೦೨. ಪುಟ ೨೭೬.

೨೫. ಬೋರಲಿಂಗಯ್ಯ.ಹಿ.ಚಿ., *ಬೆಂಕಿ ಮತ್ತು ವಿದ್ಯುತ್ ಯುಗಗಳ ನಡುವೆ ಗಿರಿಜನ ಸಂಸ್ಕೃತಿ*, ಗಿರಿಜನ ಸಂಸ್ಕೃತಿ, (ಸಂ) ಪ್ರೊ.ಕಾಳೇಗೌಡ ನಾಗವಾರ ಮತ್ತು ಎನ್.ಹುಚ್ಚಪ್ಪ ಮಾಸ್ತರ, ರಿಜಿಸ್ಟ್ರಾರ್, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ,೨೦೦೦. ಪುಟ ೩೧.

೨೬. ಆರ್.ವಿ.ದೇಶಪಾಂಡೆ, ಉನ್ನತ ಶಿಕ್ಷಣ ಸಚಿವ, ವಿಜಯಕರ್ನಾಟಕ, ಸಂಚಿಕೆ ೨೯೭, ಸಂಪುಟ ೧೪, ೧೭ ಅಕ್ಟೋಬರ್ ೨೦೧೩, ಪುಟ ೧೦.

೨೭. ಶ್ರೀ ನಂಜುಂಡಯ್ಯ, ಕಾರ್ಯದರ್ಶಿಗಳು, ನಿಸರ್ಗ ಫೌಂಡೇಶನ್, ಹೆಗ್ಗಡದೇವನ ಕೋಟೆ, ಮೈಸೂರು ಜಿಲ್ಲೆ.

೨೮. ಬಾಲಚಂದ್ರ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಹುಣಸೂರು, ಮೈಸೂರು ಜಿಲ್ಲೆ.

೨೯. ಪಾಂಡುರಂಗ ಹೆಗಡೆ, *ಆಸರೆ ತಪ್ಪಿಸುವ ಅಭಯಾರಣ್ಯ*, ವಿಜಯ ಕರ್ನಾಟಕ, ೧೯ ಅಕ್ಟೋಬರ್ ೨೦೧೩, ಸಂಪುಟ ೧೪, ಸಂಚಿಕೆ ೨೯೯, ಪುಟ ೮.

೩೦. ಅದೇ.

೩೧. ಅದೇ.

೩೨. ಅದೇ.

೩೩. ಅದೇ.

೩೪. ಅದೇ.

೩೫. ಶೇಷಾಚಲ ಕುಲಕರ್ಣಿ, ವನ್ಯಜೀವಿ (ರಕ್ಷಣಾ) ಅಧಿನಿಯಮ, 1972. ವನ್ಯಜೀವಿ (ವ್ಯವಹರಣೆಗಳು ಮತ್ತು ಪ್ರಾಣಿ ವಸ್ತುಗಳ) ನಿಯಮಗಳು, 1973, 2010. ಪುಟ ೧–೨೪.

೩೬. ನಂಜುಂಡಯ್ಯ, ಕಾರ್ಯದರ್ಶಿಗಳು, ನಿಸರ್ಗ ಫೌಂಡೇಶನ್, ಹೆಗ್ಗಡದೇವನ ಕೋಟೆ, ಮೈಸೂರು ಜಿಲ್ಲೆ. ಸಂದರ್ಶನ ದಿನಾಂಕ ೧೭.೦೫.೨೦೧೪ ಸಮಯ ಸಂಜೆ ೬.೩೦ ಯಿಂದ ೭.೩೦.

೩೭. ಶ್ರೀಕಾಂತ, ನಿರ್ದೇಶಕರು, ಡೀಡ್ ಸಂಸ್ಥೆ, ಚಿಕ್ಕ ಹುಣಸೂರು, ಮೈಸೂರು ಜಿಲ್ಲೆ. ಸಂದರ್ಶನ ದಿನಾಂಕ ೧೭.೦೫.೨೦೧೪ ಸಮಯ ಮಧ್ಯಾಹ್ನ ೧.೧೫ ರಿಂದ ೦೨.೩೦.

೩೮. ರಾಜೇಗೌಡ, ನಿರ್ದೇಶಕರು, ಪರಿವರ್ತನಾ ಸಂಸ್ಥೆ, ಹುಣಸೂರು, ಮೈಸೂರು ಜಿಲ್ಲೆ, ಸಂದರ್ಶನ ದಿನಾಂಕ ೨೦.೦೫.೨೦೧೪ ಸಮಯ ಮಧ್ಯಾಹ್ನ ೨.೦೦ ರಿಂದ ೦೩.೩೦.

೩೯. ಪ್ರಸನ್ನ ಮೂರ್ತಿ, ನಿರ್ದೇಶಕರು, ಪ್ರತಿಭೆ, ಮೈಸೂರು, ಮೈಸೂರು ಜಿಲ್ಲೆ, ಸಂದರ್ಶನ ದಿನಾಂಕ ೨೨.೦೫.೨೦೧೪ ಸಮಯ ಬೆಳಿಗ್ಗೆ ೯.೪೫ ಯಿಂದ ೧೧.೦೦.

೪೦. ಜಿ.ಎಸ್. ಜಯದೇವ, ಕಾರ್ಯದರ್ಶಿಗಳು, ದೀನಬಂಧು ಸಂಸ್ಥೆ, ಅರಣ್ಯ ಇಲಾಖೆ ನರ್ಸರಿ ಹಿಂಬದಿ, P.W.D. ಕಾಲೊನಿ ಹತ್ತಿರ, ಚಾಮರಾಜನಗರ, ಪೋನ್.ನಂ 08226-223077, Cell:9449406454.E-mail: gsjayadev@rediffmail.com.



## ಅಧ್ಯಾಯ : ಐದು

# ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದ ಸಾಧ್ಯತೆಗಳು



ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನ ಕುರಿತಂತೆ ಹಲವು ವಾದ ಪ್ರತಿವಾದಗಳಿವೆ. ಅದು ಏನೇ ಇದ್ದರೂ ಕೂಡ ಆದಿವಾಸಿಗಳು, ಮತ್ತು ಅರಣ್ಯ ಅವಲಂಭಿತರ ಹಿತ ದೃಷ್ಟಿಯಿಂದ ಕಾಯಿದೆಯ ಅನುಷ್ಠಾನ ಅವಶ್ಯಕವಾಗಿದೆ. ಏಕೆಂದರೆ 'ನಿಜವಾಗಿಯೂ ಆದಿವಾಸಿಗಳೇ ಪರಿಣಾಮಕಾರಿ ಅರಣ್ಯ ಸಂರಕ್ಷಣೆಗಾರರು'[೧] "ಈ ಕಾಯಿದೆಯಿಂದ ಅರಣ್ಯ ಸಂರಕ್ಷಣೆ ತೆರವು ಗೊಳ್ಳಲಾರದು. ಏಕೆಂದರೆ ಈಗಾಗಲೇ ಇರುವ ಕಾನೂನುಗಳು ಮುಂದುವರೆಯುತ್ತವೆ."[೨] ಸಮುದಾಯಗಳಿಗೆ ಅರಣ್ಯ ವಹಿಸುವುದರಿಂದ ಅರಣ್ಯ ಸಂರಕ್ಷಣೆ ಸದೃಡವಾಗುತ್ತದೆ. 'ಅರಣ್ಯ ಸಂರಕ್ಷಣೆ ಜವಾಬ್ದಾರಿ' ಸಮುದಾಯದ್ದಾಗಿರುತ್ತದೆ. ಅರಣ್ಯ ನಾಶ ನಿಲ್ಲಿಸಲು ಸಾಧ್ಯವಿದೆ. ಹಾಗಾಗಿ ಪರಿಸರ ಹಾನಿ, ಆದಿವಾಸಿ ಉರಲು ವಾದ ಹೀಗೆ ಇರುವ ಇಂತಹ ಎಲ್ಲ ವಾದಗಳನ್ನು ಬದಿಗೊತ್ತಿ. ಈ ಸಮುದಾಯದ ಜ್ಞಾನ, ಅನುಭವ ಮತ್ತು ಬೆಂಬಲ ಪಡೆದು ಅರಣ್ಯ ಮತ್ತು ವನ್ಯಪ್ರಾಣಿ ಸಂರಕ್ಷಣೆ ಮಾಡಬಹುದಾಗಿದೆ. ಏಕೆಂದರೆ "ಸ್ಥಳೀಯ ಜನರ ಆಡಳಿತ ವ್ಯವಸ್ಥೆ ಇಂದಿಗೂ ಮತ್ತು ಎಂದೆಂದಿಗೂ ನಿಶ್ಚಿತವಾಗಿತ್ತು. ಆದರೆ ಈಚಿನ ದಿನಗಳಲ್ಲಿ ಸ್ಥಳೀಯ ಸಮುದಾಯ ಅಲ್ಲಿರುವ ಉಪ ಉತ್ಪನ್ನದ ಪ್ರಾಥಮಿಕ ಬಳಕೆದಾರರು ಮತ್ತು ಸ್ಥಳೀಯ ಕಾನೂನುಗಳನ್ನು ರಚಿಸಿ ಅರಣ್ಯ ಸಂರಕ್ಷಿಸುತ್ತಿದ್ದರು. ಹಾಗಾಗಿ ಅವರ ನಿಯಮಗಳನ್ನು ಅರಣ್ಯ ನಿರ್ವಹಣೆ ಯೋಜನೆಯಲ್ಲಿ ಸೇರ್ಪಡೆಗೊಳಿಸುವುದು ಅವಶ್ಯಕ."[೩] ಇದನ್ನು ಮನಗಂಡಂತಹ ಅರಣ್ಯ ಇಲಾಖೆಯು ಈ ಹಿಂದೆ ಆದಿವಾಸಿಗಳನ್ನು ಅರಣ್ಯ ಸಂರಕ್ಷಣೆಯಲ್ಲಿ ಬಳಸಿಕೊಂಡಿರುವುದನ್ನು ನಾವು ಗಮನಿಸಬಹುದಾಗಿದೆ.

ದೇಶೀಯ ಸಮುದಾಯದ ಹಕ್ಕು ಬಾಧ್ಯತೆಗಳನ್ನು ಗೌರವಿಸಲು ಮತ್ತು ರಕ್ಷಿಸಲು ಸ್ಥಳೀಯ ಜನರ ಸಂಪೂರ್ಣ ಬಾಗವಹಿಸುವಿಕೆ ಬೇಕು. ಇದು ೨೦೦೮ ರೊಳಗಾಗಿ ನೆರವೇರಬೇಕು ಎಂಬುದನ್ನು ೧೧ ನೇ ಪಂಚವಾರ್ಷಿಕ ಯೋಜನೆಯಲ್ಲಿ ಹಾಕಿಕೊಳ್ಳಲಾಗಿತ್ತು. ಏಕೆಂದರೆ "ಆದಿವಾಸಿಗಳು ಅನಿಶ್ಚಿತತೆ ಬದುಕು ಬದುಕುತ್ತಾ ಬಂದಿದ್ದಾರೆ. ಇದು ನಿರಂತರ ಹೊರ ತಳ್ಳಲ್ಪಡುವಿಕೆಯಾಗಿದೆ. ಅವರ ಸಂಪೂರ್ಣ ಜೀವನ 'ಕಾನೂನು ಮುಸ್ಸಂಜೆ ವಲಯ' ಆಗಿದೆ."[೪] ಇಂತಹ ಮನಸ್ಥಿತಿಯನ್ನು ಬದಲಾಯಿಸ ಬೇಕಾಗಿದೆ. ಅದಕ್ಕಾಗಿ "ಆದಿವಾಸಿಗಳಿಗೆ ಕೊಡಮಾಡಲಾಗುತ್ತಿರುವ ಹಕ್ಕು ಬಾಧ್ಯತೆಗಳು ಅವಿಚ್ಛಿನ್ನವಾದವು ಮತ್ತು ಅವುಗಳನ್ನು ಪುನಃ ಅವರಿಂದ ಕಿತ್ತುಕೊಳ್ಳಲಾಗದು ಎಂಬ ಆತ್ಮ ವಿಶ್ವಾಸವನ್ನು ನಿಧಾನವಾಗಿ ಅವರ ಮನಸ್ಸಿನಲ್ಲಿ ನೆಡಬೇಕು."[೫] ಇದು ನಿಜವಾಗಿಯೂ ಅರಣ್ಯ ಹಕ್ಕುಗಳ ಕಾಯಿದೆ ನಿರೀಕ್ಷಿಸಿರುವ ಮತ್ತು ಹೊಂದಿರುವ ಉದ್ದೇಶವಾಗಿದೆ. ಇದನ್ನು ಸಾಧಿಸಲು ಸರ್ಕಾರದ ವಿವಿಧ ಇಲಾಖೆಗಳು

ಮತ್ತು ಆದಿವಾಸಿಗಳು ಒಟ್ಟು ಗೂಡಿ ಕೆಲಸ ಮಾಡಬೇಕಾಗಿದೆ. ಇಂತಹ ಹಲವು ಸಾಧ್ಯತೆಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚೆಗೆ ಒಳಪಡಿಸಲಾಗಿದೆ.

**೫.೧. ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದ ಸಾಧ್ಯತೆಗಳು**

ಯಾವುದೇ ಕಾಯಿದೆಗಳನ್ನು ಅನುಷ್ಠಾನಗೊಳಿಸುವುದು ಕಷ್ಟಕರವಾದುದಾದರೂ ಅವುಗಳ ಅನುಷ್ಠಾನದ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ತಾಳ್ಮೆಯಿಂದ ಆಲೋಚಿಸಿ ಆ ನಿಟ್ಟಿನಲ್ಲಿ ಕಾರ್ಯೋನ್ಮುಕವಾದರೆ ಎಂತಹ ಕಠಿಣ ಸವಾಲುಗಳನ್ನೂ ಸಾಧ್ಯವಾಗಿಸಬಹುದು. ಈ ಹಿನ್ನೆಲೆಯಲ್ಲಿ ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನದ ಸಾಧ್ಯತೆಗಳನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

**೫.೧.೧. ಸಮಾಜ ಕಲ್ಯಾಣ ಇಲಾಖೆಯ ಪಾತ್ರ**

ಅ. ಅರ್ಜಿಗಳನ್ನು ಸಲ್ಲಿಸದೆ ಇರುವವರನ್ನು ಗುರುತಿಸಿ ಅರ್ಜಿ ಸಲ್ಲಿಸಲು ಇರುವ ಅಡ್ಡಿ ಆತಂಕಗಳನ್ನು ನಿವಾರಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳುವುದು.

ಆ. ಅರಣ್ಯ ಹಕ್ಕುಗಳಿಗೆ ಯಾರು ಅರ್ಹರಿದ್ದಾರೋ ಅಂತಹ ಅರ್ಹ ಫಲಾನುಭವಿಗಳಿಗೆ ಅರ್ಜಿಸಲ್ಲಿಸಲು ಮಾರ್ಗದರ್ಶನ ನೀಡುವುದು. ಈಗಾಗಲೇ ಅರ್ಜಿ ಸಲ್ಲಿಸಿರುವವರಿಗೆ ತಮ್ಮ ಅರ್ಜಿಯ ಸ್ಥಿತಿಗತಿ ಅರಿಯಲು ಮಧ್ಯವರ್ತಿಯಾಗಿ ಸಹಾಯ ಮಾಡುವುದು.

ಇ. ಗ್ರಾಮ ಮಟ್ಟದ ಅರಣ್ಯ ಹಕ್ಕು ಸಮಿತಿಗಳು, ವಿಭಾಗ ಮಟ್ಟದ ಮತ್ತು ಜಿಲ್ಲಾ ಮಟ್ಟದ ಸಮಿತಿಗಳನ್ನು ಎಲ್ಲೆಲ್ಲಿ ರಚನೆ ಮಾಡಿರುವುದಿಲ್ಲವೋ ಅಲ್ಲಿ ರಚನೆ ಮಾಡಲು ಮಾರ್ಗದರ್ಶಕನ ಪಾತ್ರ ನಿರ್ವಹಿಸಿದಾಗ ಕಾರ್ಯ ಸುಲಭವಾಗುತ್ತದೆ.

ಉ. ಸಕಾರಣ ನೀಡದೇ ಈ ಹಿಂದೆ ಕೆಲವು ಅರ್ಜಿದಾರರ ಅರ್ಜಿಗಳನ್ನು ತಿರಸ್ಕರಿಸಲಾಗಿದೆ. ಇಂತಹ ಅರ್ಜಿದಾರರು ಆತಂಕಕ್ಕೆ ಒಳಗಾಗಿದ್ದಾರೆ. ಹಾಗಾಗಿ ತಿರಸ್ಕೃತರ ವೃಂದ ರಚಿಸಬೇಕು. ಸಂಬಂಧಿಸಿದ ಸಮಿತಿಗಳೊಟ್ಟಿಗೆ ಚರ್ಚಿಸಿ ಕಾಯಿದೆಯಲ್ಲಿ ಮರು ಅರ್ಜಿ ಸಲ್ಲಿಸಲು ಇರುವ ಅವಕಾಶ ಕುರಿತ ಮಾಹಿತಿ ಮತ್ತು ತಿರಸ್ಕಾರಕ್ಕೆ ಕಾರಣಗಳನ್ನು ತಿಳಿದು ಅದನ್ನು ಫಲಾನುಭವಿಗಳಿಗೆ ತಿಳಿಸುವಲ್ಲಿ ಸಂವಹನಕಾರನಾಗಿ ಕಾರ್ಯನಿರ್ವಹಿಸಬೇಕು.

ಋ. ಪರಿಶಿಷ್ಟ ಪಂಗಡ ಕಲ್ಯಾಣ ಇಲಾಖೆಯ ಸಮನ್ವಯದೊಂದಿಗೆ ಸದರಿ ಕಾಯಿದೆ ಬಗೆಗೆ ಅರಿವು ಮೂಡಿಸಲು ಸಮುದಾಯ ಕಾರ್ಯಕ್ರಮಗಳನ್ನು ಸಂಘಟಿಸುವುದು.

ಎ. ಅರಣ್ಯ ಹಕ್ಕು ಹಾಡಿ ಸಮಿತಿಗೆ ಇನ್ನಷ್ಟು ಅಧಿಕಾರ ದೊರೆಯುವಂತಾಗಲು ಆದಿವಾಸಿಗಳನ್ನು ಒಗ್ಗೂಡಿಸಿ ಸಂಯೋಜಕನಾಗಿ ಕಾರ್ಯನಿರ್ವಹಿಸುವುದು.

ಏ. ಅರಣ್ಯ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ವಿದ್ಯುತ್ ಸರಬರಾಜು ಇಲಾಖೆ, ಲೋಕೋಪಯೋಗಿ ಇಲಾಖೆ, ಗ್ರಾಮ ಪಂಚಾಯತ್ ಸಿಬ್ಬಂದಿಗಳಿಗೆ ಅರಣ್ಯ ಹಕ್ಕುಗಳ ಕಾಯಿದೆ ಉದ್ದೇಶಗಳನ್ನು ತಿಳಿಸಲು ಜಾಗೃತಿ ಶಿಬಿರಗಳನ್ನು ಏರ್ಪಡಿಸುವ ಮುಖಾಂತರ ಅರಣ್ಯವಾಸಿಗಳು ಮತ್ತು ಅಧಿಕಾರಿ ವರ್ಗದ ನಡುವೆ ಸಂಪರ್ಕ ಸೇತುವೆಯಂತೆ ಕಾರ್ಯ ನಿರ್ವಹಿಸಬೇಕು.

ಐ. ಅರಣ್ಯ ಕಿರು ಉತ್ಪನ್ನಗಳನ್ನು ಮಾರಾಟ ಮಾಡಲು ಅನುಕೂಲವಾಗುವಂತೆ ಲ್ಯಾಂಪ್ಸ್ ಮಾರಾಟ ಮಳಿಗೆಗಳನ್ನು ಆರಂಭಿಸಲು ಸೂಕ್ತ ಕ್ರಮ ವಹಿಸುವುದು.

ಒ. ಅರಣ್ಯ ಇಲಾಖೆ ಅಧಿಕಾರಿಗಳು, ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು, ಗ್ರಾಮ ಲೆಕ್ಕಾಧಿಕಾರಿಗಳು, ಕಂದಾಯ ನಿರೀಕ್ಷಕರು ಮತ್ತು ಸಮಾಜ ಕಲ್ಯಾಣ ಅಧಿಕಾರಿಗಳು ಗ್ರಾಮ ಸಭೆಗಳಲ್ಲಿ ಹಾಜರಿದ್ದು ಈ ಎಲ್ಲಾ ಪ್ರಕ್ರಿಯೆಗಳಿಗೆ ಸಹಕಾರ ನೀಡುವಂತೆ ಸಮನ್ವಯಕಾರನಾಗಿ ತನ್ನ ಪಾತ್ರ ನಿರ್ವಹಿಸುವುದು.

ಓ. ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಅರಣ್ಯ ಹಕ್ಕು ಸಮಿತಿಗಳಿಗೆ ಗ್ರಾಮ ಪಂಚಾಯತಿಯ ಅಭಿವೃದ್ಧಿ ಅಧಿಕಾರಿ ಅಥವಾ ಕಾರ್ಯದರ್ಶಿ ಇವರುಗಳ ಮಾರ್ಗದರ್ಶನ ಅತ್ಯಂತ ಅವಶ್ಯಕ ಈ ನಿಟ್ಟಿನಲ್ಲಿ ಮಧ್ಯವರ್ತಿಯಾಗಿ ಅವರ ನಡುವೆ ಸಮನ್ವಯ ಸಾಧಿಸುವುದು.

ಔ. ಪ್ರಸ್ತುತ ಅಂತಿಮ ಇತ್ಯರ್ಥಕ್ಕಾಗಿ ಬಾಕಿ ಇರುವ ಅರ್ಜಿಗಳನ್ನು ಆದಷ್ಟು ಬೇಗ ಬಗೆಹರಿಸುವಂತೆ ಮತ್ತು ಅಂತಹವರಿಗೆ ಅಧಿಕೃತ ಇಲಾಖೆಯಿಂದ ಹಕ್ಕುಪತ್ರ ದೊರೆಯುವಂತೆ ಮಾಡುವುದು. ಹಾಗು ಹಕ್ಕು ಪತ್ರಗಳನ್ನು ನೀಡಿದ ನಂತರ ಅಂತಹ ಪ್ರಕರಣಗಳನ್ನು ಕಂದಾಯ ದಾಖಲೆಗಳಲ್ಲಿ ದಾಖಲಿಸಲು ಕಂದಾಯ ಇಲಾಖೆ ಕ್ರಮ ವಹಿಸುವಂತೆ ನೋಡಿಕೊಳ್ಳವುದು. ಅದೇ ರೀತಿ ಅರಣ್ಯ ಇಲಾಖೆ ದಾಖಲೆಗಳಲ್ಲಿ ಸಹ ನಮೂದಿಸಿಕೊಳ್ಳುವಂತೆ ಸಮನ್ವಯಕಾರನಾಗಿ ಕಾರ್ಯನಿರ್ವಹಿಸುವುದು.

ಅಂ. ಅರಣ್ಯವಾಸಿಗಳು ಕೆಲವರು ಅರಣ್ಯದಲ್ಲಿ, ಕೆಲವರು ಅರಣ್ಯದಂಚಿನಲ್ಲಿ ವಾಸಿಸುತ್ತಾ ಜೀವನೋಪಾಯಕ್ಕಾಗಿ ಅಲ್ಪ ಸ್ವಲ್ಪ ಉಳುಮೆ ಮಾಡುತ್ತಾ ಇದ್ದರು. ಅವರು ಭೂಮಿಯ ಬಗೆಗೆ ಯಾವುದೇ ದಾಖಲೆ ಹೊಂದಲಿಲ್ಲ. ಇದರಿಂದಾಗಿ ಇಂದು ಅವರ ಬಳಿ ಯಾವುದೇ ಹಕ್ಕು ಪತ್ರಗಳಿಲ್ಲದೆ ತಾವು ಉಳುಮೆ ಮಾಡುತ್ತಿದ್ದ ಜಮೀನು ಇಷ್ಟೇ ಎಂದು ಹೇಳಲು ಸಾಧ್ಯವಾಗುತ್ತಿಲ್ಲ. ಅಲ್ಲದೆ ಅರಣ್ಯ ಇಲಾಖೆ ಮೋಜಣಿದಾರರು ಮಾಡಿದ

ಸಮೀಕ್ಷೆಯನ್ನು ಕಂದಾಯ ಇಲಾಖೆಯವರು ಒಪ್ಪುವುದಿಲ್ಲ. ಮತ್ತು ಕಂದಾಯ ಇಲಾಖೆಯವರು ಮಾಡಿದ ಮೋಜಣಿಯನ್ನು ಅರಣ್ಯ ಇಲಾಖೆಯವರು ಒಪ್ಪುವುದಿಲ್ಲ. ಇದು ಬಹಳಷ್ಟು ತೊಡಕಾಗಿದೆ. ಆದ್ದರಿಂದ ಅರಣ್ಯ ಇಲಾಖೆ ಮತ್ತು ಕಂದಾಯ ಇಲಾಖೆ ಮೋಜಣಿದಾರರು ಒಟ್ಟಾಗಿ ಸಮೀಕ್ಷೆ (ಸರ್ವೆ) ಕಾರ್ಯ ನಿರ್ವಹಿಸುವಂತೆ ಮಧ್ಯವರ್ತಿಯಾಗಿ ಕಾರ್ಯನಿರ್ವಹಿಸುವುದು.

ಅಃ. ಆದಿವಾಸಿಗಳಿಗೆ ಕೇವಲ ಸಮುದಾಯ ಹಕ್ಕುಗಳನ್ನು ನೀಡಿದರೆ ಸಾಲದು. ಈಗಿನ ಕಾಲಕ್ಕೆ ತಕ್ಕಂತೆ ಅಗತ್ಯ ಸಂಗ್ರಹಣ ಕೌಶಲ್ಯ, ಅರಣ್ಯ ಕಿರು ಉತ್ಪನ್ನಗಳನ್ನು ವೃದ್ಧಿಸುವ ಕೌಶಲ್ಯಗಳನ್ನು ಒದಗಿಸಬೇಕು ಇದಕ್ಕಾಗಿ ದೇಶದ ಬೇರೆ ಬೇರೆ ಭಾಗ ಮತ್ತು ವಿದೇಶಗಳಲ್ಲಿ ಯಾವ ಕ್ರಮ ಅನುಸರಿಸುತ್ತಿದ್ದಾರೆ ಎಂಬುದನ್ನು ಅರಿಯಲು ಒಂದು ತಜ್ಞರ ತಂಡವನ್ನು ರಚಿಸುವಂತೆ ಮನವೊಲಿಸುವುದು ಮತ್ತು ಅಧ್ಯಯನದ ವರದಿಯ ಆಧಾರದ ಮೇಲೆ ನೀತಿ ಅನುಷ್ಠಾನಕ್ಕೆ ಒತ್ತುಕೊಡುವಂತೆ ನೋಡಿಕೊಳ್ಳುವುದು.

**೫.೧.೨. ಅರಣ್ಯ ಇಲಾಖೆಯ ಪಾತ್ರ**

ಅ. ವೈಯಕ್ತಿಕ ಹಕ್ಕು ಪ್ರಕಾರ ಭೂಮಿ ನೀಡಿದರೂ ಅಲ್ಲಿ ತೋಟಗಾರಿಕಾ ಬೆಳೆ ಬೆಳೆಯಲು ತರಬೇತಿ ನೀಡಿ ಸೌಲಭ್ಯ ಕಲ್ಪಿಸಿದರೆ ಅದು ಅರಣ್ಯವಾಗಿಯೇ ಉಳಿದು ಕೊಳ್ಳುತ್ತದೆ. ಮತ್ತು ಆದಿವಾಸಿಗಳ ಆದಾಯ ಹೆಚ್ಚುತ್ತದೆ. ಅಲ್ಲದೆ ಆ ಹತ್ತು ಎಕರೆ ಜಮೀನು ಒಬ್ಬ ವ್ಯಕ್ತಿ ಅಥವಾ ಕುಟುಂಬದ ಹಿಡಿತದಲ್ಲಿರುವುದರಿಂದ ಸ್ವಂತ ಆಸ್ತಿ ಎಂಬ ಪರಿಕಲ್ಪನೆ ಬೆಳೆಯುತ್ತದೆ. ಅದನ್ನು ಜೋಪಾನ ಮಾಡಿದರೆ ತಮ್ಮ ಮುಂದಿನ ಪೀಳಿಗೆಗೆ ಅಧಿಕಾರ ವರ್ಗಾಯಿಸಲ್ಪಡುವುದರಿಂದ ಮತ್ತಷ್ಟು ಮುತುವರ್ಜಿಯಿಂದ ಆ ನಿರ್ದಿಷ್ಟ ಪ್ರದೇಶವನ್ನು ಕಾಪಾಡುತ್ತಾರೆ. ಇದರಿಂದ ನಾವು ವೈವಿಧ್ಯಮಯ ಕಾಡನ್ನು ಮುಂದಿನ ೩೦–೪೦ ವರ್ಷಗಳಲ್ಲಿ ನಮ್ಮ ಪೀಳಿಗೆಗೆ ಕೊಡಬಹುದು. ಈ ನಿಟ್ಟಿನಲ್ಲಿ ಅರಣ್ಯ ಇಲಾಖೆ ಆಲೋಚಿಸಿ ಕಾರ್ಯ ಕೈಗೊಂಡರೆ ಅರಣ್ಯಕ್ಕೆ ಅರಣ್ಯವೂ ಉಳಿಯುತ್ತದೆ ಮತ್ತು ಆದಿವಾಸಿಗಳ ಜೀವನ ಮಟ್ಟವೂ ಸುಧಾರಿಸುತ್ತದೆ. ಇದು ಒಂದು ಉತ್ತಮ ಮಾದರಿಯಾಗುವುದರಿಂದ ಉಳಿದೆಡೆ ಸಹಕಾರಿಯಾಗುತ್ತದೆ.

ಆ. ಆದಿವಾಸಿಗಳು ಸದ್ಯ ಎಲ್ಲೇ ವಾಸ ಮಾಡುತ್ತಿರಲಿ ಅದಕ್ಕೆ ಕಾರಣ ಅರಣ್ಯ ಇಲಾಖೆಯಾದ್ದರಿಂದ ಅವರ ಮೂಲ ನೆಲೆಯಲ್ಲೆ ಅವರಿಗೆ ಭೂಮಿ ದೊರಕಿಸಿಕೊಡಬೇಕು. ಒಂದು ವೇಳೆ ಅಂತಹ ಕಡೆ ಸಾಧ್ಯವಿಲ್ಲದಿದ್ದಾಗ ಬೇರೆಡೆ ಅಷ್ಟೇ ಜಮೀನು ನೀಡಬೇಕು. ಭೂಮಿ ಕೊಟ್ಟ ಮೇಲೆ ಕೈತೋಟದ ಬಗ್ಗೆ ಮಾಹಿತಿ ಮತ್ತು ತರಬೇತಿ ನೀಡಲು ಯೋಜನೆಗಳನ್ನು ರೂಪಿಸಬೇಕು ಮತ್ತು ತರಬೇತಿಯ ಮೇಲ್ವಿಚಾರಣೆ ಮಾಡುವಂತೆ ನೋಡಿಕೊಳ್ಳಬೇಕಾಗಿದೆ.

ಇ. ಈಗಾಗಲೇ ಅರಣ್ಯಗಳಿಂದ ಹೊರಹಾಕಲ್ಪಟ್ಟಿರುವ ಆದಿವಾಸಿಗಳು ಸಮುದಾಯ ಹಕ್ಕುಗಳಿಗೆ ಅರ್ಜಿ ಹಾಕಿದ್ದಾರೆ. ಆದರೆ ಸಮುದಾಯ ಹಕ್ಕುಗಳನ್ನು ಅಂದರೆ ಅರಣ್ಯ ಕಿರು ಉತ್ಪನ್ನಗಳನ್ನು ವರ್ಷದ ಒಂದೆರೆಡು ತಿಂಗಳಲ್ಲಿ ಮಾತ್ರ ತಮ್ಮ ಮೂಲ ಸ್ಥಳಕ್ಕೆ ಹೋಗಿ ಸಂಗ್ರಹಿಸುವ ವ್ಯವಸ್ಥೆ ಮಾಡಲಾಗಿದೆ. ಇದು ವರ್ಷಪೂರ್ತಿ ಜೀವನ ನಡೆಸಲು ಸಾಕಾಗುವುದಿಲ್ಲ. ಅದಕ್ಕಾಗಿ ಋತುಮಾನಕ್ಕೆ ಅನುಗುಣವಾಗಿ ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹಿಸುವ ಅವಕಾಶವನ್ನು ಮಾಡಿಕೊಡುವ ಗುರುತರ ಜವಾಬ್ದಾರಿ ವಹಿಸಬೇಕು.

**೫.೧.೩. ಕಂದಾಯ ಇಲಾಖೆಯ ಪಾತ್ರ**

ಅ. ಭೂಮಿಯ ಹಕ್ಕು ಪತ್ರ ಇಲ್ಲದೆ ಬದುಕು ಸಾಗಿಸುವುದು ನಿತ್ಯ ಆತಂಕದ ಬದುಕು. ಭೂಮಿಯ ಹಕ್ಕು ಪತ್ರ ವಿತರಿಸುವುದು ಕಂದಾಯ ಇಲಾಖೆಯ ಕರ್ತವ್ಯವಾಗಿದೆ. ಈ ಹಿನ್ನೆಲೆಯಲ್ಲಿ ಇತ್ಯರ್ಥಗೊಂಡ ಅರ್ಜಿಗಳ ಪ್ರಕಾರ ಹಕ್ಕು ಪತ್ರ ವಿತರಿಸುವುದು.

ಆ.ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಸಮನ್ವಯದೊಂದಿಗೆ ಮುಂದುವರೆದರೆ ಕಾಯಿದೆ ಅನುಷ್ಠಾನ ಸಾಧ್ಯವಾಗುತ್ತದೆ. ಹಾಗಾಗಿ ಸರ್ಕಾರಿ ವಿವಿಧ ಇಲಾಖೆಯ ಉನ್ನತ ಹಂತದ ಅಧಿಕಾರಿಗಳೊಟ್ಟಿಗೆ ಸಮನ್ವಯ ಸಾಧಿಸಿ ಅರಣ್ಯ ಹಕ್ಕುಗಳ ಕಾಯಿದೆಯನ್ನು ಸಮಾಜ ಸೇವಾ ಯೋಜನೆಯಾಗಿ ಮಾರ್ಪಾಡಾಗುವಂತೆ ಕ್ರಮವಹಿಸುವುದು.

ಇ. ಆದಿವಾಸಿಗಳ ಸಾಗುವಳಿ ಜಮೀನಿನ ಮೋಜಣಿ ಮಾಡಲು ಸಹಕರಿಸುವುದು.

**೫.೧.೪. ಸಮಾಜಕಾರ್ಯಕರ್ತರ ಪಾತ್ರ**

ವೃತ್ತಿಪರ ಸಮಾಜಕಾರ್ಯಕರ್ತರು ಹಲವು ರೀತಿಯ ಪಾತ್ರಗಳನ್ನು ನಿರ್ವಹಿಸುವಾಗ ಸಾಮಾಜಕಾರ್ಯದ ವಿವಿಧ ವಿಧಾನಗಳನ್ನು ಸಂದರ್ಭಕ್ಕೆ ತಕ್ಕಂತೆ ಬಳಸುವ ಮೂಲಕ ಸವಾಲುಗಳನ್ನು ಪರಿಹರಿಸುತ್ತಾನೆ. ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದಲ್ಲಿ ಸಮಾಜಕಾರ್ಯಕರ್ತರ ಪಾತ್ರವನ್ನು ಇಲ್ಲಿ ಚರ್ಚಿಸಲಾಗಿದೆ.

**೫.೧.೪.೧. ವ್ಯಕ್ತಿಗತ ಸಮಾಜಕಾರ್ಯ**

ಇದು ಸಮಾಜಕಾರ್ಯದ ಪ್ರಾಥಮಿಕ ವಿಧಾನಗಳಲ್ಲಿ ಒಂದಾಗಿದೆ. ಇದನ್ನು ಸಮಾಜಕಾರ್ಯದ ತತ್ವಗಳಲ್ಲಿ ಒಂದಾದ ವೈಯಕ್ತಿಕರಣ ತತ್ವದ ನೆಲೆಗಟ್ಟಿನಲ್ಲಿ ನೆರವೇರಿಸಲಾಗುತ್ತಿದೆ. ಈ ವಿಧಾನದ ತತ್ವ, ತಂತ್ರಗಳು ಕೌಶಲ್ಯಗಳನ್ನು ಬಳಸಿಕೊಂಡು ಆಪ್ತಸಮಾಲೋಚನೆ ಮುಖಾಂತರ ವ್ಯಕ್ತಿಗತ ಸಮಸ್ಯೆಗಳನ್ನು ಬಗೆಹರಿಸುವುದು.

### ೫.೧.೪.೨.ವೃಂದಗತ ಸಮಾಜಕಾರ್ಯ

ಇದು ಸಮಾಜಕಾರ್ಯದ ಪ್ರಾಥಮಿಕ ವಿಧಾನಗಳಲ್ಲಿ ಒಂದಾಗಿದೆ. ಸಮಾಜಕಾರ್ಯಕರ್ತನು ಯೋಜಿತ ಗುಂಪು ರಚನಾ ತತ್ವವನ್ನು ಅನುಸರಿಸಿ ಅರಣ್ಯ ಹಕ್ಕುಗಳಿಗೆ ಅರ್ಹರಾದ ಫಲಾನುಭವಿಗಳನ್ನು ಒಟ್ಟುಗೂಡಿಸುತ್ತಾನೆ. ಮತ್ತು ಗುಂಪುಗಳನ್ನು ರಚಿಸುತ್ತಾನೆ. ಈ ಮುಖಾಂತರ ನಿರ್ದಿಷ್ಟ ಗುಂಪಿನ ಸಂಘಟಿತ ಬೇಡಿಕೆಯನ್ನು ಸರ್ಕಾರದ ಮುಂದಿಡುವುದು.

### ೫.೧.೪.೩. ಸಮುದಾಯ ಸಂಘಟನೆ

ಮನುಷ್ಯ ಸಂಘಜೀವಿ ಮತ್ತು ಭಾವನಾತ್ಮಕ ಜೀವಿ. ಹಲವಾರು ವರ್ಷಗಳಿಂದ ಒಟ್ಟಿಗೆ ಬಾಳುತ್ತಾ ಬಂದವರನ್ನು ಪುನರ್ವಸತಿ ಮಾಡುವಾಗ ಅವರಿದ್ದ ಜಾಗದ ಹತ್ತಿರವೇ ಮಾಡಬೇಕು. ಮತ್ತು ಅವರ ಸಂಬಂಧಿಕರು ಮತ್ತು ನೆರೆಕೆರೆಯವರು ಒಟ್ಟಿಗೆ ಇರುವಂತೆ ನೋಡಿಕೊಳ್ಳುವುದು ಒಳ್ಳೆಯದು. ಅದು ಬಿಟ್ಟು ನೂರಾರು ಕಿಲೋಮೀಟರ್ ದೂರದವರೆಗೆ ಅವರನ್ನು ಸ್ಥಳಾಂತರಿಸಿದರೆ ಅವರ ಸಂಸ್ಕೃತಿ ಮೇಲೆ ಕೆಟ್ಟ ಪರಿಣಾಮವಾಗಿ ಅವರು ಹೊಂದಾಣಿಕೆ ಮಾಡಿಕೊಳ್ಳುವಲ್ಲಿ ವಿಫಲರಾಗುತ್ತಾರೆ. ಇದಕ್ಕಾಗಿ ಸಮಾಜಕಾರ್ಯಕರ್ತನು ಸಮುದಾಯ ಸಂಘಟನೆ ಮಾಡಿ ಈ ಮೂಲಕ ಅಧಿಕಾರಿವರ್ಗಕ್ಕೆ ಸಲಹೆಗಾರನಾಗಿ ವಿಷಯದ ತೀವ್ರತೆಯನ್ನು ಮನನ ಮಾಡಿಸುವುದು.

### ೫.೧.೪.೪.ಸಮಾಜಕಾರ್ಯದ ಆಡಳಿತ

ಅಧಿಕಾರಿ ವರ್ಗ, ಆದಿವಾಸಿ ನಾಯಕರು, ರಾಜಕೀಯ ವ್ಯಕ್ತಿಗಳ ಜೊತೆಗೆ ಮಾಧ್ಯಮ ಜೊತೆಗೂಡಿ ಕೆಲಸ ಮಾಡಿದರೆ ಅರಣ್ಯ ಹಕ್ಕುಗಳ ಕಾಯಿದೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಬಹುದು. ಇದಕ್ಕಾಗಿ ಸಮಾಜಕಾರ್ಯಕರ್ತನು ಅಧಿಕಾರಿವರ್ಗ ಮತ್ತು ಫಲಾನುಭವಿಗಳ ಮಧ್ಯೆ ಸಂವಹನಕಾರನಾಗಿ ಅರಣ್ಯ ಹಕ್ಕುಗಳ ಕಾಯಿದೆಯು ಸಾಮಾಜಿಕ ಸೇವೆಯಾಗಿ ಮಾರ್ಪಾಡಾಗುವಂತೆ ಕಾರ್ಯನಿರ್ವಹಿಸುವುದು.

### ೫.೧.೪.೫. ಸಮಾಜಕಾರ್ಯ ಸಂಶೋಧನೆ

ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನವಾಗಿದೆ. ಎಂದು ಅಧಿಕಾರಿ ವರ್ಗ ಹೇಳುತ್ತಿದ್ದಾರೆ. ಫಲಾನುಭವಿಗಳು ನಮಗೆ ಯಾವುದೇ ಹಕ್ಕುಗಳು ದೊರೆತಿಲ್ಲ ಎಂದು ದೂರುತ್ತಾರೆ. ಇಂತಹ ಅಂಶಗಳ ಸತ್ಯಾಸತ್ಯತೆಯನ್ನು ಅರಿಯಲು ಮತ್ತು ಅರಣ್ಯವಾಸಿಗಳನ್ನು ಹೊರಹಾಕಿದ್ದಾರೋ ಇಲ್ಲವೋ? ಯಾವಾಗ ಮತ್ತು ಯಾವ ಕಾರಣಕ್ಕೆ ಹೊರಹಾಕಿದ್ದಾರೆ. ಸದ್ಯದ ಅವರ ಪರಿಸ್ಥಿತಿ ಹೇಗಿದೆ ಇದೆಲ್ಲವುಗಳನ್ನು ತಿಳಿದುಕೊಳ್ಳಲು ಮತ್ತು ಕಾಯಿದೆ ಅನುಷ್ಠಾನ ಏಕೆ ವಿಳಂಬವಾಗುತ್ತಿದೆ. ಎಂಬ ವಾಸ್ತವ

ಸ್ಥಿತಿ ಅರಿತು ವಿಶ್ಲೇಷಿಸಲು ಸಮಾಜಕಾರ್ಯಕರ್ತರು ಸಮಾಜಕಾರ್ಯ ಸಂಶೋಧನೆಯನ್ನು ಕೈಗೊಂಡು ವರದಿಯನ್ನು ಸಿದ್ಧಪಡಿಸಿ ಸಂಬಂಧ ಪಟ್ಟವರಿಗೆ ಸಲ್ಲಿಸುವುದು.

**೫.೧.೪.೬.ಸಾಮಾಜಿಕ ಪ್ರಚೋದನೆಯ ಕ್ರಿಯೆ**

ಈ ಮೇಲಿನ ಎಲ್ಲಾ ವಿಧಾನಗಳನ್ನು ಬಳಸಿದ್ದಾಗ್ಯೂ ಕಾಯಿದೆ ಅನುಷ್ಠಾನ ವಿಳಂಬವಾದರೆ ಇದನ್ನು 'ರಾಶಿ ಪರಿಹಾರಗಳಿಂದಲೇ ಬಿಡಿಸಲು ಸಾಧ್ಯವಾಗುತ್ತದೆ'[೬] ಹಾಗಾಗಿ ರಾಶಿ ರಾಶಿ ಜನಸಮೂಹವನ್ನು ಒಟ್ಟುಗೂಡಿಸಿ ಸಮಸ್ಯೆಯ ತೀವ್ರತೆಯನ್ನು ಸರ್ಕಾರಕ್ಕೆ, ಅಧಿಕಾರಿ ಶಾಹಿಗೆ ಮತ್ತು ಜನಪ್ರತಿನಿಧಿಗಳಿಗೆ ಮನದಟ್ಟು ಮಾಡಿಸುವ ಕ್ರಿಯೆ ಮಾಡುವುದು.

**೫.೧.೫. ರಾಜ್ಯದ ಕರ್ತವ್ಯ**

ಅ. ರಾಜ್ಯ ಸರ್ಕಾರಗಳು ತಮ್ಮ ಅಧೀನದ ಸಮೂಹ ಮಾಧ್ಯಮ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಮುಖಾಂತರ ಈ ಕಾಯಿದೆ ಕುರಿತು ಜಾಗೃತಿ/ಅರಿವು ಮೂಡಿಸುವುದು ಅಗತ್ಯವಿದೆ. ಇದಕ್ಕಾಗಿ ಜಾಗೃತಿ ಕಾರ್ಯಕ್ರಮಗಳನ್ನು ಏರ್ಪಡಿಸಬೇಕು. ಸ್ಥಳೀಯ ಭಾಷೆಯಲ್ಲಿ ಭಿತ್ತಿ ಪತ್ರಗಳನ್ನು ಹಂಚಲು ಕ್ರಮ ಕೈಗೊಳ್ಳುವುದು.

ಆ. ಪುನರ್ವಸತಿ ಎಂದರೆ ಒಂದಷ್ಟು ಕುದುರೆ ಲಾಯದಂತಹ ಮನೆಗಳನ್ನು ಕಟ್ಟಿಕೊಟ್ಟು, ಒಂದು ಸಮುದಾಯ ಭವನ, ರಸ್ತೆ, ಆಶ್ರಮಶಾಲೆ ಕಟ್ಟಿಸಿಕೊಟ್ಟು ಪುನರ್ವಸತಿ ಮಾಡಿದ್ದೇವೆ ಎಂದರೆ ಸಾಲದು. ಆದಿವಾಸಿಗಳು ಪರಿಸರ ಸ್ನೇಹಿ ಜೀವನ ನಡೆಸುತ್ತಿದ್ದವರು. ಉತ್ತಮಗಾಳಿ, ಸೂರ್ಯ ಚಂದ್ರರ ಬೆಳಕು, ಹಕ್ಕಿಗಳ ಕಲರವ, ಅಮೃತದಂತಹ ಜಲಧಾರೆ, ಆರೋಗ್ಯಪೂರ್ಣ ಆಹಾರ, ಗಡ್ಡೆ ಗೆಣಸು, ಜೇನು, ಹಣ್ಣು ಹಂಪಲು, ಗಿಡಮೂಲಿಕೆ ಇವುಗಳನ್ನು ಬಳಸಿ ಬದುಕುತ್ತಿದ್ದರು. ಅಭಿವೃದ್ಧಿ ಹೆಸರಿನಲ್ಲಿ ನಾವು ಇವುಗಳನ್ನೆಲ್ಲಾ ಕಿತ್ತುಕೊಂಡಿದ್ದೇವೆ. ಹಾಗಾಗಿ ಇದನ್ನು ಪುನರ್ನಿರ್ಮಿಸುವ ಅವಶ್ಯಕತೆ ಇದೆ. ಹಾಗಾಗಿ ಪುನರ್ವಸತಿ ನೀತಿಗಳು ಈ ನಿಟ್ಟಿನಲ್ಲಿ ರಚನೆಗೊಂಡು ಯಶಸ್ವಿಯಾಗಿ ಅನುಷ್ಠಾನ ಆಗಬೇಕಿದೆ.

**ಉಪಸಂಹಾರ**

ಒಂದು ವೇಳೆ ಸರ್ಕಾರ ಅರಣ್ಯ ಹಕ್ಕುಗಳ ಕಾಯಿದೆ ಕುರಿತು ಗಂಭೀರವಾಗಿ ಚಿಂತನೆ ನೆಡೆಸಿದ್ದರೆ ಇದನ್ನು ಯಶಸ್ವಿಯಾಗಿ ಅನುಷ್ಠಾನ ಗೊಳಿಸಬಹುದಿತ್ತು. ಇದಕ್ಕಾಗಿ ಬುಡಕಟ್ಟು ವ್ಯವಹಾರಗಳ ಮಂತ್ರಾಲಯವು ಸಾಕಷ್ಟು ಶ್ರಮವಹಿಸಿದೆ. ಈ ನಿಟ್ಟಿನಲ್ಲಿ ಅನುಷ್ಠಾನ ಹಂತದ ಅಧಿಕಾರಿ ವರ್ಗ ನಿರುತ್ಸಾಹ ಮನಸ್ಥಿತಿ ಮತ್ತು ಪೂರ್ವಗ್ರಹಪೀಡಿತ ಗ್ರಹಿಕೆಯಿಂದ ಹೊರಬಂದರೆ ಆದಿವಾಸಿಗಳು ಮತ್ತು ಇತರೆ ಪಾರಂಪರಿಕ ಅರಣ್ಯವಾಸಿಗಳಿಗೆ ಅವರ ನ್ಯಾಯ ಬದ್ಧ ಹಕ್ಕುಗಳು ದೊರೆಯುತ್ತವೆ. ಇದಕ್ಕಾಗಿ ಅರಣ್ಯ ಇಲಾಖೆ, ಸಮಾಜಕಲ್ಯಾಣ ಇಲಾಖೆ ಮತ್ತು ಕಂದಾಯ ಇಲಾಖೆಗಳು ಸಮನ್ವಯತೆಯಿಂದ ಕಾರ್ಯ ನಿರ್ವಹಿಸಬೇಕಿದೆ. ಅಂದಾಗ ಮಾತ್ರ ಅರಣ್ಯ ಹಕ್ಕುಗಳ ಕಾಯಿದೆಯ ಉದ್ದೇಶ ಸಫಲವಾಗುತ್ತದೆ.

**ಕೊನೆ ಟಿಪ್ಪಣಿ :**

1.Parliament debate,*Supra* note 34.

2.Section 13,The Forest Rights Act, *Supra* note 4.

3. *See generally* Arnold, Community Forestry: Ten Years Review (1992).

4. Campaign for Survival and Dignity, *Open Letter to Vanashakthi on Forest Rights Act* availableat<http://forestrightsact.awardspace.com/updates/open%20to20vanashakthi% 20final.rtf> (Last visited on 11.02.2008.

5. Upadhya, *Supra* note 9 at 54.

೬. ಎಚ್.ಎಂ. ಮರುಳಸಿದ್ದಯ್ಯ, *ದಿಗ್ಭ್ರಾಂತ ಸಮಾಜಕ್ಕೆ ಬೆಳಕಿನ ದಾರಿ:ಸಮಾಜಕಾರ್ಯ*, ಸಂಪುಟ ೧, ಪುಟ ಸಂಖ್ಯೆ ೬೧, ೨೦೧೦.

## ಪೀಠಿಕೆ

ಪ್ರಸ್ತುತ ಅಧ್ಯಾಯದಲ್ಲಿ 'ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ: ಸವಾಲುಗಳು ಮತ್ತು ಸಾಧ್ಯತೆಗಳು' ಎಂಬ ವಿಷಯದ ಮೇಲೆ ಕೈಗೊಂಡ ಸಂಶೋಧನೆಗೆ ಸಂಬಂಧಿಸಿದಂತೆ ಕಂಡುಕೊಂಡ ಫಲಿತಗಳನ್ನು ನಮೂದಿಸಲಾಗಿದೆ. ಅಧ್ಯಯನಕ್ಕೆ ಆಯ್ದುಕೊಂಡ ಸಮುದಾಯದ ಸರ್ವಾಂಗೀಣ ಅಭಿವೃದ್ಧಿಗೆ ಮತ್ತು ಕಾಯಿದೆಯ ಪರಿಣಾಮಕಾರಿ ಅನುಷ್ಠಾನಕ್ಕೆ ಪೂರಕವಾದಂತಹ ಸಲಹೆಗಳನ್ನು ನೀಡಲಾಗಿದೆ.

### ೬. ೧. ಫಲಿತಗಳು

೧. ಅರಣ್ಯ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸಲು ನೌಕರರನ್ನು ನೇಮಿಸಿಕೊಳ್ಳುವಾಗ ಬುಡಕಟ್ಟು ಸಮುದಾಯದ ಅರ್ಹ ಹಾಗೂ ಅನುಭವಿ ವ್ಯಕ್ತಿಗಳನ್ನು ಆಯ್ಕೆ ಮಾಡುವ ಮೂಲಕ ಅರಣ್ಯ ಸಂರಕ್ಷಣೆ ಜೊತೆಗೆ ಆದಿವಾಸಿಗಳ ಸುಸ್ಥಿರ ಬದುಕಿಗೆ ಅನುವು ಮಾಡಿ ಕೊಡುವುದು ಸಾಧ್ಯವಿದೆ.

೨. ಅರಣ್ಯ, ಕಂದಾಯ ಮತ್ತು ಸಮಾಜಕಲ್ಯಾಣ ಇಲಾಖೆಗಳು ಪರಸ್ಪರ ಸಮನ್ವಯತೆ ಯಿಂದ ಕಾರ್ಯನಿರ್ವಹಿಸುವುದು ಹಾಗೂ ಆದಿವಾಸಿ ಸಮುದಾಯಗಳೊಂದಿಗೆ ಧನಾತ್ಮಕವಾಗಿ ಸ್ಪಂದಿಸುವ ಮೂಲಕ ಉದ್ದೇಶಿತ (೨೦೦೬ ರ ಅರಣ್ಯ ಹಕ್ಕುಗಳ ಕಾಯಿದೆಯ ಅನುಷ್ಠಾನ) ಸರ್ಕಾರದ ಗುರಿಯನ್ನು ಸಾಕಾರಗೊಳಿಸುವುದು ಸಾಧ್ಯವಿದೆ.

೩. ಪ್ರಜಾಪ್ರತಿನಿಧಿಗಳು ಪ್ರಸ್ತುತ ಕಾಯಿದೆಯ ಅನುಷ್ಠಾನ ಪ್ರಕ್ರಿಯೆಯಲ್ಲಿ ಆಡಳಿತಾತ್ಮಕ ಬೆಂಬಲ ನೀಡಿ ಸಕಾರಾತ್ಮಕವಾಗಿ ಸ್ಪಂದಿಸುವ ಮೂಲಕ ಆದಿವಾಸಿ ಸಮುದಾಯಗಳಿಗೆ ನೈತಿಕ ಸ್ಥೈರ್ಯ ತುಂಬುವ ಅಗತ್ಯವಿದೆ.

### ೬.೨. ಸಲಹೆಗಳು

ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಹಲವು ಸವಾಲುಗಳನ್ನು ಕಂಡು ಕೊಳ್ಳಲಾಗಿದೆ. ಇವುಗಳನ್ನು ಯಶಸ್ವಿಯಾಗಿ ಪರಿಹರಿಸಲು ಸಲಹೆಗಳನ್ನು ಗುರುತಿಸಲಾಗಿದೆ.

#### ೬.೨.೧. ಸಮುದಾಯ ಆಧಾರಿತ ಹುಲಿ ಸಂರಕ್ಷಿತ ಅರಣ್ಯ/ ರಾಷ್ಟ್ರೀಯ ಉದ್ಯಾನವನ ಎಂದು ಘೋಷಿಸುವುದು

ಅರಣ್ಯ, ವನ್ಯಪ್ರಾಣಿ ಸಂರಕ್ಷಣೆ ಹಾಗೂ ಪರಿಸರ ಸಮತೋಲನ ಕಾಪಾಡುವ ನಿಟ್ಟಿನಲ್ಲಿ ದೇಶಾದ್ಯಂತ ಹಲವು ವನ್ಯಧಾಮಗಳು ಮತ್ತು ರಾಷ್ಟ್ರೀಯ ಉದ್ಯಾನವನಗಳನ್ನು

ಘೋಷಿಸಲಾಗುತ್ತಿದೆ. ಆದರೆ ಇದನ್ನು ಸಮುದಾಯ ಆಧಾರಿತ ಹುಲಿ ಸಂರಕ್ಷಿತ ಅರಣ್ಯ/ ರಾಷ್ಟ್ರೀಯ ಉದ್ಯಾನವನ ಎಂದು ಘೋಷಿಸಿದರೆ ಆದಿವಾಸಿಗಳ ಪಾರಂಪರಿಕ ಜ್ಞಾನವನ್ನು ಸದ್ಬಳಕೆ ಮಾಡಿಕೊಳ್ಳಬಹುದಾಗಿದೆ. ಉದಾ: ಚಾಮರಾಜನಗರ ಜಿಲ್ಲೆಯ ಬಿಳಿಗಿರಿ ರಂಗಸ್ವಾಮಿ ದೇವಸ್ಥಾನ ವನ್ಯಜೀವಿ ಧಾಮವು ೫೪೦ ಚದುರ ಕಿ.ಮೀ ವ್ಯಾಪ್ತಿಯನ್ನು ಹೊಂದಿದ್ದು, ಧಾಮದ ಒಳಗೆ ಯಳಂದೂರು, ಕೊಳ್ಳೆಗಾಲ ಮತ್ತು ಚಾಮರಾಜನಗರ ತಾಲ್ಲೂಕಿನಲ್ಲಿ ಸೋಲಿಗರು ಶತ ಶತಮಾನಗಳಿಂದ ವಾಸಮಾಡುತ್ತಾ ಬಂದಿದ್ದು ವನ್ಯಜೀವಿ ಧಾಮದ ಮಧ್ಯೆ ೨೨ ಪೋಡುಗಳಿದ್ದರೆ ಅರಣ್ಯದ ಅಂಚಿನಲ್ಲಿ ೪೦ ಪೋಡುಗಳ ಜನರು ಅರಣ್ಯದ ಕಿರು ಉತ್ಪನ್ನಗಳನ್ನು ಬಳಸಿ ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಇವರನ್ನು ಅರಣ್ಯ ಮತ್ತು ವನ್ಯಪ್ರಾಣಿ ಸಂರಕ್ಷಣೆಯಲ್ಲಿ ಬಳಸಿಕೊಳ್ಳಬೇಕಾದರೆ ಸಮುದಾಯ ಆಧಾರಿತ ಹುಲಿ ಸಂರಕ್ಷಿತ ಅರಣ್ಯ/ ಸಮುದಾಯ ರಾಷ್ಟ್ರೀಯ ಉದ್ಯಾನವನ ಎಂದು ಘೋಷಿಸಿದರೆ ಉತ್ತಮ ಫಲಿತಾಂಶ ನಿರೀಕ್ಷಿಸಬಹುದು.

**೬.೨.೨.ಅರಣ್ಯ ಕಿರು ಉತ್ಪನ್ನಗಳ ಸುಸ್ಥಿರ ಸಂಗ್ರಹಣೆ ಬಗೆಗೆ ತರಬೇತಿ ನೀಡುವುದು**

ಪ್ರಸ್ತುತ ಅಧ್ಯಯನದಿಂದ ಕಂಡು ಕೊಂಡ ಅಂಶವೆಂದರೆ ಚಾಮರಾಜನಗರ ಜಿಲ್ಲೆಯ ಬಿಳಿಗಿರಿ ರಂಗಸ್ವಾಮಿ ದೇವಸ್ಥಾನ ವನ್ಯಜೀವಿ ಧಾಮ ವ್ಯಾಪ್ತಿಯಲ್ಲಿ ಅಶೋಕ ಪರಿಸರ ಸಂಶೋಧನ ಸಂಸ್ಥೆ (ಏಟ್ರಿ) ಮತ್ತು ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರವು ಸೋಲಿಗರಿಗೆ ಅರಣ್ಯ ಕಿರು ಉತ್ಪನ್ನಗಳನ್ನು ಸುಸ್ಥಿರವಾಗಿ ಸಂಗ್ರಹಿಸುವ . ಬಗ್ಗೆ ತರಬೇತಿಯನ್ನು ನೀಡಿರುತ್ತಾರೆ. ಮತ್ತು ವೈಜ್ಞಾನಿಕ ಸಂಶೋಧನೆಗಳಿಂದ ಸೋಲಿಗರು ಅರಣ್ಯ ಕಿರು ಉತ್ಪನ್ನಗಳನ್ನು ಸುಸ್ಥಿರವಾಗಿ ಸಂಗ್ರಹಿಸುತ್ತಿದ್ದಾರೆ ಎಂಬ ಅಂಶ ವ್ಯಕ್ತವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆಯ ಹೆಚ್.ಡಿ. ಕೋಟೆ, ನಂಜನಗೂಡು, ಹುಣಸೂರು ಮತ್ತು ಪಿರಿಯಾಪಟ್ಟಣ ತಾಲ್ಲೂಕು ಹಾಗೂ ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ಮತ್ತು ಕೊಳ್ಳೆಗಾಲ ತಾಲ್ಲೂಕಿನ ವ್ಯಾಪ್ತಿಯಲ್ಲಿನ ಆದಿವಾಸಿ ಸಮುದಾಯಗಳ ಯುವಕರಿಗೆ ಅರಣ್ಯ ಕಿರು ಉತ್ಪನ್ನಗಳ ಸುಸ್ಥಿರ ಸಂಗ್ರಹಣೆ ಬಗೆಗೆ ತರಬೇತಿ ಅವಶ್ಯಕವಾಗಿದೆ.

**೬.೨.೩.ಅರಣ್ಯ ಉಪ ಉತ್ಪನ್ನಗಳ ಸಂಗ್ರಹಣೆಗೆ ಎಲ್ಲಾ ಅರ್ಹ ಆದಿವಾಸಿ ಕುಟುಂಬಗಳಿಗೆ ಅವಕಾಶ ಕಲ್ಪಿಸುವುದು**

ಮೈಸೂರು ಜಿಲ್ಲೆಯ ಹೆಚ್.ಡಿ.ಕೋಟೆಯ ೧೪ ಹಾಡಿಗಳು ಮತ್ತು ಪಿರಿಯಾಪಟ್ಟಣದ ೫ ಹಾಡಿಗಳು ಹಾಗೂ ಚಾಮರಾಜನಗರ ಜಿಲ್ಲೆಯ ಚಾಮರಾಜನಗರ ತಾಲ್ಲೂಕಿನ ೧೭ ಹಾಡಿಗಳು ಮತ್ತು ಯಳಂದೂರು ತಾಲ್ಲೂಕಿನ ೧೦ ಹಾಡಿಗಳಿಗೆ ನೆಲ್ಲಿಕಾಯಿ, ಪಾಸೆ, ಜೇನು ಇವುಗಳನ್ನು ಮಾತ್ರ ತಮ್ಮ ಬಳಕೆಗೆ ಸಂಗ್ರಹಿಸಲು ಅನುಮತಿ ನೀಡಲಾಗಿದೆ. ಆದರೆ ಇನ್ನೂ ಪ್ರತಿಶತ ೮೦ ಹಾಡಿಗಳ ಆದಿವಾಸಿಗಳಿಗೆ ಅಧಿಕೃತವಾಗಿ

ಅರಣ್ಯ ಉಪ ಉತ್ಪನ್ನಗಳ ಸಂಗ್ರಹಣೆಗೆ ಅನುಮತಿ ದೊರೆಯಬೇಕಾಗಿದೆ. ಅಲ್ಲದೆ ಪಾರಂಪರಿಕವಾಗಿ ಬಳಸುತ್ತಿದ್ದ ಜೇನು, ನೆಲ್ಲಿಕಾಯಿ, ಮಾವಿನ ಮಿಡಿ, ಗಿಡಮೂಲಿಕೆ, ನಾರು, ಬೇರು, ಹಲವು ರೀತಿಯ ಸೊಪ್ಪು, ಸೌದೆ, ಅಂಟು, ರಾಳ, ಪಾಸೆ ಈ ಎಲ್ಲಾ ಉಪ ಉತ್ಪನ್ನಗಳನ್ನು ಕೇವಲ ಸ್ವಂತ ಬಳಕೆಗೆ ಮಾತ್ರವಲ್ಲದೆ ಸಂಗ್ರಹಿಸಿ ಮಾರಾಟ ಮಾಡಲು ಅನುಕೂಲವಾಗುವ ನಿಟ್ಟಿನಲ್ಲಿ ಸಮುದಾಯ ಹಕ್ಕು ಪತ್ರ ನೀಡಬೇಕು.

**೬.೨.೪.ವೈಯಕ್ತಿಕ ಭೂಮಿ ಹಕ್ಕು ನೀಡಿ ಕಂದಾಯ ಭೂಮಿಯಾಗಿ ಪರಿವರ್ತಿಸುವುದು**

ಅರಣ್ಯ ಹಕ್ಕುಗಳ ಮಾನ್ಯತೆ ಕಾಯಿದೆ ೨೦೦೬ ರ ಅಡಿಯಲ್ಲಿ ಚಾಮರಾಜನಗರ ಜಿಲ್ಲೆಯಲ್ಲಿ ೧೬೧೩ ಆದಿವಾಸಿ ಕುಟುಂಬಗಳಿಗೆ ಹಾಗೂ ಮೈಸೂರು ಜಿಲ್ಲೆಯ ೫೫೮ ಕುಟುಂಬಗಳಿಗೆ ವೈಯಕ್ತಿಕ ಭೂಮಿ ಹಕ್ಕುಗಳನ್ನು ಮಾನ್ಯ ಮಾಡಿ ಹಕ್ಕುಪತ್ರಗಳನ್ನು ವಿತರಿಸಲಾಗಿದೆ. ಆದರೆ ಈ ಹಕ್ಕುಪತ್ರಗಳು ಭೂ ಮಾಲಿಕರಿಗೆ ಭೂಮಿಯ ಮೇಲೆ ಸಂಪೂರ್ಣ ಅಧಿಕಾರ ನೀಡುವುದಿಲ್ಲ. ಹಾಗಾಗಿ ಹಾಲಿ ಹಕ್ಕು ಪತ್ರ ವಿತರಿಸಿರುವ ಭೂಮಿಯನ್ನು ಕಂದಾಯ ಭೂಮಿಯನ್ನಾಗಿ ಪರಿವರ್ತಿಸಿ ಆರ್.ಟಿ.ಸಿಯನ್ನು ವಿತರಿಸಲು ಕ್ರಮಕೈಗೊಳ್ಳಬೇಕು. ಅಲ್ಲದೆ ಮುಂದೆ ಭೂಮಿ ವಿತರಿಸುವವರಿಗೂ ಈ ಕ್ರಮ ಅನುಸರಿಬೇಕು. ಇದರಿಂದಾಗಿ ಇಂತಹ ಭೂಮಿ ಹೊಂದಿದ ಆದಿವಾಸಿಗಳು ಸರ್ಕಾರದ ವಿವಿಧ ಯೋಜನೆಗಳ ಸಹಾಯ ಪಡೆಯಬಹುದಾಗಿದೆ. ಊದಾ: ಗಂಗಾ ಕಲ್ಯಾಣ ಯೋಜನೆಯಡಿ ಕೊಳವೆ ಬಾವಿ ಸೌಲಭ್ಯ ಹೊಂದುವುದು.

**೬.೨.೫. ಮೂಲಭೂತ ಸೌಲಭ್ಯಗಳನ್ನು ಕಲ್ಪಿಸುವುದು**

ಮೈಸೂರು ಜಿಲ್ಲೆ ಮತ್ತು ಚಾಮರಾಜನಗರ ಜಿಲ್ಲೆಗಳೆರಡರಲ್ಲೂ ಹಲವು ಆದಿವಾಸಿ ಹಾಡಿ/ಪೋಡುಗಳಿಗೆ ಮೂಲಭೂತ ಸೌಲಭ್ಯಗಳಾದ ಸರ್ವಋತು ರಸ್ತೆ, ಯೋಗ್ಯ ನೀರು, ವಿದ್ಯುತ್ ಸೌಲಭ್ಯ, ಸಂಚಾರಿ ಸೌಲಭ್ಯ, ವಾಸಯೋಗ್ಯ ಮನೆ, ಶೌಚಾಲಯ, ಆರೋಗ್ಯ ಸೇವೆ ಇವುಗಳಿಲ್ಲದೆ ಪರದಾಡುತ್ತಿದ್ದಾರೆ. ಹಾಗಾಗಿ ಮಾನವನ ಮೂಲಭೂತ ಅವಶ್ಯಕತೆಗಳಾದ ಇವುಗಳನ್ನು ಕಲ್ಪಿಸುವುದು ಪ್ರಾಥಮಿಕ ಆದ್ಯತೆಯಾಗಿದೆ. ಎಲ್ಲೆಲ್ಲಿ ವಿದ್ಯುತ್ ಸಂಪರ್ಕ ಕಲ್ಪಿಸಲು ಕಷ್ಟವಾಗುತ್ತಿದೆಯೂ ಅಂತಹ ಕಡೆಗಳಲ್ಲಿ ಸೋಲಾರ್ ವಿದ್ಯುತ್ ಸಂಪರ್ಕ ಕಲ್ಪಿಸುವುದಕ್ಕೆ ಕ್ರಮ ಕೈಗೊಳ್ಳುವುದು.

**೬.೨.೬. ಅರಣ್ಯ ಆಧಾರಿತ ಆದಿವಾಸಿಗಳಿಗೆ ಒಳ ಮೀಸಲಾತಿ ಕಲ್ಪಿಸುವುದು**

ಅರಣ್ಯ ಆಧಾರಿತ ಆದಿವಾಸಿ ಸಮುದಾಯಗಳಾದ ಸೋಲಿಗರು, ಜೇನುಕುರುಬರು, ಬೆಟ್ಟಕುರುಬರು, ಯರವರು ಅರಣ್ಯದಲ್ಲಿ ವಾಸಿಸುತ್ತಿದ್ದು, ಈ ಸಮುದಾಯಗಳು ಬಹಳಷ್ಟು ಹಿಂದುಳಿದಿವೆ. ಆದರೆ ಇತ್ತೀಚೆಗೆ ಮುಂದುವರೆದ ಕೆಲವು ಸಮುದಾಯಗಳನ್ನು

ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿಸಿರುವುದರಿಂದ ಶಿಕ್ಷಣ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಆದಿವಾಸಿ ಪಂಗಡಗಳಿಗೆ ಸ್ಪರ್ದೆ ಇದೆ. ಹಾಗಾಗಿ ಆದಿವಾಸಿಗಳಿಗೆ ಹಕ್ಕುಗಳನ್ನು ಪಡೆದುಕೊಳ್ಳಲು ತೊಂದರೆಯಾಗುತ್ತಿದೆ. ಆದ್ದರಿಂದ ಇಂತಹ ಗಿರಿಜನರಿಗೆ ಪ್ರತ್ಯೇಕ ಅಥವಾ ಒಳ ಮೀಸಲಾತಿ ಕಲ್ಪಿಸಲು ಕ್ರಮ ಕೈಗೊಂಡರೆ ಶೈಕಣಿಕ ಮತ್ತಿತರೆ ಕ್ಷೇತ್ರಗಳಲ್ಲಿ ಅವಕಾಶ/ಆದ್ಯತೆ ಪಡೆಯಬಹುದಾಗಿದೆ.

**೬.೨.೭.ಆದಿವಾಸಿ ಮಕ್ಕಳ ಶಿಕ್ಷಣದ ಗುಣಮಟ್ಟ ಉತ್ತಮ ಪಡಿಸುವುದು**

ಚಾಮರಾಜನಗರ ಜಿಲ್ಲೆಯಲ್ಲಿ ೧೯ ಮತ್ತು ಮೈಸೂರು ಜಿಲ್ಲೆಯಲ್ಲಿ ೨೫ ಗಿರಿಜನ ಆಶ್ರಮ ಶಾಲೆಗಳಿವೆ. ಇಲ್ಲಿ ಮೇಲ್ನೋಟಕ್ಕೆ ತರಬೇತಿ ಹೊಂದಿಲ್ಲದ ಮತ್ತು ಆದಿವಾಸಿಗಳ ಬಗೆಗೆ ಜ್ಞಾನ ಇಲ್ಲದ ಶಿಕ್ಷಕರನ್ನು ನೇಮಿಸಿಕೊಂಡಿರುವುದನ್ನು ಗಮನಿಸಲಾಗಿದೆ. ಇದು ಆದಿವಾಸಿ ಮಕ್ಕಳನ್ನು ಶಿಕ್ಷಣದ ಕಡೆ ಗಮನ ಸೆಳೆಯಲು ವಿಫಲವಾಗಿರುವ ಮುಖ್ಯ ಕಾರಣ ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಹಾಗಾಗಿ ಡಿ.ಎಡ್ ತರಬೇತಿ ಹೊಂದಿದ ಮತ್ತು ಆದಿವಾಸಿಗಳ ಬಗೆಗೆ ಆಸಕ್ತಿ ಮತ್ತು ವಿಶೇಷ ಜ್ಞಾನ ಇರುವ ಯುವ ಶಿಕ್ಷಕರನ್ನು ನೇಮಿಸಬೇಕು. ಅವರಿಗೆ ಆದಿವಾಸಿಗಳ ಆಸಕ್ತಿ ಮತ್ತು ಅವರ ಪಾರಂಪರಿಕ ಜ್ಞಾನದ ಮಹತ್ವ ತಿಳಿಸುವ ಏರ್ಪಾಟು ಮಾಡಬೇಕು. ಹಾಗೆಯೇ ಶಿಕ್ಷಣದಲ್ಲಿ ಅದರ ಅನ್ವಯಿಸುವಿಕೆಯ ತರಬೇತಿಯನ್ನು ನೀಡಬೇಕು. ಮತ್ತು ಅಕ್ಷರ ಜ್ಞಾನ ಹೊಂದಿದ ಆದಿವಾಸಿ ಯುವಕರನ್ನು ಆಶ್ರಮ ಶಾಲೆಗೆ ಬಳಸಿಕೊಳ್ಳುವ ಮೂಲಕ ಆದಿವಾಸಿ ಮಕ್ಕಳನ್ನು ಶಿಕ್ಷಣದ ಕಡೆಗೆ ಗಮನ ಕೊಡುವಂತೆ ಮಾಡಬೇಕು.

ಆಶ್ರಮ ಶಾಲೆಗಳಿಂದ ಉತ್ತೀರ್ಣರಾದ ಆದಿವಾಸಿ ಮಕ್ಕಳು ಕಾಲೇಜು ಶಿಕ್ಷಣಕ್ಕೆ ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಕ್ಕೆ ಬಂದು ಹೊಂದಿಕೊಳ್ಳಲು ಕಷ್ಟವಾಗುತ್ತಿದೆ. ಕಾರಣ ಕಾಲೇಜು ಪ್ರಾರಂಭವಾಗಿ ೨ ತಿಂಗಳ ನಂತರ ಹಾಸ್ಟೆಲ್ ಪ್ರಾರಂಭವಾಗುವುದರಿಂದ ಆಹಾರ ಮತ್ತು ವಸತಿ ಸಮಸ್ಯೆ ಎದುರಿಸಿ ವಿದ್ಯಾಭ್ಯಾಸ ಮೊಟಕುಗೊಳಿಸುತ್ತಿದ್ದಾರೆ. ಆದ್ದರಿಂದ ಇದನ್ನು ಸರಿಪಡಿಸಬೇಕಾಗಿದೆ. ಮತ್ತು ಶಿಕ್ಷಣ ಮುಗಿಸಿದ ನಂತರ ಪಟ್ಟಣಗಳಲ್ಲಿ ಬಂದು ಕೆಲಸ ಮಾಡುವ ಮನಸ್ಥಿತಿ ಇಲ್ಲದ ಮತ್ತು ಪಟ್ಟಣಗಳಿಗೆ ಹೊಂದಿ ಕೊಳ್ಳದ ಯುವ ಸಮೂಹ ಪುನಃ ತಮ್ಮ ಹಾಡಿಗಳಿಗೆ ತೆರಳಿ ಕಾಲ ಹರಣ ಮಾಡುತ್ತಾರೆ. ಕಾರಣ ಅವರಿಗೆ ಅರಣ್ಯ ಉಪ ಉತ್ಪನ್ನಗಳ ಸಂಗ್ರಹಣೆಯ ಜ್ಞಾನವಿಲ್ಲದಾಗಿದೆ. ಹಾಗಾಗಿ ಇಂತಹ ಸಮಸ್ಯೆಯನ್ನು ಬಗೆ ಹರಿಸಲು ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ಜೊತೆ ಜೊತೆಗೆ ಅರಣ್ಯ ುಪ ಉತ್ಪನ್ನಗಳ ಸಂಗ್ರಹ ಕೌಶಲ್ಯ ಕಲಿಸಬೇಕಿದೆ. ಮತ್ತು ಆದಿವಾಸಿಗಳ ಪಾರಂಪರಿಕ ಜ್ಞಾನದ ಮಹತ್ವ ತಿಳಿಯಪಡಿಸಬೇಕು.

### ೬.೨.೮. ಪ್ರತ್ಯೇಕ ಗ್ರಾಮ ಪಂಚಾಯಿತಿಗಳ ರಚನೆ

ಮೈಸೂರು ಜಿಲ್ಲೆಯ ಹೆಚ್.ಡಿ.ಕೋಟೆ, ಹುಣಸೂರು ಮತ್ತು ಪಿರಿಯಾಪಟ್ಟಣ ತಾಲ್ಲೂಕುಗಳಲ್ಲಿನ ಹಲವು ಹಾಡಿಗಳು ಮತ್ತು ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಹಿರಿಯಂಬಲ, ಯಳಂದೂರು ತಾಲ್ಲೂಕಿನ ಬಿಳಿಗಿರಿರಂಗನ ಬೆಟ್ಟ, ಚಾಮರಾಜನಗರ ತಾಲ್ಲೂಕಿನ ಬೇಡಗುಳಿ ಭಾಗದಲ್ಲಿ ಆದಿವಾಸಿಗಳು ಹೆಚ್ಚಾಗಿ ವಾಸಿಸುತ್ತಿದ್ದು ಈ ಪ್ರದೇಶಗಳು ಗುಡ್ಡಗಾಡು ಪ್ರದೇಶಗಳಿಂದ ಕೂಡಿವೆ. ಆದರೆ ಹಾಲಿ ಇರುವ ಗ್ರಾಮ ಪಂಚಾಯಿತಿಗಳು ಹಲವು ಹಾಡಿ ಮತ್ತು ಪೋಡುಗಳಿಗೆ ೮ ರಿಂದ ೧೩ ಕಿಲೋಮೀಟರ್‌ಗಳಷ್ಟು ದೂರವಿರುವುದರಿಂದ ಇಲ್ಲಿನ ನಿವಾಸಿಗಳಿಗೆ ಗ್ರಾಮ ಪಂಚಾಯಿತಿಯೊಟ್ಟಿಗೆ ಕೆಲಸ ಮಾಡಿಕೊಳ್ಳುವುದು ದುಸ್ತರವಾಗಿದೆ. ಇಂತಹ ಕಡೆ ಪಂಚಾಯಿತಿ ಅಧಿನಿಯಮದ ಪ್ರಕಾರ ಗುಡ್ಡಗಾಡು ಪ್ರದೇಶಗಳಲ್ಲಿ ವಿಶೇಷ ಅವಕಾಶ ಬಳಸಿ ಪ್ರತ್ಯೇಕ ಅಂದರೆ ಕನಿಷ್ಠ ೪-೫ ಕಿ.ಮೀ ವ್ಯಾಪ್ತಿಯಲ್ಲಿ ಗ್ರಾಮ ಪಂಚಾಯತಿ ರಚಿಸಲು ಅವಕಾಶ ಕಲ್ಪಿಸಬೇಕು.

### ೬.೨.೯. ಆದಿವಾಸಿ ಸಮುದಾಯ ಭವನಗಳ ನಿರ್ಮಾಣಕ್ಕೆ ನಿವೇಶನ ಮತ್ತು ಅನುದಾನ ದೊರಕಿಸುವುದು

ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳು ಕರ್ನಾಟಕದಲ್ಲಿ ಆದಿವಾಸಿಗಳ ತವರು ನೆಲೆಯಂತಿವೆ. ಈ ನಿಟ್ಟಿನಲ್ಲಿ ಅವರ ಪಾರಂಪರಿಕ ಜ್ಞಾನ ಮತ್ತು ಸಂಸ್ಕೃತಿಯ ಸಂರಕ್ಷಣೆ ಮತ್ತು ಮುಂದುವರಿಕೆ ಅತೀ ಅವಶ್ಯಕವಾಗಿದೆ. ಈ ಮೊದಲು ಆದಿವಾಸಿಗಳು ಅರಣ್ಯದಲ್ಲಿಯೇ ವಿಶೇಷ ಸಂದರ್ಭಗಳಲ್ಲಿ ಸೇರುತ್ತಿದ್ದರು ಮತ್ತು ಸಾಂಸ್ಕೃತಿಕ ವಿನಿಮಯ ಕಾರ್ಯ ನೆರವೇರುತ್ತಿತ್ತು ಆದರೆ ಇಂದಿನ ಹಲವು ಕಠಿಣ ಅಧಿನಿಯಮಗಳ ಹಿನ್ನೆಲೆಯಲ್ಲಿ ಆದಿವಾಸಿಗಳಿಗೆ ಇಂತಹ ಅವಕಾಶ ಮೇಲಿಂದ ಮೇಲೆ ತಾವು ವಾಸಿಸುವ ಪ್ರದೇಶದಲ್ಲಿ ದೊರೆಯಲಾರದು. ಈ ನಿಟ್ಟಿನಲ್ಲಿ ಗ್ರಾಮ ಮಟ್ಟ, ತಾಲ್ಲೂಕು ಮಟ್ಟದಲ್ಲಿ ಹಾಗೂ ಜಿಲ್ಲಾ ಮಟ್ಟದಲ್ಲಿ ಆದಿವಾಸಿಗಳ ಅಭಿವೃದ್ಧಿ ಸಂಘಗಳನ್ನು ರಚಿಸಲು ಮತ್ತು ಸಭೆ ಸೇರಲು, ತಮ್ಮ ಸಮಸ್ಯೆಗಳನ್ನು ಚರ್ಚಿಸಲು ಮತ್ತು ಸಮಾರಂಭಗಳನ್ನು ಏರ್ಪಡಿಸಲು ಅನುಕೂಲವಾಗುವಂತೆ ಸಮುದಾಯ ಭವನಗಳ ನಿರ್ಮಾಣಕ್ಕೆ ಸೂಕ್ತ ಸ್ಥಳದಲ್ಲಿ ಸಾಕಷ್ಟು ನಿವೇಶನ ಮಂಜೂರು ಮಾಡುವ ಜೊತೆಗೆ ಸುಂದರ ಕಟ್ಟಡ ನಿರ್ಮಾಣಕ್ಕೆ ಅನುದಾನವನ್ನು ನೀಡಬೇಕು.

### ೬.೨.೧೦. ತೋಟಗಾರಿಕೆ ಮತ್ತು ವ್ಯವಸಾಯ ಅಭಿವೃದ್ಧಿ ಮಾಡುವುದು

ಅಧ್ಯಯನದಲ್ಲಿ ಕಂಡು ಕೊಂಡಿರುವಂತೆ ಈಗಾಗಲೇ ಕೆಲವು ಕುಟುಂಬಗಳಿಗೆ ವೈಯಕ್ತಿಕ ಹಕ್ಕು ಮಂಜೂರು ಮಾಡಲಾಗಿದೆ. ಆದರೆ ಈ ಭೂಮಿಯ ಪ್ರಮಾಣ

ಬಹಳಷ್ಟು ಕಡಿಮೆಯಿದ್ದು ಇಲ್ಲಿ ಸಾಂಪ್ರದಾಯಿಕ ಬೆಳೆಗಳನ್ನು ಬೆಳೆದು ಜೀವನ ನಿರ್ವಹಣೆ ಮಾಡುವುದು ಕಷ್ಟಕರವಾದುದಾಗಿದೆ. ಹಾಗಾಗಿ ಅತ್ಯಲ್ಪ ಭೂಮಿಯಲ್ಲಿಯೇ ಹೆಚ್ಚಿನ ಮತ್ತು ನಿರಂತರ ಆದಾಯ ಗಳಿಸುವ ನಿಟ್ಟಿನಲ್ಲಿ ತೋಟಗಾರಿಕಾ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹ, ತರಬೇತಿ, ಆಧುನಿಕ ಯಂತ್ರಗಳು, ನೀರಾವರಿ ಸೌಲಭ್ಯ ಮತ್ತು ಅನುದಾನವನ್ನು ನೀಡಬೇಕು. ಜೊತೆಗೆ ಸಾವಯವ ಗೊಬ್ಬರ ತಯಾರಿಸುವುದರ ಬಗೆಗೆ ತರಬೇತಿ ನೀಡಿ ಸಾವಯವ ವ್ಯವಸಾಯ ಅಭಿವೃದ್ಧಿಗೆ ಪ್ರೇರಣೆ ನೀಡಬೇಕಾಗಿದೆ.

### ೬.೨.೧೧. ಲ್ಯಾಂಪ್ಸ್ ಸಹಕಾರಿ ಸಂಘದ ಬಲಪಡಿಸುವಿಕೆ

ಆದಿವಾಸಿಗಳು ಸಂಗ್ರಹಿಸಿದ ಅರಣ್ಯ ಉಪ ಉತ್ಪನ್ನಗಳಿಗೆ ಯೋಗ್ಯ ಬೆಲೆ ದೊರಕಿಸಿಕೊಡಬೇಕು. ಇದಕ್ಕಾಗಿ ಲ್ಯಾಂಪ್ಸ್ ಸೊಸೈಟಿಗೆ ಸಾಕಷ್ಟು ಸಬ್ಸಿಡಿ ಹಣ ಬಿಡುಗಡೆ ಮಾಡಬೇಕಾಗಿದೆ. ಆದಿವಾಸಿಗಳಿಗೆ ಅವಶ್ಯಕವಾದ ವಸ್ತುಗಳು ಯೋಗ್ಯ ಬೆಲೆಯಲ್ಲಿ ದೊರೆಯುವಂತೆ ಮಾಡಬೇಕು. ಸಂಗ್ರಹಿಸಿದ ಉತ್ಪನ್ನಗಳು ಕೆಡದಂತೆ ಕೂಡಿಡಲು ಅವಶ್ಯಕವಾದ ವ್ಯವಸ್ಥೆ ಕಲ್ಪಿಸುವುದು. ಉತ್ತಮ ಮಾರುಕಟ್ಟೆ ಸೌಲಭ್ಯ ಹೊದಗಿಸುವುದು. ಈ ನಿಟ್ಟಿನಲ್ಲಿ ಆದಿವಾಸಿಗಳ ಆರ್ಥಿಕ ಸಬಲೀಕರಣದ ಜೊತೆಗೆ ಸಾಮಾಜಿಕ, ಶೈಕ್ಷಣಿಕ, ರಾಜಕೀಯ ಸಬಲೀಕರಣದ ಬಗ್ಗೆ ಆಲೋಚಿಸಬೇಕಾಗಿದೆ. ಮತ್ತು ಈ ನಿಟ್ಟಿನಲ್ಲಿ ಮೇಲ್‌ಸ್ಥರಕ್ಕೆ  ಕೊಂಡಯ್ಯಬೇಕಾಗಿದೆ. ಜಿಲ್ಲಾ ಮಟ್ಟದಲ್ಲಿ ಪರಿಣಾಮಕಾರಿಯಾದ ಬೆಲೆ ನಿಗದಿ, ನಿಯಂತ್ರಣ ಸಮಿತಿ ರಚಿಸಬೇಕು. ಮತ್ತು ಇದು ಪ್ರತೀ ವರ್ಷ ಬೆಲೆಗಳನ್ನು ಪರಿಶೀಲಿಸಬೇಕು. ಹಾಗೂ ಸ್ಥಳೀಯ ವ್ಯಾಪಾರಸ್ಥರ ಕುತಂತ್ರದಿಂದ ಆದಿವಾಸಿಗಳನ್ನು ಸಂರಕ್ಷಿಸುವ ಕೆಲಸವಾಗಬೇಕು. ಅಳತೆ ಮತ್ತು ತೂಕದಲ್ಲಿ ಮೋಸಗೊಳಿಸುವವರಿಗೆ ಕಠಿಣ ಶಿಕ್ಷೆ ನಿಗದಿಯಾಗಬೇಕು.

### ೬.೨.೧೨. ಸಾಮಾಜಿಕ ಭದ್ರತೆ ಯೋಜನೆಗಳ ಯಶಸ್ವೀ ಅನುಷ್ಠಾನ

ಸರ್ಕಾರವು ಸರ್ವಜನರ ಹಿತಕ್ಕಾಗಿ ಸಾಮಾಜಿಕ ಭದ್ರತೆ ಮತ್ತು ಸಾಮಾಜಿಕ ನ್ಯಾಯ ಹಿನ್ನೆಲೆಯಲ್ಲಿ ಆಹಾರ ಭದ್ರತೆ, ಆರೋಗ್ಯ ಸೇವೆ, ವಿಧವಾ ವೇತನ, ವೃದ್ಧಾಪ್ಯ ವೇತನ, ಅಂಗವಿಕಲರ ವೇತನ, ಮುಂತಾದ ಸಮಾಜ ಕಲ್ಯಾಣ ಯೋಜನೆಗಳನ್ನು ತಂದಿದೆ. ಆದರೆ ಇವುಗಳು ಇನ್ನೂ ಕೂಡ ಪರಿಣಾಮಕಾರಿಯಾಗಿ ಆದಿವಾಸಿಗಳಿಗೆ ತಲುಪಿಸಬೇಕಾದ ಅವಶ್ಯಕತೆ ಇದೆ.

## ಸಮಾರೋಪ

ಅರಣ್ಯ ಮತ್ತು ವನ್ಯ ಪ್ರಾಣಿ ರಕ್ಷಣೆ ನೆಪದಲ್ಲಿ ಕಾಡನ್ನು ತಮ್ಮ ಸುಪರ್ಧಿಗೆ ತೆಗೆದುಕೊಂಡ ಅರಣ್ಯ ಇಲಾಖೆ ಅದರ ಗರ್ಭದಲ್ಲಿ ಅಡಗಿ ಜೀವಿಸುತ್ತಿದ್ದ ಆದಿವಾಸಿಗಳನ್ನು ತಮ್ಮ ಶತೃಗಳಂತೆ ಭಾವಿಸಿದರು. ಅದುವರೆಗೆ ಸ್ವಂತ ಆಸ್ತಿಯ ಕಲ್ಪನೆಯಿಲ್ಲದೆ ಸ್ವಚ್ಚಂದವಾಗಿ ಬದುಕುತ್ತಿದ್ದವರಿಗೆ ಖಾತೆ, ಹಕ್ಕುಪತ್ರ, ಪಹಣಿ, ಪಟ್ಟ ಕೇಳಲು ಪ್ರಾರಂಭಿಸಿದರು. ಹೀಗೆ ಪ್ರಶ್ನಿಸುವ ಹೊಸ ಬಗೆಯ ಜನರನ್ನು ಕಂಡು ದಿಗಿಲುಗೊಂಡರು. ಅರಣ್ಯ ಇಲಾಖೆಯ ಸಿಬ್ಬಂಧಿಗಳ ಕಿರುಕುಳದಿಂದ ಅರಣ್ಯ ಮತ್ತು ಆದಿವಾಸಿಗಳ ಅವಿನಾಭಾವ ಸಂಬಂಧ ಕೇವಲ ಕೃತಕವಾಯಿತು. ಇಂತಹ ಡೋಲಾಯಮಾನದಲ್ಲಿ ಬದುಕುತ್ತಿರುವ ಇವರು ಅತಂತ್ರದ ಸ್ಥಿತಿ ತಲುಪಿದರು. ಈ ಸ್ಥಿತಿಯಲ್ಲಿ ಆದಿವಾಸಿಗಳ ಹಕ್ಕುಗಳನ್ನು ಮಾನ್ಯ ಮಾಡುವ ಉದ್ದೇಶದಿಂದ ಅರಣ್ಯ ಹಕ್ಕುಗಳ ಕಾಯಿದೆಯನ್ನು ತರಲಾಯಿತು.

ಅಧ್ಯಯನದ ಉದ್ದೇಶಗಳಂತೆ ಅರಣ್ಯ ಹಕ್ಕುಗಳ ಕಾಯಿದೆಯಿಂದ ಆದಿವಾಸಿ ಸಮುದಾಯಗಳ (ಅರಣ್ಯವಾಸಿ ಬುಡಕಟ್ಟುಗಳು) ಮೇಲಾಗಿರುವ ಪರಿಣಾಮಗಳನ್ನು ಅಧ್ಯಾಯ ಎರೆಡರಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ. ಅಧ್ಯಯನದ ಪ್ರಸ್ತುತತೆ ಮತ್ತು ಮಹತ್ವದಲ್ಲಿ ವಿಷಯ ಪ್ರಸ್ತುತಪಡಿಸಿರುವಂತೆ ಇದರ ಅಧ್ಯಯನವು ಸಮುದಾಯಕ್ಕೆ ಮತ್ತು ಕಾಯಿದೆ ಅನುಷ್ಠಾನ ಮಾಡುವವರಿಗೆ ಸಹಕಾರಿಯಾಗುವಂತಹ ಅಂಶಗಳು ಪ್ರತಿಯೊಂದು ಅಧ್ಯಾಯಗಳಲ್ಲೂ ವ್ಯಕ್ತವಾಗಿದೆ. ಇಲಾಖೆಗಳಲ್ಲಿ ಕಾನೂನಿನ ತೊಡಕು ಎದುರಾಗಿದ್ದು ಆ ಗೊಂದಲದಿಂದ ಉದ್ದೇಶಿತ ಬುಡಕಟ್ಟುಗಳು ಸಂಕಷ್ಟಗಳನ್ನು ಎದುರಿಸುವಂತಾಗಿದೆ. ಮತ್ತು ಇವುಗಳನ್ನು ಪರಸ್ಪರ ಚರ್ಚೆಯಿಂದ ಬಗೆಹರಿಸಿಕೊಳ್ಳದ ಕಾರಣ ಕಾಯಿದೆ ಅನುಷ್ಠಾನ ವಿಳಂಬವಾಗುತ್ತಿರುವುದಕ್ಕೆ ಸಾಕಷ್ಟು ಪುರಾವೆಗಳನ್ನು ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದ ಸವಾಲುಗಳು ಎಂಬ ಅಧ್ಯಾಯ ಶೀರ್ಷಿಕೆ ಅಡಿ ನೀಡಲಾಗಿದೆ.

ಸೋಲಿಗರು, ಜೇನುಕುರುಬರು, ಬೆಟ್ಟಕುರುಬರು ಮತ್ತು ಯರವ ಸಮುದಾಯಗಳು ಅರಣ್ಯದೊಂದಿಗೆ ಹೊಂದಿರುವ ಅವಿನಾಭಾವ ಸಂಬಂಧಗಳು ಹಾಗೂ ಅವರ ಜೀವನ ಶೈಲಿ, ಅವಶ್ಯಕತೆಗಳು, ಸಮಸ್ಯೆಗಳು ಮತ್ತು ಪಾರಂಪರಿಕ ಜ್ಞಾನವನ್ನು ಗುರುತಿಸಲಾಗಿದೆ. ಇವುಗಳ ಹಿನ್ನೆಲೆಯಲ್ಲಿ ಅರಣ್ಯ ಹಕ್ಕುಗಳ ಕಾಯಿದೆಯು ಆದಿವಾಸಿ ಸಮುದಾಯಕ್ಕೆ ಅತೀ ಅವಶ್ಯಕವಾದದ್ದಾಗಿದೆ ಎಂಬುದು ಮನದಟ್ಟಾಗುತ್ತದೆ. ಇದು ಈ ಸಮುದಾಯಗಳ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾಗಿದೆ ಮತ್ತು ಆದಿವಾಸಿಗಳ ಇಚ್ಚೆಯನ್ನು ಪೂರೈಸುವ ಉದ್ದೇಶಗಳನ್ನು ಹೊಂದಿದೆ. ಹಾಗೆಯೇ ಕಾಯಿದೆಯ ಆಶೋತ್ತರಗಳನ್ನು ಈ ಸಮುದಾಯ ಈಡೇರುಸುತ್ತದೆ ಎಂಬುದನ್ನು ಅರಿಯಲಾಗಿದೆ.

ಸದಾಶಯದೊಂದಿಗೆ ಜಾರಿಗೊಳಿಸಲಾದ ಅರಣ್ಯ ಹಕ್ಕುಗಳ ಕಾಯಿದೆಗೆ ವೈಶಿಷ್ಟಪೂರ್ಣವಾದ ಹಿನ್ನೆಲೆ ಇರುವುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಒಂದು ಸಮುದಾಯಕ್ಕೆ ಆದ ಅನ್ಯಾಯವನ್ನು ಸರಿಪಡಿಸಿಸುವ ನಿಟ್ಟಿನಲ್ಲಿ ತರಲಾದ ಕಾಯಿದೆಯು ಅನುಷ್ಠಾನ ಹಂತದಲ್ಲಿ ಯಶಸ್ವಿಯಾಗಿಲ್ಲದಿರುವುದನ್ನು ಕಂಡುಕೊಳ್ಳಲಾಗಿದೆ.

ಅಧ್ಯಯನದ ಉದ್ದೇಶದಲ್ಲಿ ಹೇಳಿರುವಂತೆ ಅರಣ್ಯ ಇಲಾಖೆ, ಕಂದಾಯ ಇಲಾಖೆ, ಸಮಾಜ ಕಲ್ಯಾಣ ಇಲಾಖೆಗಳಲ್ಲಿ ಎದುರಾಗಿರುವ ಗೊಂದಲಗಳು ಮತ್ತು ವಿವಿಧ ಇಲಾಖೆಗಳ ಮಧ್ಯೆ ಸಮನ್ವಯತೆ ಕೊರತೆಯಿಂದ ಕಾಯಿದೆಯ ಅನುಷ್ಠಾನಕ್ಕೆ ಹಲವು ಸವಾಲುಗಳು ಎದುರಾಗಿರುವುದನ್ನು ಕಾಣಲಾಗಿದೆ. ಹಾಗೆಯೇ ಕಾಯಿದೆಯ ಯಶಸ್ವೀ ಅನುಷ್ಠಾನಕ್ಕೆ ಕಂದಾಯ ಇಲಾಖೆ, ಸಮಾಜಕಲ್ಯಾಣ ಇಲಾಖೆ ಮತ್ತು ಅರಣ್ಯ ಇಲಾಖೆಗಳು ಕೈಗೊಳ್ಳಬೇಕಾದ ಕ್ರಮಗಳು ಮತ್ತು ವೃತ್ತಿಪರ ಸಮಾಜಕಾರ್ಯಕರ್ತನು ಅನುಸರಿಸಬೇಕಾದ ನೀತಿಗಳನ್ನು ಕಂಡುಕೊಳ್ಳಲಾಗಿದೆ.

ಕೊನೆಯದಾಗಿ ನಮ್ಮ ಅರಣ್ಯ, ಬೆಟ್ಟ, ಗುಡ್ಡ, ಕಣಿವೆ, ನದಿ ಮತ್ತು ತೊರೆಗಳು ಯಥಾಸ್ಥಿಯಲ್ಲಿ ಉಳಿಯಬೇಕು. ಆದಿವಾಸಿಗಳ ಜೀವನ ಹಸನಾಗಬೇಕು. ಇದಕ್ಕಾಗಿ ಅರಣ್ಯವನ್ನು ಆದಿವಾಸಿಗಳಿಗಳ ತೆಕ್ಕೆಗೆ ಹಾಕಬೇಕು. ಅರಣ್ಯ ಲೂಟಿ ಕೋರರನ್ನು ಹೊರ ದಬ್ಬಬೇಕು. ಆದಿವಾಸಿಗಳು ಸಂಗ್ರಹಿಸುವ ಅರಣ್ಯ ಉಪ ಉತ್ಪನ್ನಗಳು ಮತ್ತು ಉತ್ಪಾದಿಸುವ ಕರಕುಶಲ ವಸ್ತುಗಳು ಸಹಕಾರ ಸಂಘಗಳ ಮೂಲಕ ಮಾರುಕಟ್ಟೆ ತಲುಪಬೇಕು. ಈ ಮೂಲಕ ಆದಿವಾಸಿಗಳ ಆರ್ಥಿಕ ಸಬಲತೆ ಕಾಣಬೇಕು. ಈಗಿರುವ ಆಶ್ರಮ ಶಾಲೆಗಳಲ್ಲಿ ಆದಿವಾಸಿಗಳ ಪಾರಂಪರಿಕ ಜ್ಞಾನದ ಪ್ರಾಯೋಗಿಕ ಶಿಕ್ಷಣ ನೀಡುವಂತಾಗಬೇಕು. ಈ ನಿಟ್ಟಿನಲ್ಲಿ ಅಧ್ಯಯನಕಾರರು, ವಿದ್ವಾಂಸರು, ಮಾನವಶಾಸ್ತ್ರಜ್ಞರು, ವೃತ್ತಿಪರ ಸಮಾಜಕಾರ್ಯಕರ್ತರು, ಸಮಾಜಶಾಸ್ತ್ರಜ್ಞರು ಆಲೋಚಿಸಬೇಕು. ಮತ್ತು ಪ್ರಭುತ್ವ ಪ್ರಾಮಾಣಿಕವಾಗಿ ಆಲೋಚನೆಗಳನ್ನು ಕಾರ್ಯರೂಪಕ್ಕೆ ತರಬೇಕು. ಹೀಗಾದಾಗ ಮಾತ್ರ ಅರಣ್ಯ ಹಕ್ಕುಗಳ ಕಾಯಿದೆ ಜಾರಿಗೆ ತಂದದ್ದಕ್ಕೂ ಸಾರ್ಥಕವಾಗುತ್ತದೆ. ಒಟ್ಟಿನಲ್ಲಿ ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನದಲ್ಲಿ ಕಂಡು ಬಂದಿರುವ ಎಲ್ಲಾ ಗೊಂದಲಗಳೂ ನಿವಾರಣೆಯಾಗಬೇಕಿದೆ. ಇದಕ್ಕೆ ಆದಿವಾಸಿಗಳ ಕ್ರಿಯಾತ್ಮಕ ಭಾಗವಹಿಸುವಿಕೆ ಮತ್ತು ಅಧಿಕಾರಿ ವರ್ಗದ ಧನಾತ್ಮಕ ಆಲೋಚನೆ ಅಗತ್ಯವಿದೆ. ಅಂದಾಗ ಮಾತ್ರ ಆದಿವಾಸಿಗಳಿಗೆ ಅರಣ್ಯದ ಮಡಿಲು ದೊರೆಯುತ್ತದೆ. ಅವರ ಅಸ್ತಿತ್ವ ಉಳಿಯುತ್ತದೆ. ಬವಣೆಗಳು ನಿವಾರಣೆಯಾಗುತ್ತವೆ. ಹೀಗೆ ಆದಿವಾಸಿಗಳ ಬದುಕಿನ ಹಸನದೊಂದಿಗೆ ನಾಗರೀಕ ಜಗತ್ತಿನ ಹಸನನ್ನು ಕಾಣಬೇಕು.

# ಪರಾಮರ್ಶನ ಸಾಹಿತ್ಯ

ಅಧಿಸೂಚನೆ, ಜಿ.ಎಸ್.ಆರ್. ಸಂ. ೬೬೯ (ಇ) ಭಾರತ ಸರ್ಕಾರ ಬುಡಕಟ್ಟು ವ್ಯವಹಾರಗಳ ಮಂತ್ರಾಲಯ, ನವದೇಹಲಿ,೬ ನೇ ಸೆಪ್ಟೆಂಬರ್ ೨೦೧೨.

ಅನುಪಮಾ. ಹೆಚ್.ಎಸ್, *'ಪೂನಾ ಒಪ್ಪಂದ ಇತಿಹಾಸದ ಕೆಲವು ಮರೆತ ಪುಟಗಳು'* ಪ್ರಜಾವಾಣಿ ಸಂಚಿಕೆ ೯, ೨ ಅಕ್ಟೋಬರ್ ೨೦೧೧.

ಉಮಾಪತಿ. ಕೆ. ವಿನಯ್ ನ, *'ಬಂಡೀಪುರದ ಅಭಯಾರಣ್ಯದಲ್ಲಿ ಶಾಸಕರ ರೆಸಾರ್ಟ್'* ವಿಜಯ ಕರ್ನಾಟಕ, ಸಂಪುಟ ೯, ಸಂಚಿಕೆ ೨೯೨, ಚಿತ್ರದುರ್ಗ, ೩೦ ಏಪ್ರಿಲ್ ೨೦೧೨.

ಉಮಾಪತಿ.ಡಿ, *ಈ ಆದಿವಾಸಿ 'ಮುನ್ನಿ' ನಿಮ್ಮ ಮಗಳೇ ಆಗಿದ್ದಿದ್ರೆ.....* ವಿಜಯ ಕರ್ನಾಟಕ,ಸಂಪುಟ ೯, ಸಂಚಿಕೆ ೨೬೯, ಚಿತ್ರದುರ್ಗ, ೭ ಏಪ್ರಿಲ್ ೨೦೧೨.

ಓಬಳೇಶ್.ಕೆ.ಹೆಚ್, *'ರಾಜ್ಯದಲ್ಲಿ ಹುಲಿ ಸಂರಕ್ಷಣಾ ನಿಧಿ ಸ್ಥಾಪನೆ'* ಪ್ರಜಾವಾಣಿ, ದಾವಣಗೆರೆ, ೧೧ ಅಕ್ಟೋಬರ್, ೨೦೧೧.

ಕುಂದೂರು ಉಮೇಶಭಟ್ಟ, *'ನಾಗರ ಹೊಳೆಯಲ್ಲಿ ಈಗ ಬಿತ್ತನೆ ಕಾಲ* ವಿಜಯ ಕರ್ನಾಟಕ, ಸಂಪುಟ ೯, ಸಂಚಿಕೆ ೨೯೨, ಚಿತ್ರದುರ್ಗ, ೩೦ ಏಪ್ರಿಲ್ ೨೦೧೨.

ಕೇಶವನ್ ಪ್ರಸಾದ್ ಕೆ, *ಸೋಲಿಗರು ಹಾಡಿದ ಬಿಳಿಗಿರಿ ರಂಗನ ಕಾವ್ಯ,* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

ಗೋಪಿನಾಥ್.ಆರ್, ರಕ್ಷಣೆಗಾಗಿ 'ಅರಣ್ಯಗಳ ರೋದನ' ಪ್ರಜಾವಾಣಿ, ದಾವಣಗೆರೆ, ೨೮ ಜುಲೈ, ೨೦೧೧.

ಚಂದ್ರಶೇಖರ ಕಂಬಾರ, *'ಬರವಣಿಗೆಯೇ ಸಂಭ್ರಮಾಚರಣೆ'* ಪ್ರಜಾವಾಣಿ ಸಂಚಿಕೆ ೯, ದಾವಣಗೆರೆ, ಅಕ್ಟೋಬರ್ ೨, ೨೦೧೧.

ಚಂದ್ರಪೂಜಾರಿ.ಎಂ, *'ಅಭಿವೃದ್ಧಿ ಮತ್ತು ಸಾಂಸ್ಕೃತಿಕ ರಾಜಕೀಯ'* ವಿಜಯ ಕರ್ನಾಟಕ, ೧೪.೦೬.೨೦೧೩, ಸಂಪುಟ ೧೦,ಸಂಚಿಕೆ ೩೩೭.

ಚಿಣ್ಣಪ್ಪ. ಕೆ.ಎಂ. (ನಿರೂಪಣೆ:ಟಿ.ಎಸ್.ಗೋಪಾಲ್), *ಕಾಡಿನೊಳಗೊಂದು ಜೀವ,* ನವಕರ್ನಾಟಕ ಪಬ್ಲಿಕೇಶನ್, ಬೆಂಗಳೂರು, ೨೦೧೧.

ಚೈತನ್ಯ ಪ್ರಕಾಶನ, ವನ್ಯಜೀವಿ (ರಕ್ಷಣಾ) ಅಧಿನಿಯಮ, ೧೯೭೨, ವನ್ಯಜೀವಿ (ವ್ಯವಹರಣೆಗಳು ಮತ್ತು ಪ್ರಾಣಿವಸ್ತುಗಳ) ನಿಯಮಗಳು, ೧೯೭೩, ಧಾರವಾಡ. ೨೦೧೦.

ಜಯದೇವ.ಜಿ.ಎಸ್., *ಗಿರಿಜನ ಸಂಸ್ಕೃತಿಯ ಮೇಲೆ ಬದಲಾಗುತ್ತಿರುವ ಆಹಾರ-ವ್ಯವಸಾಯ ಪದ್ಧತಿಯ ಪರಿಣಾಮಗಳು,* ಹೊಸತು, ಸೆಪ್ಟೆಂಬರ್ ೨೦೧೨.

ಟಿ.ಎನ್.ಎನ್, *'ಪಶ್ಚಿಮ ಘಟ್ಟ ಗಣಿಗಾರಿಕೆ ನಿಷೇದ,* ವಿಜಯ ಕರ್ನಾಟಕ,ಸಂಪುಟ ೯, ಸಂಚಿಕೆ ೨೪೨, ಚಿತ್ರದುರ್ಗ, ಮಾರ್ಚ್ ೯, ೨೦೧೨.

ಟೀಡ್ ಟ್ರಸ್ಟ್, *ಅರಣ್ಯ ಹಕ್ಕಿನ ಕಾಯ್ದೆಯ ಮಾರ್ಗದರ್ಶಿ, ಜೀವನೋಪಾಯ ಹಾಗೂ ಬದುಕಿನ ಘನತೆಗಾಗಿ ಆಂದೋಲನ,* ಯಲ್ಲಾಪುರ, ಉತ್ತರ ಕನ್ನಡ.

ದುರ್ಗಾದಾಸ್ ಬಸು, *ಭಾರತದ ಸಂವಿಧಾನ ಪರಿಚಯ,* ಲೆಕ್ಸಿಸ್ ನೆಕ್ಸಿಸ್.೨೦೧೩.

ನಾಗೇಂದ್ರ ಕಾರ್ವಿ, *'ಕೈಗಾ ಸ್ಥಳಾಂತರಕ್ಕೆ ಗ್ರಾಮಸ್ಥರ ಆಗ್ರಹ'* ಪ್ರಜಾವಾಣಿ, ಸಂಪುಟ ೯, ದಾವಣಗೆರೆ, ೧೭ ಡಿಸೆಂಬರ್ ೨೦೧೧.

ನಾರಾಯಣ ಕಿಕ್ಕೇರಿ, (ಅನುವಾದ:ರಾಜೇಶ್ವರಿ ಮಹೇಶ್ವರಯ್ಯ), *ಜೇನು ಕುರುಬರಲ್ಲಿ ಸ್ಥಳ ಹಾಗೂ ವಿಶ್ವದ ಪರಿಕಲ್ಪನೆ,* ಗಿರಿಜನ ಸಂಸ್ಕೃತಿ, (ಸಂ) ಕಾಳೇಗೌಡ ನಾಗವಾರ ಮತ್ತು ಎನ್ ಹುಚ್ಚಪ್ಪ ಮಾಸ್ತರ್, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦.

ನಾರಾಯಣ ಕಿಕ್ಕೇರಿ, *ಜೇನುಕುರುಬ ಬುಡಕಟ್ಟು ಜನಾಂಗದ ಅವ್ಯಕ್ತ ಸಾಂಸ್ಕೃತಿಕ ಪರಂಪರೆ,* ನ್ಯಾಷನಲ್ ಫೋಕ್‌ಲೋರ್, ಸಪೋರ್ಟ ಸೆಂಟರ್, ಚೆನ್ನೈ, ೨೦೧೧.

ಫಾಲೋಜಿನ ಆರಾಧ್ಯ, *'ಬಿಳಿಗಿರಿ ಬನದಲ್ಲಿ ರೆಸಾರ್ಟ್'* ವಿಜಯ ಕರ್ನಾಟಕ, ಸಂಪುಟ ೯, ಸಂಚಿಕೆ ೨೩೮, ಚಿತ್ರದುರ್ಗ, ಮಾರ್ಚ್ ೫, ೨೦೧೨.

ಪ್ರಕಾಶ್.ಎಲ್, *'ವಿದ್ಯುತ್ ಘಟಕ ಹೆಸರಿನಲ್ಲಿ ನೂರಾರು ಎಕರೆ ಅರಣ್ಯ ಸ್ವಾಹಾ'* ವಿಜಯ ಕರ್ನಾಟಕ, ಸಂಪುಟ ೯, ಸಂಚಿಕೆ ೩೪೬, ಚಿತ್ರದುರ್ಗ, ಜೂನ್ ೨೩, ೨೦೧೨.

ಪ್ರಕಾಶಕರು, ಕರ್ನಾಟಕ ಅರಣ್ಯ ಅಧಿನಿಯಮ, ೧೯೬೩ ಮತ್ತು ಕರ್ನಾಟಕ ಅರಣ್ಯ ನಿಯಮಗಳು, ೧೯೬೯, ಚೈತನ್ಯ ಪ್ರಕಾಶನ, ಧಾರವಾಡ, ೨೦೦೯.

ಪ್ರಜಾವಾಣಿ ವಾರ್ತೆ, *'ಮತ್ತೆ ಕಾಳ್ಗಿಚ್ಚು ಅಪಾರಹಾನಿ'* ಪ್ರಜಾವಾಣಿ ಸಂಪುಟ ೧೦, ಸಂಚಿಕೆ ೮೫, ೨೬, ಮಾಚ್, ೨೦೧೨, ದಾವಣಗೆರೆ.

ಪ್ರಜಾವಾಣಿ ವಾರ್ತೆ, *'ಅರಣ್ಯದಲ್ಲಿ ಗಾಂಜಾ ಕೃತಿ' ಅಧಿಕಾರಿಗಳ ಅಮಾನತು'* ಪ್ರಜಾವಾಣಿ ಸಂಪುಟ ೯, ೨೫ ಡಿಸೆಂಬರ್ ೨೦೧೧, ದಾವಣಗೆರೆ.

ಪ್ರಭಾಕರ್.ಎ.ಎಸ್, *ಕರ್ನಾಟಕದಲ್ಲಿ ಆದಿವಾಸಿ ರೈತ ಹೋರಾಟಗಳ ಸ್ವರೂಪ,* ಕಾಗೋಡು ಚಳುವಳಿ, ಬೋರಲಿಂಗಯ್ಯ.ಹಿ.ಚಿ. (ಸಂ) ಮತ್ತು ಹುಚ್ಚಪ್ಪ ಮಾಸ್ತರ, ಮಲೆನಾಡು ಜಾನಪದ ಲೋಕ, ೨೦೦೨.

ಪ್ರಶಾಂತ್.ಹೆಚ್.ಡಿ, ಕರ್ನಾಟಕ ರಾಜ್ಯ ಕೋಶ–೪ ಜನ ಸಮುದಾಯ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಪ್ರಸಾದ್ ರಕ್ಷಿದಿ, *'ಆನೆ ದಾರಿಯಲ್ಲಿ ಅಲ್ಲೋಲ ಕಲ್ಲೋಲ'* ಪ್ರಜಾವಾಣಿ ಸಂಪುಟ ೧೦, ಸಂಚಿಕೆ ೧, ದಾವಣಗೆರೆ, ೧. ಜನೇವರಿ.೨೦೧೨.

ಪಾರ್ವತಮ್ಮ. ಸಿ, *ಆದಿವಾಸಿ ಸಮುದಾಯಗಳ ಅಭಿವೃದ್ಧಿ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೭.

ಪಾರ್ವತಮ್ಮ ಸಿ. ಮತ್ತು ಜಿ.ಎಸ್. ರಾಜೇಗೌಡ, *ಆದಿವಾಸಿ ಸಮುದಾಯಗಳ ಬದುಕು–ಬವಣೆ,* ಗ್ರಾಮೀಣ ಮತ್ತು ಆದಿವಾಸಿ ಅಭಿವೃದ್ಧಿ ಸಂಶೋಧನಾ ಕೇಂದ್ರ

ಬನಶಂಕರ ಆರಾಧ್ಯ. ಕೆ.ಎಸ್, *'ಕಾಡ್ಗಿಚ್ಚು ತಡೆಗೆ ಫೈರ್‌ಲೈನ್'* ಉದಯವಾಣಿ, ಚಿತ್ರದುರ್ಗ, ಫೆಬ್ರವರಿ ೧೭, ೨೦೧೨.

ಬರಗೂರು ರಾಮಚಂದ್ರಪ್ಪ, *'ಗಾಂಧಿ ಹುಡುಕುತ್ತಾ ಸಬರಮತಿಯಲ್ಲಿ'* ಪ್ರಜಾವಾಣಿ, ಸಂಚಿಕೆ ೯, ದಾವಣಗೆರೆ, ೨, ಅಕ್ಟೋಬರ್, ೨೦೧೧.

ಬೋರಲಿಂಗಯ್ಯ .ಹಿ.ಚಿ., *ಕಾಡು ಕಾಂಕ್ರೀಟ್* ಮತ್ತು *ಜಾನಪದ,* ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೫.

ಬೋರಲಿಂಗಯ್ಯ .ಹಿ.ಚಿ., ಗಿರಿಜನ ನಾಡಿಗೆ ಪಯಣ, ರಾಗಿ ರೊಟ್ಟಿ ಪ್ರಕಾಶನ, ಬೆಂಗಳೂರು, ೨೦೦೦.

ಬೋರಲಿಂಗಯ್ಯ .ಹಿ.ಚಿ., *ಬೆಂಕಿ* ಮತ್ತು *ವಿದ್ಯುತ್ ಯುಗಗಳ ನಡುವೆ ಗಿರಿಜನ ಸಂಸ್ಕೃತಿ,* ಗಿರಿಜನ ಸಂಸ್ಕೃತಿ, (ಸಂ) ಕಾಳೇಗೌಡ ನಾಗವಾರ ಮತ್ತು ಎನ್ ಹುಚ್ಚಪ್ಪ ಮಾಸ್ತರ್, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦.

ಬೋರಲಿಂಗಯ್ಯ .ಹಿ.ಚಿ., *ಕರ್ನಾಟಕದಲ್ಲಿ ಭೂಸುಧಾರಣೆ : ಒಂದು ಪಕ್ಷಿ ನೋಟ,* ಕಾಗೋಡು ಚಳುವಳಿ, ಬೋರಲಿಂಗಯ್ಯ. ಹಿ.ಚಿ. (ಸಂ) ಮತ್ತು ಹುಚ್ಚಪ್ಪ ಮಾಸ್ತರ, ಮಲೆನಾಡು ಜಾನಪದ ಲೋಕ, ೨೦೦೨.

ಮಂಜುನಾಥ್.ಜೆ, *ಕ್ಷೀಣಿಸುತ್ತಿರುವ ಚಟ್ಟೆಕಂಬ ಅರಣ್ಯ ಪ್ರದೇಶ,* ವಿಜಯ ಕರ್ನಾಟಕ, ಸಂಪುಟ ೯, ಸಂಚಿಕೆ ೨೮೮, ಚಿತ್ರದುರ್ಗ, ೨೬ ಏಪ್ರಿಲ್ ೨೦೧೨.

ಮಹದೇವ. ಆರ್. (ವರದಿ ತಯಾರಿಸಿದವರು), ಏಟ್ರೀ ಸಂಸ್ಥೆ, ಸೋಲಿಗ ಜನಾಂಗದ ಸಾಂಪ್ರದಾಯಿಕ ಕುಲ ಮತ್ತು ನ್ಯಾಯ ಇವುಗಳನ್ನು ಬಲಗೊಳಿಸುವ ಕಾರ್ಯಾಗಾರ, ಯರಕನಗದ್ದೆ ಸಮುದಾಯ ಭವನ, ಬಿಳಿಗಿರಿರಂಗನಬೆಟ್ಟ, ೩೧.೦೭.೨೦೦೬.

ಮಹಾದೇವಯ್ಯ.ಪಿ., *ಜೇನುಕುರುಬರ ಅವ್ಯಕ್ತ ಸಾಂಸ್ಕೃತಿಕ ನುಡಿ ಚಹರೆ,* ಡಾ.ಕೇಶವನ್ ಪ್ರಸಾದ್ ಕೆ. ಮರಟ್ಟಿ, (ಸಂ) ಬುಡಕಟ್ಟು ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ ೬, ಸಂಚಿಕೆ ೧, ಜೂನ್ ೨೦೦೯.

ಮುಜಾಫ್ಫರ್ ಅಸ್ಸಾದಿ, *ಬುಡಕಟ್ಟು ಜನಾಂಗದ ಅತಂತ್ರ ಸ್ಥಳಾಂತರ,* ಬುಡಕಟ್ಟು ಸಂಸ್ಕೃತಿ, ಸಂ. ಪ್ರೊ.ಕಿಕ್ಕೇರಿ ನಾರಾಯಣ, ಅರುಹು ಕುರುಹು, ಬೆಂಗಳೂರು,೨೦೧೧.

ಮೋಹನ ಕುಮಾರ, *ಜೇನುಕುರುಬರ ಸಂಘಟನಾ ವ್ಯವಸ್ಥೆ,* ಸಂ.ಡಾ.ಕೆ.ಎಂ.ಮೇತ್ರಿ ಮತ್ತು ಡಾ.ಚಲುವರಾಜು, ಬುಡಕಟ್ಟು ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ ೪, ಸಂಚಿಕೆ ೧ ಮತ್ತು ೨, ಜೂನ್ ಮತ್ತು ಡಿಸೆಂಬರ್ ೨೦೦೭.

ರವಿ ಎಸ್. ಬಳೂವಗಿ, *'ಶ್ರೀಗಂಧ ಬೆಳೆಸಲು ಯೋಜನೆ'* ಪ್ರಜಾವಾಣಿ ಸಂಪುಟ ೧೦, ಸಂಚಿಕೆ ೧೮, ದಾವಣಗೆರೆ, ೧೮.೦೧.೨೦೧೨.

ರವೀಂದ್ರಭಟ್ಟ, *'ಮದ್ಯದಂಗಡಿಗಳಲ್ಲಿ ಬಡವರ ರೇಷನ್ ಕಾರ್ಡ್ ಅಡ'* ಪ್ರಜಾವಾಣಿ, ಸಂಪುಟ ೧೦, ಸಂಚಿಕೆ ೭೬, ದಾವಣಗೆರೆ, ಮಾರ್ಚ್ ೧೬, ೨೦೧೨.

ರವೀಂದ್ರಭಟ್ಟ, *'ಕಾಡಿನ ಬೆಂಕಿ ಮತ್ಸರಾ ಕಿಚ್ಚಿಗೆ ಬಲಿ'* ಪ್ರಜಾವಾಣಿ, ಸಂಪುಟ ೯, ಸಂಚಿಕೆ ೬೩, ದಾವಣಗೆರೆ, ಮಾರ್ಚ್ ೩, ೨೦೧೨.

ರಾಮಚಂದ್ರ ಗುಹಾ, *'ಸಾಮಾಜಿಕ ಬದಲಾವಣೆ ತರುವ ಸಮಾಜಸೇವೆ'* ಪ್ರಜಾವಾಣಿ, ಸಂಪುಟ ೯, ಸಂಚಿಕೆ ೨೭೭, ದಾವಣಗೆರೆ, ಅಕ್ಟೋಬರ್ ೭, ೨೦೧೧.

ರಾಮಚಂದ್ರನ್.ಸಿ.ಎನ್, *ಮನ್ಸೂರು ರಾಮಾಯಣಗಳು, ಒಂದು ವ್ಯಾಖ್ಯಾನ,* ಪ್ರಜಾವಾಣಿ, ದಾವಣಗೆರೆ, ೨೫ ಅಕ್ಟೋಬರ್, ೨೦೧೧.

ರಾಜು ಜೆ.ಎಂ., *ಜೇನುಕುರುಬರ ಪರಂಪರೆ ಮತ್ತು ಆಧುನಿಕತೆ,* ಡಾ.ಕೆ.ಎಂ.ಮೇತ್ರಿ ಮತ್ತು ಡಾ.ಚಲುವರಾಜು, (ಸಂ) ಬುಡಕಟ್ಟು ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ ೪, ಸಂಚಿಕೆ ೧ ಮತ್ತು ೨, ಜೂನ್ ಮತ್ತು ಡಿಸೆಂಬರ್ ೨೦೦೭

ರೂಪಾ ಕೆ.ಎಂ, *ಗಿರಿಜನ ಮಹಿಳೆಯರಿಗೆ 'ಭೂ ಒಡೆತನ ಕನಸಲ್ಲ'* ಪ್ರಜಾವಾಣಿ ಸಂಪುಟ ೯, ಸಂಚಿಕೆ ೨೯೭, ೨೮ ಅಕೋಬರ್, ೨೦೧೧.

ಮೇತ್ರಿ, ಕೆ.ಎಂ., *ಬುಡಕಟ್ಟು ಕುಲಕಸುಬುಗಳು,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

ವಿನಯ್ ನ. ಬೆಂಗಳೂರು, *ಬಂಡೀಪುರಕ್ಕೆ ಕಳಂಕಿತರ ಪೈಪೋಟಿ,* ಸಂಪುಟ ೯, ಸಂಚಿಕೆ ೨೮೯, ಚಿತ್ರದುರ್ಗ, ೨೭ ಏಪ್ರಿಲ್ ೨೦೧೨.

ವಿನಯ್ ನ, *'ಶ್ರೀಗಂಧದ ಘಮಘಮ ಪ್ರಾಣಿಗಳು ರಾಮರಾಮ'* ವಿಜಯ ಕರ್ನಾಟಕ, ಸಂಪುಟ ೯, ಸಂಚಿಕೆ ೨೪೬, ಚಿತ್ರದುರ್ಗ, ಮಾರ್ಚ್ ೧೩, ೨೦೧೨.

ವಿನಯ್ ನ, *'ಗಂಧದ ಗುಡಿ ಆಗಲಿದೆ ಕರುನಾಡು!'* ವಿಜಯ ಕರ್ನಾಟಕ, ಸಂಚಿಕೆ ೯, ಸಂಪುಟ ೨೨೫, ಚಿತ್ರದುರ್ಗ, ೨೧ ಫೆಬ್ರುವರಿ ೨೦೧೨.

ವಿಜಯಕರ್ನಾಟಕ ಸುದ್ದಿಲೋಕ, *'ಕಾಡ್ಗಿಚ್ಚು ಶಮನಕ್ಕೆ ಹೋಂಗಾರ್ಡ್'* ವಿಜಯ ಕರ್ನಾಟಕ, ಸಂಪುಟ ೯, ಸಂಚಿಕೆ ೨೩೯, ಚಿತ್ರದುರ್ಗ, ಮಾರ್ಚ್ ೬, ೨೦೧೨.

ವಿಜಯಕರ್ನಾಟಕ ಸುದ್ದಿಲೋಕ, *ಟೈಗರ್ ಪ್ರಾಜೆಕ್ಟ್ ಬಿಡಿ ಯುನೆಸ್ಕೊ ಪಟ್ಟಿ ಒಪ್ಕೊ ಬಿಡಿ,* ವಿಜಯ ಕರ್ನಾಟಕ, ಸಂಪುಟ ೯, ಸಂಚಿಕೆ ೨೯೬, ಚಿತ್ರದುರ್ಗ, ೪ ಮೇ ೨೦೧೨.

ವಿಜಯಕರ್ನಾಟಕ ಸುದ್ದಿಲೋಕ, *'ಕಾಡಿಗೆ ಬೆಂಕಿ ಸಾವಿರಾರು ಎಕರೆ ನಾಶ'* ವಿಜಯ ಕರ್ನಾಟಕ, ಸಂಪುಟ ೯, ಸಂಚಿಕೆ ೨೫೭, ಚಿತ್ರದುರ್ಗ, ೨೬ ಮಾರ್ಚ್ ೨೦೧೨.

ವಿಜಯಕರ್ನಾಟಕ ಸುದ್ದಿಲೋಕ, *'ಕಸ್ತೂರಿ ರಂಗನ್ ವರದಿ: ಮಾಧವ ಗಾಡ್ಗೀಳ್ ಕಿಡಿ'* ವಿಜಯ ಕರ್ನಾಟಕ, ಸಂಪುಟ ೧೦,ಸಂಚಿಕೆ ೩೧೧, ೧೯.೦೫.೨೦೧೩.

ವಿಜಯಕರ್ನಾಟಕ ಸುದ್ದಿಲೋಕ, *'ಹಾಡಿ ಜನರಿಗಿಲ್ಲ ಸ್ಮಶಾನ: ಕಾಡುವ ಕಾಡು ನೀತಿ'* ವಿಜಯ ಕರ್ನಾಟಕ, ಸಂಪುಟ ೧೦,ಸಂಚಿಕೆ ೩೩೮, ೧೫.೦೬.೨೦೧೩.

ವಿಜಯಕರ್ನಾಟಕ ಸುದ್ದಿಲೋಕ, *'ಕಾಫಿ ತೋಟ ತೆರವಿಗೆ ಅರಣ್ಯ ಇಲಾಖೆ ಸಿದ್ಧತೆ'* ವಿಜಯ ಕರ್ನಾಟಕ, ಸಂಪುಟ ೧೦,ಸಂಚಿಕೆ ೩೧೫, ೨೩.೦೫.೨೦೧೩.

ವೀರಪ್ಪ. ಕೆ.ಎಂ., *ಪರಿಸರ ಸಂರಕ್ಷಣಾ ಕಾಯ್ದೆಗಳು, ೧೯೬೯,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

ಶರಣ ಬಸವ ಹುಲಿ ಹೈದರ್, *'ಅಲೆಮಾರಿಗಳ ಶಿಕ್ಷಣಕ್ಕೆ ಸರಕಾರದ ಶಿಕ್ಷೆ'* ವಿಜಯ ಕರ್ನಾಟಕ, ಸಂಪುಟ ೯, ೩೧ ಮಾರ್ಚ್ ೨೦೧೨, ಚಿತ್ರದುರ್ಗ

ಶಂಕರನಾರಾಯಣ.ತೀ.ನಂ., *ಬುಡಕಟ್ಟುಗಳ ಲಕ್ಷಣ ಮತ್ತು ಸ್ವರೂಪ,* ಗಿರಿಜನ ಸಂಸ್ಕೃತಿ, ಪ್ರೋ. ಕಾಳೇಗೌಡ ನಾಗವಾರ ಮತ್ತು ಎನ್ ಹುಚ್ಚಪ್ಪ ಮಾಸ್ತರ್, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦.

ಶಂಕರ್.ಎಸ್.ಎಸ್,*'ಗಾಂಧಿಯೇ? ಅಂಬೇಡ್ಕರರೋ?'* ಪ್ರಜಾವಾಣಿ, ಸಂಪುರ್ಟ, ದಾವಣಗೆರೆ, ೪-೧೨-೨೦೧೧.

ಶಿವರಾಮ ಕಾರಂತ., *ಚೋಮನ ದುಡಿ,* ಎಸ್.ಬಿ.ಎಸ್ ಪಬ್ಲಿಷರ್ಸ್ ಡಿಸ್ಟ್ರಿಬೂಟರ್ಸ್, ೨೦೧೨.

ಶಿವರಾಮ ಕಾರಂತ. *ಬೆಟ್ಟದ ಜೀವ,* ಸಪ್ನ ಬುಕ್ ಹೌಸ್, ಬೆಂಗಳೂರು,೨೦೧೨.

ಶಿವರಾಮ ಕಾರಂತ., *ಕುಡಿಯರ ಕೂಸು,* ಸಪ್ನ ಬುಕ್ ಹೌಸ್, ಬೆಂಗಳೂರು,೨೦೧೨.

ಶಿವರಾಮ ಕಾರಂತ., *ಗೊಂಡಾರಣ್ಯ,* ಎಸ್.ಬಿ.ಎಸ್.ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಜುಲೈ ೨೦೧೨.

ಶಿವಸುಂದರ್., *ಚಾರ್ವಾಕ,* ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೧೧.

ಶಿವಾನಂದ ಕರ್ಕಿ, *'ಕಾರಣ ಹುಡುಕುವುದಷ್ಟೇ ಪರಿಹಾರವಲ್ಲ'* ಪ್ರಜಾವಾಣಿ, ಸಂಪುರ್ಟ, ಸಂಚಿಕೆ ೬೩, ದಾವಣಗೆರೆ, ಮಾರ್ಚ್ ೩, ೨೦೧೨.

ಶಿವಾನಂದ ಕಳವೆ, *'ಶ್ರೀಗಂಧ ರಕ್ಷಣೆಗೆ ಇಲಾಖೆಯಲ್ಲಿಯೇ ನಿರಾಸಕ್ತಿಯೇ?'* ಪ್ರಜಾವಾಣಿ ಸಂಪುಟ ೯, ಸಂಚಿಕೆ ೨೬೭, ದಾವಣಗೆರೆ, ೨೬ ಸೆಪ್ಟೆಂಬರ್, ೨೦೧೧.

ಶಿವಾನಂದ ಕಳವೆ, *ಅರಣ್ಯ, ಬೇರು ಮೂಲಕ್ಕೆ ಪುಟ್ಟ ಪಯಣ,* ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೮, ಪುಟ ೦೯.

ಶ್ರೀಕಂಠ ಗಾಣದಾಳು, *'ಅರ್ಕಾವತಿಯ ಆಕ್ರಂದನ'* ಪ್ರಜಾವಾಣಿ, ಸಂಪುಟ ೧೦, ೩.೧.೨೦೧೨.

ಶ್ರೀಕಾಂತ ಕಲ್ಲಮ್ಮನರ, *'ಅರಣ್ಯ ವರಿಷ್ಠರ ಕರ್ತವ್ಯ'* ಪ್ರಜಾವಾಣಿ, ಸಂಪುರ್ಟ, ಸಂಚಿಕೆ ೬೩, ದಾವಣಗೆರೆ, ಮಾರ್ಚ್ ೩, ೨೦೧೨.

ಶ್ರೀಕಾಂತ ನಾಯಕ.ಜಿ ಮತ್ತು ಎಚ್.ಆರ್.ಉಮಾ, *ಮೈಸೂರು ಜಿಲ್ಲೆಯ ಜೇನುಕುರುಬರ ಆರ್ಥಿಕ ಜೀವನ ಮತ್ತು ರಾಜ್ಯ ಅಭಿವೃದ್ಧಿ ಯೋಜನಾ ಕ್ರಮಗಳು,* ಡಾ. ಕೇಶವನ್ ಪ್ರಸಾದ್ ಕೆ. ಮರಟ್ಟಿ(ಸಂ) ಬುಡಕಟ್ಟು ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ ೫, ಸಂಚಿಕೆ ೨,

ಡಿಸೆಂಬರ್ ೨೦೦೮. .ಸಂಜಯ್ ಗುಬ್ಬಿ, *'ವನ್ಯಜೀವಿ ಸಂರಕ್ಷಣೆಯೆಂಬ ಸೂಕ್ಷ್ಮವಲಯ,* ಪ್ರಜಾವಾಣಿ ಸಂಪುಟ ೯, ದಾವಣಗೆರೆ , ೨೨ ನವೆಂಬರ್ ೨೦೧೧.

ಸಂತೋಷ್ ಕುಮಾರ್. ಕೆ.ಎಂ, *'ನಕ್ಸಲರ ನಾಡಿನಲ್ಲಿ ಅಭಿವೃದ್ಧಿಯ ಜಾಡು'* ಪ್ರಜಾವಾಣಿ ೧೫ ಅಕ್ಟೋಬರ್, ೨೦೧೧.

ಸತ್ಯಲಿಂಗರಾಜು.ಜಿ.ಆರ್., *ಪರಿಸರ (ಸಂರಕ್ಷಣೆ) ಅಧಿನಿಯಮ ೧೯೮೬ ಮತ್ತು ಪರಿಸರ (ಸಂರಕ್ಷಣೆ) ನಿಯಮಗಳು,೧೯೮೬,* ಚೇತನ ಬುಕ್‌ಹೌಸ್, ಧಾರವಾಡ. ೨೦೦೫.

ಸುನಂದಮ್ಮ.ಎನ್, ಮೈಸೂರು ಮತ್ತು *ಚಾಮರಾಜನಗರ ಜಿಲ್ಲೆಗಳಲ್ಲಿ ಸೋಲಿಗ ಜನಾಂಗದ ಅಭಿವೃದ್ಧಿಗೆ ಕರ್ನಾಟಕ ಸರ್ಕಾರದ ಕಾರ್ಯಕ್ರಮಗಳು ಒಂದು ವಿಮರ್ಶಾತ್ಮಕ ಅಧ್ಯಯನ'* ಅಭಿರುಚಿ ಪ್ರಕಾಶನ, ಮೈಸೂರು, ೨೦೧೧.

ಸುಜ್ಞಾನ ಮೂರ್ತಿ. ಬಿ. (ಮೂಲ:ಮಹಾಶ್ವೇತಾದೇವಿ), *ಯಾರದೀ ಕಾಡು,* ಸಿ.ವಿ.ಜಿ. ಪಬ್ಲೀಕೇಶನ್, ಬೆಂಗಳೂರು, ೨೦೦೩.

ಸುರೇಶ ಹೆಬ್ಳಿಕರ್, *'ಕಾಡಿನ ಬೆಂಕಿಯಿಂದ ಕಾವೇರಿ ಕೊರಗುವಳೇ'* ವಿಜಯ ಕರ್ನಾಟಕ, ಸಂಪುಟ ೯, ಸಂಚಿಕೆ ೨೩೯, ಚಿತ್ರದುರ್ಗ, ಮಾರ್ಚ್ ೬, ೨೦೧೨.

ಹೊನಕೆರೆ ನಂಜುಂಡೇಗೌಡ, *'ಖಾಸಗಿ ಅರಣ್ಯ ವಶಕ್ಕೆ ಶಿಫಾರಸು'* ಪ್ರಜಾವಾಣಿ ಸಂಪುಟ೧೦, ಸಂಚಿಕೆ ೬೦, ದಾವಣಗೆರೆ, ಫೆಬ್ರವರಿ ೨೯, ೨೦೧೨.

ಹೊನಕೆರೆ ನಂಜುಂಡೇಗೌಡ, *'ಪಶ್ಚಿಮ ಘಟ್ಟಕ್ಕೆ ಕುತ್ತು?* ಪ್ರಜಾವಾಣಿ ಸಂಪುಟ೧೦, ಸಂಚಿಕೆ ೩, ದಾವಣಗೆರೆ, ೩ ಜನವರಿ, ೨೦೧೨.

Ajit Menon, *"Engaging with the Law on Adivasi Rights"*, Economic and Political Weekly, Vol. 42, No. 24,J un. 16-22, 2007, http://www.jstor.org/stable/4419702, 15.08.2014.

AITPN (Assion Indigenious and Tribal Peoples Network), *"India's Forest Rights Act Of 2006 Illusion Or Solution"*,15 December, 2006, www.aitpu.org, Last visited 17.09.2012.

Amita Baviskar, *"Fate of the Forest: Conservation and Tribal Rights"*, Economic and Political Weekly, Vol. 29, No. 38 (Sep. 17, 1994), pp. 2493-2501 http://www.jstor.org/ stable/4401788.

Archana Prasad, *"Conservation and Tribal Development in the "Forest Rights Bill": Looking beyond the JointParliamentary Committee Report"*, Social Scientist, Vol. 34, No. 7/8, pp. 4-19, Jul. - Aug., 2006, http://www.jstor.org/stable/27644150 , 16.08.2014.

Asmita Kabra, *"Displacement and Rehabilitation of an Adivasi Settlement: Case of Kuno Wildlife Sanctuary, Madhya Pradesh"*, Economic and Political Weekly, Vol. 38, No. 29 (Jul. 19-25, 2003), pp. 3073-3078 , http://www.jstor.org/stable/4413809 .

Bachittar Singh, Joint Secretary, *Minutes of the meeting of State Secretaries/ Commissioners of Tribal Welfare Departments to review the progress of implementation of scheduled Tribes and Other Traditional Forest Dwellers (Recognistion of Forest Rights) Act ,2006* held on 07.04.2011 at Committee Room 'B', Vigyan Bhavan Annexe, New Delhi,2011.

Chough. A.K, Secretary (Tribal Affairs), *Minutes of the meeting of State Secretaries/ Commissioners of Tribal Welfare Departments to review the*

*progress of implementation of scheduled Tribes and Other Traditional Forest Dwellers (Recognistion of Forest Rights) Act ,2006* held on 07.04.2011 at Committee Room 'B', Vigyan Bhavan Annexe, New Delhi. 2011.

**Editor,** Tribal Rights: Promises and Reality, Economic and Political Weekly, Vol. 42, No. 36 (Sep. 8 - 14, 2007), p. 3596 , http://www.jstor.org/stable/40276349.

Geetanjoy Sahu, *Mining in the Niyamgiri Hills and Tribal Rights,* Economic and Political Weekly, Vol. 43, No. 15 (Apr. 12 - 18, 2008), pp. 19-21, http://www.jstor.org/ stable/40277331.

Gerard Guthrie, *Basic Research Methods An Entry to Social Science Research,* SAGE Publications India Pvt ltd, 1st Edition, 2010.

Kantilal Bhuria, Union Minister of Tribal Affairs, *Minutes of the meeting of State Secretaries/ Commissioners of Tribal Welfare Departments to review the progress of implementation of scheduled Tribes and Other Traditional Forest Dwellers (Recognistion of Forest Rights) Act ,2006* held on 07.04.2011 at Committee Room 'B', Vigyan Bhavan Annexe, New Delhi, 2011.

Madhav Gadgil, *Empowering Gramsabhas to Manage Biodiversity: The Science Agenda,* Economic and Political Weekly, Vol. 42, No. 22 (Jun. 2-8, 2007), pp. 2067- http://www.jstor.org/stable/4419660.Accessed: 11/09/2014 02:59.

Madhusudan.M.D, *Of Rights and Wrongs: Wildlife Conservation and the Tribal Bill,*Economic and Political Weekly, Vol. 40, No. 47, Nov. 19-25, 2005, http://www.jstor.org/stable/ 4417419,13.08.2014.

Mahadeo Singh Khandela, Minister of State Tribal Affairs, *Minutes of the meeting of State Secretaries/ Commissioners of Tribal Welfare Departments to review the progress of implementation of scheduled Tribes and Other Traditional Forest Dwellers (Recognistion of Forest Rights) Act ,2006* held on 07.04.2011 at Committee Room 'B', Vigyan Bhavan Annexe, New Delhi, 2011.

Margaret Alston And Wendy Bowles, Research for Social Workers, RAWAT Publications India Pvt ltd, Jaipur And New Delhi, 2nd Edition,2003.

Pankaj Sekhsaria, *Conservation in India and the Need to Think beyond 'Tiger vs. Tribal'* , Biotropica, Vol. 39, No. 5 (Sep., 2007), pp. 575-577 , The Association for Tropical Biology and Conservation , http://www.jstor.org/stable/30045413.

Pierre Oberling, *British Tribal Policy In Southern Persia* 1906-1911, Journal of Asian History, Vol. 4, No. 1 (1970), pp. 50-79 , Harrassowitz Verlag , http://www.jstor.org/stable/41929999.

Rahul Banerjee, *Adivasis and Unjust Laws*, Economic and Political Weekly, Vol. 42, No. 39 (Sep. 29 - Oct. 5, 2007), pp. 4010-4011, http://www.jstor.org/stable/40276479 .Accessed: 11/09/2014 02:59.

Rahul Sen, *Tribal Policy of India*, Indian Anthropologist, Vol. 22, No. 2 (December 1992), pp. 77-89, Indian Anthropological Association, http://www.jstor.org/ stable/41919691.

Ram Ahuja, *Research Methods*, Rawat Publications India Pvt ltd, Jaipur And New Delhi, 2014.

Roy Burman.B.K, *Draft National Tribal Policy of 2006 Creating Consternation*, Economic and Political Weekly, Vol. 41, No. 34 (Aug. 26 - Sep.1,2006),pp.3645-3647,http://www.jstor.org/stable/4418607.

Sagar Preet, *Tribal Problems: A Gandhian Perspective*, Indian Anthropologist, Vol. 24, No. 2 (December 1994), pp. 29-38, Indian Anthropological Association, http://www. jstor.org/stable/41919746.

Sagari R Ramadas, *Women, Forest spaces and the Law: Transgressing the Boundaries,* Economic and Political Weekly, Vol. 44, No. 44 (OCTOBER 31-NOVEMBER 6, 2009), pp.65-73, http://www.jstor.org/stable/25663735

Shankar Gopalakrishnan, *Forest Rights* , Economic and Political Weekly, Vol. 43, No. 15 (Apr. 12 - 18, 2008), p. 4 , http://www. jstor. org/stable /40277322.

Sharachchandra Lélé, *A 'Defining' Moment for Forests?* , Economic and Political Weekly, Vol. 42, No. 25 (Jun. 23-29, 2007), pp. 2379-2383,http://www.jstor.org/stable/4419725.

Sharad Kulkarni, *Forest Legislation and Tribals: Comments on Forest Policy Resolution*,Economic and Political Weekly, Vol. 22, No. 50 (Dec.12, 1987), pp.2143-2148, http://www.jstor. org/stable /4377847.

Sharad Kulkarni, *Forests: Law versus Policy*, Economic and Political Weekly, Vol. 24, No. 16 (Apr. 22, 1989), pp. 859-862, http://www.jstor.org/stable/4394698.

Tapan Kumar Misra, *Forest Policy and Deprivation of Forest Dwellers in Independent India: The Story of the Baidharas and Other Forest Dependent Communities,* Social Scientist, Vol. 34, No. 7/8 (Jul. - Aug., 2006), pp.20-32, Social Scientist , http://www.jstor.org/stable/27644151.

Varsha Ganguly, *Displacement, Rehabilitation and Resettlement: The Case of Maldhari Families of Gir Forest* ,Sociological Bulletin, Vol. 54, No. 1 (January-April 2005), pp. 3-17 , Indian Sociological Society , http://www.jstor.org/ stable/23620582.

Vidhya Das, *Minor Forest Produce and Rights of Tribals,* Economic and Political Weekly, Vol. 31, No. 50 (Dec. 14, 1996), pp. 3227-3229, http://www.jstor.org/stable/4404874.

Vinay Kumar Srivastava, Concept of 'Tribe' in the Draft National Tribal Policy, Economic and Political Weekly, Vol. 43, No. 50 (Dec. 13 - 19, 2008), pp. 29-35, http://www.jstor.org/ stable/40278288.

**Meeting Minutes.** *Minutes of the meeting of State Secretaries/ Commissioners of Tribal Welfare Departments to review the progress of implementation of scheduled Tribes and Other Traditional Forest Dwellers (Recognistion of*

*Forest Rights) Act ,2006* held on 07.04.2011 at Committee Room 'B', Vigyan Bhavan Annexe, New Delhi, 07.04.2011.

*Restoring Rights, (2007),* Economic and Political Weekly, Vol. 42, No. 1,Jan. 6-12, 2007,http://www.jstor.org/stable/4419096 ,14.08.2014.

## ಅನುಬಂಧ-೦೧

### ಆದಿವಾಸಿ ಸಮುದಾಯದ ಮಾಹಿತಿ ಸಂಗ್ರಹ ಪ್ರಶ್ನಾವಳಿ

**ಅರಣ್ಯ ಹಕ್ಕುಗಳ ಕಾಯಿದೆ ಅನುಷ್ಠಾನ: ಸವಾಲುಗಳು ಮತ್ತು ಸಾಧ್ಯತೆಗಳು**

ಹಾಡಿ/ಪೋಡು/ಕಾಲೊನಿಗಳಲ್ಲಿ ಗುಂಪು ಚರ್ಚೆ ಮಾಡಿ ಮಾಹಿತಿ ಸಂಗ್ರಹಣೆ ಮಾಡುವುದು]

**ಭಾಗ-ಒಂದು: ಹಾಡಿ/ಪೋಡಿನ ಸಾಮಾನ್ಯ ಮಾಹಿತಿ**

1. ಹಾಡಿ/ಪೋಡು/ಕಾಲೊನಿ ವಿವರ :

| | | |
|---|---|---|
| 1.1 | ಜಿಲ್ಲೆ | 1. ಮೈಸೂರು. 2. ಚಾಮರಾಜನಗರ. |
| 1.2 | ತಾಲ್ಲೂಕು | 1.ಮೈಸೂರು. 2.ಹೆಚ್.ಡಿ.ಕೋಟೆ. 3.ಪಿರಿಯಾ ಪಟ್ಟಣ. 4.ಹುಣಸೂರು. 5.ನಂಜನಗೂಡು.6. ಚಾಮರಾಜನಗರ. 7.ಗುಂಡ್ಲು ಪೇಟೆ. 8.ಕೊಳ್ಳೇಗಾಲ. 9. ಯಳಂದೂರು. |
| 1.3 | ಗ್ರಾಮ ಪಂಚಾಯತ್ | |
| 1.4 | ಹಾಡಿ/ಪೋಡು/ಕಾಲೊನಿ ಹೆಸರು | |

2. ಮಾಹಿತಿ ನೀಡಲು ಸೇರಿದ ಗುಂಪಿನ ಸದಸ್ಯರ ಹೆಸರು,ಲಿಂಗ,ವಯಸ್ಸು ಮತ್ತು ಪರಿಶಿಷ್ಟ ಪಂಗಡದ ಹೆಸರು:

| ಕ್ರ.ಸಂ | ಮಾಹಿತಿ ನೀಡುವ ಗುಂಪಿನ ಸದಸ್ಯರಹೆಸರು/ಸಂಖ್ಯೆ2.1 | ಲಿಂಗ 2.2 | ವಯಸ್ಸು 2.3 | ಪರಿಶಿಷ್ಟ ಪಂಗಡದ ಹೆಸರು 2.4 |
|---|---|---|---|---|
| | 1)10 ಕ್ಕಿಂತ ಕಡಿಮೆ ಜನ<br>2)10 ರಿಂದ 15 ಜನ<br>3)15 ರಿಂದ 20 ಜನ<br>4)20 ಕ್ಕಿಂತ ಹೆಚ್ಚು ಜನ | 1)ಪುರುಷರು<br>2)ಮಹಿಳೆಯರು | 1)25 ಕ್ಕಿಂತ ಕಡಿಮೆ<br>2)26-40-<br>3)41-60 -<br>4)60ಕ್ಕಿಂತ ಹೆಚ್ಚು- | 1)ಸೋಲಿಗರು<br>2)ಬೆಟ್ಟ ಕುರುಬರು<br>3)ಜೇನು ಕುರುಬರು<br>4)ಯರವರು |
| 1 | | | | |
| 2 | | | | |
| 3 | | | | |

03.ತಮ್ಮ ಹಾಡಿ/ಪೋಡು/ಕಾಲೊನಿ/ಗ್ರಾಮ ಯಾವ ತರಹದ್ದು:

1)ಕಂದಾಯ ಗ್ರಾಮ. 2) ಅರಣ್ಯದೊಳಗಿನ ಕಂದಾಯ ಗ್ರಾಮ. 3) ಅರಣ್ಯದಂಚಿನ ಕಂದಾಯ ಗ್ರಾಮ
4) ಅರಣ್ಯದೊಳಗಿನ ಅರಣ್ಯ ಗ್ರಾಮ 5) ಅರಣ್ಯದಂಚಿನ ಅರಣ್ಯ ಗ್ರಾಮ. 6) ಪುನರ್ವಸತಿ ಕೇಂದ್ರ

04. ನಿಮ್ಮ ಹಾಡಿ/ಪೊಡು/ಊರು ಸ್ಥಳಾಂತರಗೊಂಡಿದೆಯೇ? 1. ಹೌದು 2.ಇಲ್ಲಾ

05. ನೀವು ಇಲ್ಲಿಗೆ ಸ್ಥಳಾಂತರಗೊಂಡು ಬಂದಿರುವುದು ಎಷ್ಟನೆ ಬಾರಿ?

1) 1 ಬಾರಿ ಮಾತ್ರ 2) 2 ರಿಂದ 3 ಬಾರಿ 3) 4 ರಿಂದ 5 ಬಾರಿ 4) 6ಕ್ಕಿಂತ ಹೆಚ್ಚು ಸಲ

06. ಯಾವ ಯಾವ ಯೋಜನೆಯಡಿ ನಿಮ್ಮನ್ನು ಸ್ಥಳಾಂತರ ಮಾಡಲಾಯಿತು? [1.ಹೌದು 2.ಇಲ್ಲ]

1. ಅಣೆಕಟ್ಟು ಯೋಜನೆ. 2. ರಾಷ್ಟ್ರೀಯ ಉದ್ಯಾನವನ. 3. ಹುಲಿ ಅಭಯಾರಣ್ಯ ಯೋಜನೆ.
4. ಆನೆ ಅಭಯಾರಣ್ಯ ಯೋಜನೆ 5. ಅರಣ್ಯ ಭೂಮಿ ಎಂದು ಕಾರಣ ನೀಡಿ. 6)

07. ಹಾಡಿ/ಪೋಡು/ಕಾಲೊನಿಯ ಆದಿವಾಸಿ ಪಂಗಡವಾರು ಒಟ್ಟು ಮನೆ, ಕುಟುಂಬ ಮತ್ತು ಜನಸಂಖ್ಯೆ ವಿವರ:

| ಕ್ರ.ಸ | ಪರಿಶಿಷ್ಟ ಪಂಗಡದ ಹೆಸರು | ಒಟ್ಟು ಮನೆಗಳು -1 | ಒಟ್ಟುಕುಟುಂಬಗಳು-2 | ಒಟ್ಟು ಜನಸಂಖ್ಯೆ-3 |
|---|---|---|---|---|
| 7.1 | ಸೋಲಿಗರು | | | |

| 7.2 | ಬೆಟ್ಟ ಕುರುಬರು | | | |
|---|---|---|---|---|
| 7.3 | ಜೇನು ಕುರುಬರು | | | |
| 7.4 | ಯರವರು | | | |
| 7.5 | ಒಟ್ಟು | | | |

08. ನಿಮ್ಮ ಹಾಡಿ/ಪೋಡು/ಕಾಲೋನಿ/ಗ್ರಾಮ/ಪುನರ್ವಸತಿ ಕೇಂದ್ರದಲ್ಲಿ ಭೂಮಿ ಹೊಂದಿದ ಕುಟುಂಬಗಳ ವಿವರ

| ಕ್ರಸಂ. | ಆದಿವಾಸಿ ಪಂಗಡದ ಹೆಸರು | ಪರಿಶಿಷ್ಟ ಪಂಗಡವಾರು ಭೂಮಿ ಹೊಂದಿದ ಕುಟುಂಬಗಳ ವಿವರ | | | | |
|---|---|---|---|---|---|---|
| | | 0.25–0.5ಎಕರೆ | 0.5–1 ಎಕರೆ | 1 –2 ಎಕರೆ | 2–3 ಎಕರೆ | 3 ಕ್ಕಿಂತ ಹೆಚ್ಚು |
| | | 1 | 2 | 3 | 4 | 5 |
| 8.1 | ಸೋಲಿಗರು | | | | | |
| 8.2 | ಬೆಟ್ಟ ಕುರುಬರು | | | | | |
| 8.3 | ಜೇನು ಕುರುಬರು | | | | | |
| 8.4 | ಯರವರು | | | | | |
| 8.5 | ಒಟ್ಟು | | | | | |

09.ಪೋಡು/ಹಾಡಿ/ಊರು/ಕಾಲೋನಿ/ಗ್ರಾಮಕ್ಕೆ ಇರುವ ಸೌಲಭ್ಯಗಳು

| ಕ್ರಸಂ. | ಮೂಲಭೂತ ಸೌಲಭ್ಯಗಳ ವಿವರ–1 | ವಿವರಗಳು–2 |
|---|---|---|
| 9.1 | ರಸ್ತೆ –1.ಇದೆ 2.ಇಲ್ಲ | 1) ಕಚ್ಚಾರಸ್ತೆ 2) ಸಿಮೆಂಟ್ ರಸ್ತೆ. 3) ಡಾಂಬರು ರಸ್ತೆ 4) ಕಾಲುದಾರಿ |
| 9.2 | ವಾಹನ ವ್ಯವಸ್ಥೆ–1.ಇದೆ 2.ಇಲ್ಲ | 1) ಸರ್ಕಾರಿ ವಾಹನ 2)ಖಾಸಗಿ ವಾಹನ 3)ಸ್ವಂತ ವಾಹನ. |
| 9.3 | ಅಂಚೆ ವ್ಯವಸ್ಥೆ –1.ಇದೆ 2.ಇಲ್ಲ | 1) 1–2 ಕಿ.ಮೀ. 2) 2–3 ಕಿ.ಮೀ. 3) 3–5 ಕಿ.ಮೀ. 4) 5 ಕಿ.ಮೀ. ಗಿಂತ ಹೆಚ್ಚು. |
| 9.4 | ಆಸ್ಪತ್ರೆ –1.ಇದೆ 2.ಇಲ್ಲ | 1) ಸರ್ಕಾರಿ ಆಸ್ಪತ್ರೆ 2) ಖಾಸಗಿ ಆಸ್ಪತ್ರೆ. 3) ಸಂಚಾರಿ ಆಸ್ಪತೆ 4) ಇತರೆ. |
| 9.5 | ಆಸ್ಪತ್ರೆ (ದೂರ) | 1) 1–2 ಕಿ.ಮೀ. 2) 2–3 ಕಿ.ಮೀ. 3) 3–5 ಕಿ.ಮೀ. 4) 5 ಕಿ.ಮೀ. ಗಿಂತ ಹೆಚ್ಚು. |
| 9.6 | ಬ್ಯಾಂಕ್ (ದೂರ) | 1) 1–2 ಕಿ.ಮೀ. 2) 2–3 ಕಿ.ಮೀ. 3) 3–5 ಕಿ.ಮೀ. 4) 5 ಕಿ.ಮೀ. ಗಿಂತ ಹೆಚ್ಚು. |
| 9.7 | ದೂರವಾಣಿ –1.ಇದೆ 2.ಇಲ್ಲ | 1) ಸ್ಥಿರ ದೂರವಾಣಿ. 2) ಜಂಗಮವಾಣಿ. (ಮೋಬೈಲ್) |
| 9.8 | ವಿದ್ಯುತ್ –1.ಇದೆ 2.ಇಲ್ಲ | 1) ಕೆ.ಪಿ.ಟಿ.ಸಿ.ಎಲ್. 2) ಸೌರವಿದ್ಯುತ್. 3) ಪವನ ವಿದ್ಯುತ್ |
| 9.9 | ಕುಡಿಯುವ ನೀರು–1.ಇದೆ 2.ಇಲ್ಲ | 1) ಕೊಳವೆ ಬಾವಿ. 2) ತೆರೆದ ಬಾವಿ. 3) ನದಿ. 4) ಕೆರೆ 5) ತೊರೆ 6) ಇತರೆ. |
| 9.10 | ನೀರು ದೊರೆಯುವ ದೂರ | 1) 1–2 ಕಿ.ಮೀ. 2) 2–3 ಕಿ.ಮೀ. 3) 3–5 ಕಿ.ಮೀ. 4) 5 ಕಿ.ಮೀ. ಗಿಂತ ಹೆಚ್ಚು. |
| 9.10 | ನ್ಯಾಯಾಬೆಲೆ ಅಂಗಡಿ–1.ಇದೆ 2.ಇಲ್ಲ | 1) 1–2 ಕಿ.ಮೀ. 2) 2–3 ಕಿ.ಮೀ. 3) 3–5 ಕಿ.ಮೀ. 4) 5 ಕಿ.ಮೀ. ಗಿಂತ ಹೆಚ್ಚು. |
| 9.11 | ಮಾರುಕಟ್ಟೆ – 1. ಇದೆ 2.ಇಲ್ಲ | 1) 1–2 ಕಿ.ಮೀ. 2) 2–3 ಕಿ.ಮೀ. 3) 3–5 ಕಿ.ಮೀ. 4) 5 ಕಿ.ಮೀ. ಗಿಂತ ಹೆಚ್ಚು. |

| 9.12 | ಸಂತೆ – 1. ಇದೆ 2.ಇಲ್ಲ | 1) 1–2 ಕಿ.ಮೀ. 2) 2–3 ಕಿ.ಮೀ. 3) 3–5 ಕಿ.ಮೀ. 4) 5 ಕಿ.ಮೀ. ಗಿಂತ ಹೆಚ್ಚು. |
|---|---|---|
| 9.13 | ಪ್ರಾಥಮಿಕ ಶಾಲೆ – 1.ಇದೆ 2.ಇಲ್ಲ | 1) ಸ್ವಂತ ಊರು. 2) 1–2 ಕಿ.ಮೀ. 3) 2–3 ಕಿ.ಮೀ. 4) 3ಕಿ.ಮೀ. ಗಿಂತ ಹೆಚ್ಚು. |
| 9.14 | ಪ್ರೌಢ ಶಾಲೆ – 1. ಇದೆ 2.ಇಲ್ಲ | 1) 1–2 ಕಿ.ಮೀ. 2) 2–3 ಕಿ.ಮೀ. 3) 3–5 ಕಿ.ಮೀ. 4) 5 ಕಿ.ಮೀ. ಗಿಂತ ಹೆಚ್ಚು. |
| 9.15 | ಕಾಲೇಜ್ –1. ಇದೆ 2.ಇಲ್ಲ | 1) 2–3 ಕಿ.ಮೀ.2) 3–6 ಕಿ.ಮೀ. 3) 7–10 ಕಿ.ಮೀ. 4) 10 ಕಿ.ಮೀ.ಗಿಂತ ಹೆಚ್ಚು. |

೧೦. ಪೋಡು/ಹಾಡಿ/ಊರು/ಕಾಲೋನಿ/ಗ್ರಾಮ/ಪುನರ್ವಸತಿ ಕೇಂದ್ರದಲ್ಲಿರುವ ಸಮಸ್ಯೆಗಳು

| ಕ್ರ.ಸಂ | ಸಮಸ್ಯೆಗಳು–1 | ಸಮಸ್ಯೆಗೆ ಕಾರಣಕರ್ತರು–2 | | | | | | | | | | |
|---|---|---|---|---|---|---|---|---|---|---|---|---|
| | 1. ಅರಣ್ಯ ಇಲಾಖೆ ಸಿಬ್ಬಂದಿ.2. ಗ್ರಾಮ ಪಂಚಾಯತ್ ಸಿಬ್ಬಂದಿ. 3. ಗ್ರಾಮ ಪಂಚಾಯತ್ ಸದಸ್ಯರು. 4. ಗ್ರಾಮವಾಸಿಗಳಿಂದ 5. ನೆರೆ ಗ್ರಾಮವಾಸಿಗಳಿಂದ. 6. ಕಂದಾಯ ಇಲಾಖೆಯವರಿಂದ. 7. ಲ್ಯಾಂಪ್ಸ್ 8. ಕೆ.ಪಿ.ಟಿ.ಸಿ.ಎಲ್. 9.ಸಮಾಜ ಕಲ್ಯಾಣ ಇಲಾಖೆ. 10. ಲೋಕೋಪಯೋಗಿ ಇಲಾಖೆ. 11. ಸಾರಿಗೆ ಇಲಾಖೆ. [1.ಹೌದು. 2. ಇಲ್ಲ] | | | | | | | | | | | |
| | | 1 | 2 | 3 | 4 | 5 | 6 | 7 | 8 | 9 | 10 | 11 |
| 10.1 | ನಿವೇಶನ ಸಮಸ್ಯೆ –1.ಇದೆ 2.ಇಲ್ಲ | | | | | | | | | | | |
| 10.2 | ಮನೆಗಳ ಸಮಸ್ಯೆ –1.ಇದೆ 2.ಇಲ್ಲ | | | | | | | | | | | |
| 10.3 | ರಸ್ತೆ ಸಮಸ್ಯೆ –1.ಇದೆ 2.ಇಲ್ಲ | | | | | | | | | | | |
| 10.4 | ವಿದ್ಯುತ್ ಸಂಪರ್ಕ ಸಮಸ್ಯೆ –1.ಇದೆ 2.ಇಲ್ಲ | | | | | | | | | | | |
| 10.5 | ನೀರಿನ ಸಮಸ್ಯೆ | | | | | | | | | | | |
| 10.6 | ಸಂಪರ್ಕ ಸಮಸ್ಯೆ –1.ಇದೆ 2.ಇಲ್ಲ | | | | | | | | | | | |
| 10.7 | ವಾಹನ ಸೌಲಭ್ಯ –1.ಇದೆ.2.ಇಲ್ಲ | | | | | | | | | | | |
| 10.8 | ಭೂಮಿ ಸಮಸ್ಯೆ –1.ಇದೆ 2.ಇಲ್ಲ | | | | | | | | | | | |
| 10.9 | ಕಿರು ಅರಣ್ಯ ಸಂಗ್ರಹ ಸಮಸ್ಯೆ | | | | | | | | | | | |
| 10.10 | ಕಿರು ಅರಣ್ಯ ಉತ್ಪನ್ನಗಳ ಮಾರಾಟ | | | | | | | | | | | |

11.ಹಾಡಿ/ಪೋಡು/ಕಾಲೊನಿಯಲ್ಲಿ ಯಾವ ಸಂಸ್ಥೆಗಳು ಕಾರ್ಯ ನಿರ್ವಹಿಸಿವೆ:

| ಕ್ರ.ಸಂ | ಸಂಸ್ಥೆಯ ಹೆಸರು–1 | ಕೈಗೊಂಡ ಕಾರ್ಯಗಳು–2[1.ಹೌದು. 2. ಇಲ್ಲ] | | | | | | | | |
|---|---|---|---|---|---|---|---|---|---|---|
| | | 1 | 2 | 3 | 4 | 5 | 6 | 7 | 8 | 9 |
| 11.1 | ಡೀಡ್ | | | | | | | | | |
| 11.2 | ಫೆಡೀನ ವಿಕಾಸನ | | | | | | | | | |
| 11.3 | ನಿಸರ್ಗ ಫೌಂಡೇಶನ್ | | | | | | | | | |
| 11.4 | ವಿ.ಜಿ.ಕೆ.ಕೆ | | | | | | | | | |
| 11.5 | ಎಸ್.ವಿ.ವೈ.ಎಮ್ | | | | | | | | | |
| 11.6 | ಬುಡಕಟ್ಟು ಕೃಷಿಕರ ಸಂಘ | | | | | | | | | |
| 11.7 | ಲ್ಯಾಂಪ್ಸ್ | | | | | | | | | |
| 11.8 | ಏಟ್ರಿ | | | | | | | | | |
| 11.9 | ಎಸ್.ಕೆ.ಡಿ.ಆರ್.ಡಿ.ಪಿ | | | | | | | | | |

**ಸೂಚನೆ:** ಕೈಗೊಂಡ ಕಾರ್ಯಗಳ ಸಂಕೇತಿಕರಣಗಳು– 1.ಸ್ವ-ಸಹಾಯ ಸಂಘ ರಚನೆ. 2.ಅರಣ್ಯ ಹಕ್ಕುಗಳಿಗಾಗಿ ಹೋರಾಟ. 3. ಕಿರು ಸಾಲ. 4.ಶಿಕ್ಷಣ. 5.ಸಾವಯವ ಕೃಷಿಗೆ ಸಹಾಯ. 6.ವಸತಿ 7.ಕುಡಿಯುವ ನೀರಿನ ಸೌಲಭ್ಯ 8.ಆರೋಗ್ಯ ಸೇವೆ. 9. ಸ್ವಯಂ ಉದ್ಯೋಗ ತರಬೇತಿ

12. ತಮ್ಮ ಹಾಡಿ/ಪೋಡು/ಕಾಲೊನಿಗೆ ಗ್ರಾಮ ಪಂಚಾಯತ್ ನಿಂದ ಕಳೆದ 5 ವರ್ಷದಲ್ಲಿ ದೊರಕಿದ ಸೌಲಭ್ಯಗಳು

| ಕ್ರ.ಸಂ. | ಸೌಲಭ್ಯಗಳು | ಹೌದು/ಇಲ್ಲ-1 | ಹೌದಾದರೆ ಒಟ್ಟು ದೊರಕಿದ ಸಂಖ್ಯೆಗಳು-2 |
|---|---|---|---|
| 12.1 | ನಿವೇಶನಗಳು | 1.ಹೌದು 2.ಇಲ್ಲ | 1)5 ರಿಂದ 10. 2)10 ರಿಂದ 20. 3) 20 ರಿಂದ 30. 4) 30 ಕ್ಕಿಂತ ಹೆಚ್ಚು. |
| 12.2 | ಮನೆಗಳು | 1.ಹೌದು 2.ಇಲ್ಲ | 1)5 ರಿಂದ 10. 2)10 ರಿಂದ 20. 3) 20 ರಿಂದ 30. 4) 30 ಕ್ಕಿಂತ ಹೆಚ್ಚು. |
| 12.3 | ಕೊಳವೆ ಬಾವಿ/ | 1.ಹೌದು 2.ಇಲ್ಲ | 1)5 ರಿಂದ 10. 2) 10 ರಿಂದ 20. 3) 20 ರಿಂದ 30 4) 30ಕ್ಕಿಂತ ಹೆಚ್ಚು. |
| 12.4 | ಸಣ್ಣ ನೀರಿನ ಘಟಕ | 1.ಹೌದು 2.ಇಲ್ಲ | 1)5 ರಿಂದ 10. 2) 10 ರಿಂದ 20. 3) 20 ರಿಂದ 30 4) 30ಕ್ಕಿಂತ ಹೆಚ್ಚು. |
| 12.5 | ಶೌಚಾಲಯ | 1.ಹೌದು 2.ಇಲ್ಲ | 1)5 ರಿಂದ 10. 2)10 ರಿಂದ 20. 3) 20 ರಿಂದ 30 4) 30 ಕ್ಕಿಂತ ಹೆಚ್ಚು. |
| 12.6 | ಸ್ನಾನದ ಕೊಠಡಿ | 1.ಹೌದು 2.ಇಲ್ಲ | 1)5 ರಿಂದ 10. 2)10 ರಿಂದ 20. 3) 20 ರಿಂದ 30 4) 30 ಕ್ಕಿಂತ ಹೆಚ್ಚು. |
| 12.7 | ಉದ್ಯೋಗ | 1.ಹೌದು 2.ಇಲ್ಲ | 1)5 ರಿಂದ 10. 2)10 ರಿಂದ 20. 3)20 ರಿಂದ 30 4) 30 ಕ್ಕಿಂತ ಹೆಚ್ಚು. |
| 12.8 | ಮನೆಗಳಿಗೆ ವಿದ್ಯುತ್ ಸಂಪರ್ಕ | 1.ಹೌದು 2.ಇಲ್ಲ | 1)5 ರಿಂದ 10. 2)10 ರಿಂದ 20. 3) 20 ರಿಂದ 30 4) 30ಕ್ಕಿಂತ ಹೆಚ್ಚು. |
| 12.9 | ರಸ್ತೆ | 1.ಹೌದು 2.ಇಲ್ಲ | 1)5 ರಿಂದ 10. 2)10 ರಿಂದ 20. 3) 20 ರಿಂದ 30 4) 30 ಕ್ಕಿಂತ ಹೆಚ್ಚು. |
| 12.10 | ಮನೆಗಳಿಗೆ ಸೋಲಾರವಿದ್ಯುತ | 1.ಹೌದು 2.ಇಲ್ಲ | 1)5 ರಿಂದ 10. 2)10 ರಿಂದ 20. 3) 20 ರಿಂದ 30 4) 30ಕ್ಕಿಂತ ಹೆಚ್ಚು. |
| 12.11 | ಬೀದಿ ದೀಪ ವ್ಯವಸ್ಥೆ | 1.ಹೌದು 2.ಇಲ್ಲ | 1)5 ರಿಂದ 10. 2)10 ರಿಂದ 20. 3) 20 ರಿಂದ 30 4) 30 ಕ್ಕಿಂತ ಹೆಚ್ಚು. |
| 12.12 | ಉದ್ಯೋಗ ಖಾತ್ರಿ ಕೂಲಿ | 1.ಇದೆ 2.ಇಲ್ಲ | 1) 10 – 20. 2) 20 – 40. 3) 40 – 80 4) 100 ಕ್ಕಿಂತ ಹೆಚ್ಚು. |

13. ತಮ್ಮ ಹಾಡಿ/ಪೋಡು/ಕಾಲೊನಿಗೆ ವಿವಿಧ ಇಲಾಖೆಗಳಿಂದ ದೊರಕಿರುವ ಸಾಮಾಜಿಕ ಭದ್ರತಾ ಸೌಲಭ್ಯಗಳು.

| ಕ್ರ.ಸಂ. | ಯೋಜನೆಗಳ ಹೆಸರು | ದೊರಕಿದೆ/ ಇಲ್ಲ | ಒಟ್ಟು ದೊರಕಿದ ಸಂಖ್ಯೆಗಳು |
|---|---|---|---|
| | | 1 | 2 |
| 13.1 | ವಿಧವಾ ವೇತನ | 1.ದೊರಕಿದೆ 2.ಇಲ್ಲ | 1) 5 –10. 2) 10 –20. 3) 20– 30 4) 30 ಕ್ಕಿಂತ ಹೆಚ್ಚು. |
| 13.2 | ಅಂಗವಿಕಲರ ವೇತನ | 1.ದೊರಕಿದೆ 2.ಇಲ್ಲ | 1) 5 – 10. 2) 10 – 20. 3) 20 – 30 4) 30 ಕ್ಕಿಂತ ಹೆಚ್ಚು. |
| 13.4 | ವೃದ್ಯಾಪ್ಯ ವೇತನ | 1.ದೊರಕಿದೆ 2.ಇಲ್ಲ | 1) 5 – 10. 2) 10 – 20. 3) 20 – 30 4) 30 ಕ್ಕಿಂತ ಹೆಚ್ಚು. |
| 13.5 | ಪಡಿತರ ಚೀಟಿ | 1.ದೊರಕಿದೆ 2.ಇಲ್ಲ | 1) 10–20. 2) 20–40. |

| | | | 3) 40–80 4) 100 ಕ್ಕಿಂತ ಹೆಚ್ಚು. |
|---|---|---|---|
| 13.6 | ಅನ್ನ ಅಂತ್ಯೋದಯ | 1.ದೊರಕಿದೆ 2.ಇಲ್ಲ | 1) 10 – 20. 2) 20 – 40. 3) 40 – 80 4) 100 ಕ್ಕಿಂತ ಹೆಚ್ಚು. |
| 13.7 | ಮತದಾನದ ಗುರುತಿನ ಚೀಟಿ | 1.ದೊರಕಿದೆ 2.ಇಲ್ಲ | 1) 50–100. 2) 100–200. 3) 200–300 4) 300 ಕ್ಕಿಂತ ಹೆಚ್ಚು. |
| 13.8 | ಬ್ಯಾಂಕ್ ಖಾತೆ ಸೌಲಭ್ಯ | 1.ದೊರಕಿದೆ 2.ಇಲ್ಲ | 1) 5 – 10. 2) 10 – 20. 3) 20 – 30 4) 30 ಕ್ಕಿಂತ ಹೆಚ್ಚು. |
| 13.9 | ವಯಸ್ಕರ ಬಸ್ ಪಾಸ್ | 1.ದೊರಕಿದೆ 2.ಇಲ್ಲ | 1) 5 – 10. 2) 10 – 20. 3) 20 – 30 4) 30 ಕ್ಕಿಂತ ಹೆಚ್ಚು. |
| 13.10 | ಆಧಾರ್ ಗುರುತು ಸಂಖ್ಯೆ | 1.ದೊರಕಿದೆ 2.ಇಲ್ಲ | 1) 10–30. 2). 30 –60. 3) 60–100 4) 100 ಕ್ಕಿಂತ ಹೆಚ್ಚು. |
| 13.11 | ಸ್ವ- ಉದ್ಯೋಗ ತರಬೇತಿ | 1.ದೊರಕಿದೆ 2.ಇಲ್ಲ | 1) 5 – 10. 2) 10 – 20. 3) 20 – 30 4) 30 ಕ್ಕಿಂತ ಹೆಚ್ಚು. |
| 13.12 | ಶಿಷ್ಯವೇತನ | 1.ದೊರಕಿದೆ 2.ಇಲ್ಲ | 1) 5ಕ್ಕಿಂತ ಕಡಿಮೆ. 2) 5–10. 3) 10–20 4) 20 ಕ್ಕಿಂತ ಹೆಚ್ಚು. |
| 13.14 | ಯಶಸ್ವಿನಿ | 1.ದೊರಕಿದೆ 2.ಇಲ್ಲ | 1) 5ಕ್ಕಿಂತ ಕಡಿಮೆ. 2) 5 – 10. 3) 10 – 20 4) 20 ಕ್ಕಿಂತ ಹೆಚ್ಚು. |

14. ನಿಮ್ಮ ಹಾಡಿ/ಪೋಡು/ಕಾಲೊನಿ/ಗ್ರಾಮ/ಪುನರ್ವಸತಿ ಕೇಂದ್ರದ ಸದ್ಯದ ಅವಶ್ಯಕತೆ ಯಾವುದು?

| ಕ್ರಸಂ | ಅವಶ್ಯಕತೆಗಳು | 1.ಬೇಕು 2.ಬೇಡ | ವಿವರಗಳು |
|---|---|---|---|
| 14.1 | ಸಾಮಾಜಿಕ ಅರಣ್ಯ | | |
| 14.2 | ಕುಡಿಯುವ ನೀರು | | 1) ಸಣ್ಣ ನೀರಿನ ತೊಟ್ಟಿ.2)ದೊಡ್ಡ ನೀರಿನ ಟ್ಯಾಂಕ್ ಮೂಲಕ. 3) ಕೆರೆ ನೀರು ಬಳಸಲು ಅವಕಾಶ 4)ನದಿ/ತೊರೆ ನೀರು ಬಳಸಲು ಅವಕಾಶ |
| 14.3 | ವಿದ್ಯುತ್ ಸೌಲಭ್ಯ ಹಾಡಿಗೆ | | 1) ಸಂಜೆ 6- 9 ಘಂಟೆವರೆಗೆ ಕೊಟ್ಟರೆ ಸಾಕು 2)ಸಂಜೆ 6- 11 ಘಂಟೆವರೆಗೆ ಕೊಟ್ಟರೆ ಸಾಕು. 3) ದಿನಕ್ಕೆ 6 ಗಂಟೆ 4) ದಿನದ 24 ಘಂಟೆಗಳು ಬೇಕು. |
| 14.4 | ವಿದ್ಯುತ್ ಸೌಲಭ್ಯ ಮನೆಗಳಿಗೆ | | 1) 10 ರಿಂದ 20 ಮನೆಗಳಿಗೆ 2) 20 ರಿಂದ 40 ಮನೆಗಳಿಗೆ 3) 40 ರಿಂದ 60 ಮನೆಗಳಿಗೆ 4) ಹಾಡಿ/ಪೋಡಿನ ಎಲ್ಲಾ ಮನೆಗಳಿಗೆ |
| 14.5 | ನಿವೇಶನಗಳು | | 1) 10 ರಿಂದ 20 ಕುಟುಂಬಗಳಿಗೆ 2) 20 ರಿಂದ 40 ಕುಟುಂಬಗಳಿಗೆ 3) 40 ರಿಂದ 60 ಕುಟುಂಬಗಳಿಗೆ 4) 60 ಕ್ಕಿಂತ ಹೆಚ್ಚು ಕುಟುಂಬಗಳಿಗೆ |
| 14.6 | ಮನೆಗಳು | | 1) 10 ರಿಂದ 20 ಕುಟುಂಬಗಳಿಗೆ 2) 20 ರಿಂದ 40 ಕುಟುಂಬಗಳಿಗೆ 3) 40 ರಿಂದ 60 ಕುಟುಂಬಗಳಿಗೆ 4) 60 ಕ್ಕಿಂತ ಹೆಚ್ಚು ಕುಟುಂಬಗಳಿಗೆ |
| 14.7 | ಶೌಚಾಲಯ | | 1) 10 ರಿಂದ 20 ಕುಟುಂಬಗಳಿಗೆ 2) 20 ರಿಂದ 40 ಕುಟುಂಬಗಳಿಗೆ 3) 40 ರಿಂದ 60 ಕುಟುಂಬಗಳಿಗೆ 4) ಹಾಡಿ/ಪೋಡಿನ ಎಲ್ಲಾ ಮನೆಗಳಿಗೆ |
| 14.8 | ಅಡುಗೆ ಅನಿಲ ಸಂಪರ್ಕ | | 1) 10 ರಿಂದ 20 ಕುಟುಂಬಗಳಿಗೆ 2) 20 ರಿಂದ 40 ಕುಟುಂಬಗಳಿಗೆ 3) 40 ರಿಂದ 60 ಕುಟುಂಬಗಳಿಗೆ 4) ಹಾಡಿ/ಪೋಡಿನ ಎಲ್ಲಾ ಮನೆಗಳಿಗೆ |
| 14.9 | ಬ್ಯಾಂಕ್ ಸಾಲ ಸೌಲಭ್ಯ | | 1) 10 ರಿಂದ 20 ಕುಟುಂಬಗಳಿಗ 2) 20 ರಿಂದ 40 ಕುಟುಂಬಗಳಿಗೆ 3) 40 ರಿಂದ 60 ಕುಟುಂಬಗಳಿಗೆ.4)ಹಾಡಿ/ಪೋಡಿನ ಎಲ್ಲಾ ಕುಟುಂಬಗಳಿಗೆ |

| 14.10 | ಪಡಿತರ ಚೀಟಿ | | 1) 10 ರಿಂದ 20 ಕುಟುಂಬಗಳಿಗೆ 2) 20 ರಿಂದ 40 ಕುಟುಂಬಗಳಿಗೆ<br>3) 40 ರಿಂದ 60 ಕುಟುಂಬಗಳಿಗೆ.4)ಹಾಡಿ/ಪೋಡಿನ ಎಲ್ಲಾ ಕುಟುಂಬಗಳಿಗೆ |
|---|---|---|---|
| 14.11 | ಮತದಾನದ ಗುರುತಿನ ಚೀಟಿ | | 1) 10 ರಿಂದ 20 ಕುಟುಂಬಗಳಿಗೆ 2) 20 ರಿಂದ 40 ಕುಟುಂಬಗಳಿಗೆ<br>3) 40 ರಿಂದ 60 ಕುಟುಂಬಗಳಿಗೆ.4)ಹಾಡಿ/ಪೋಡಿನ ಎಲ್ಲಾ ಕುಟುಂಬಗಳಿಗೆ |
| 14.12 | ಆಧಾರ್ ಗುರುತು ಚೀಟಿ | | 1) 10 ರಿಂದ 20 ಜನರಿಗೆ 2) 20 ರಿಂದ 40 ಜನರಿಗೆ<br>3) 40 ರಿಂದ 60 ಜನರಿಗೆ 4) ಹಾಡಿ/ಪೋಡಿನ ಎಲ್ಲಾ ಜನರಿಗೆ |
| 14.13 | ವಿಧವಾ ವೇತನ | | 1) 1–5 ಜನರಿಗೆ. 2) 5–10 ಜನರಿಗೆ<br>3) 10–20 ಜನರಿಗೆ 4) 20 ಕ್ಕಿಂತ ಹೆಚ್ಚು ಜನರಿಗೆ |
| 14.14 | ಅಂಗವಿಕಲರ ವೇತನ | | 1) 1–5 ಜನರಿಗೆ. 2) 5–10 ಜನರಿಗೆ<br>3) 10–20 ಜನರಿಗೆ 4) 20 ಕ್ಕಿಂತ ಹೆಚ್ಚು ಜನರಿಗೆ |
| 14.15 | ವೃದ್ಯಾಪ್ಯ ವೇತನ | | 1) 1–5 ಜನರಿಗೆ. 2) 5–10 ಜನರಿಗೆ<br>3) 10–20 ಜನರಿಗೆ 4) 20 ಕ್ಕಿಂತ ಹೆಚ್ಚು ಜನರಿಗೆ |
| 14.16 | ಅನ್ನ ಅಂತ್ಯೋದಯ | | 1) 1–5 ಜನರಿಗೆ. 2) 5–10 ಜನರಿಗೆ<br>3) 10–20 ಜನರಿಗೆ 4) 20 ಕ್ಕಿಂತ ಹೆಚ್ಚು ಜನರಿಗೆ |
| 14.17 | ಸ್ವ ಉದ್ಯೋಗ ತರಬೇತಿ | | 1) 1–5 ಜನರಿಗೆ. 2) 5–10 ಜನರಿಗೆ<br>3) 10–20 ಜನರಿಗೆ 4) 20 ಕ್ಕಿಂತ ಹೆಚ್ಚು ಜನರಿಗೆ |
| 14.18 | ಶಿಷ್ಯವೇತನ | | 1) 1–5 ಜನರಿಗೆ. 2) 5–10 ಜನರಿಗೆ<br>3) 10–20 ಜನರಿಗೆ 4) 20 ಕ್ಕಿಂತ ಹೆಚ್ಚು ಜನರಿಗೆ |
| 14.19 | ಬ್ಯಾಂಕ್ ಖಾತೆ ಸೌಲಭ್ಯ | | 1) 10 ರಿಂದ 20 ಜನರಿಗೆ 2) 20 ರಿಂದ 40 ಜನರಿಗೆ<br>3) 40 ರಿಂದ 60 ಜನರಿಗೆ 4) ಹಾಡಿ/ಪೋಡಿನ ಎಲ್ಲಾ ಜನರಿಗೆ |
| 14.20 | ವೃದ್ಯಾಪ್ಯ ಬಸ್ ಪಾಸ್ | | 1) 1–5 ಜನರಿಗೆ. 2) 5–10 ಜನರಿಗೆ<br>3) 10–20 ಜನರಿಗೆ 4) 20 ಕ್ಕಿಂತ ಹೆಚ್ಚು ಜನರಿಗೆ |
| 14.21 | ಅಂಗನವಾಡಿ | | |
| 14.22 | ಪ್ರಾಥಮಿಕ ಶಾಲೆ | | |
| 14.23 | ಮಾಧ್ಯಮಿಕ ಶಾಲೆ | | |
| 14.24 | ಪ್ರೌಢ ಶಾಲೆ | | |
| 14.25 | ಸಾರ್ವಜನಿಕ ಉದ್ಯಾನವನ | | |

ಭಾಗ–ಎರಡು: ಅರಣ್ಯ ಹಕ್ಕುಗಳ ಕಾಯ್ದೆ ಹಾಗೂ ವೈಯಕ್ತಿಕ ಹಕ್ಕು

1. ನಿಮಗೆ ಅರಣ್ಯ ಹಕ್ಕುಗಳ ಕಾಯ್ದೆ ಬಗ್ಗೆ ಮಾಹಿತಿ ಇದೆಯೇ?1)ಹೌದು2)ಇಲ್ಲ

1.1. ಹೌದಾದರೆ ನಿಮಗೆ ಅರಣ್ಯ ಹಕ್ಕುಗಳ ಕಾಯ್ದೆ ಬಗ್ಗೆ ಮಾಹಿತಿ ನೀಡಿದವರು ಯಾರು?

1. ಸ್ವಯಂ ಸೇವಾ ಸಂಸ್ಥೆಗಳು. 2. ಅರಣ್ಯ ಇಲಾಖೆ.3.ಪರಿಶಿಷ್ಟ ಪಂಗಡ ಕಲ್ಯಾಣ ಇಲಾಖೆ.
4.ಊರಿನ ಹಿರಿಯರು/ವಿದ್ಯಾವಂತರು. 5. ಸಮಾಜ ಕಲ್ಯಾಣ ಇಲಾಖೆಯವರು.

1.2. ಹಾಗಾದರೆ ಅರಣ್ಯ ಹಕ್ಕು ಕಾಯ್ದೆ ಎಂದರೇನು?

1.3. ಅರಣ್ಯ ಹಕ್ಕು ಕಾಯ್ದೆಯಿಂದ ಪ್ರಯೋಜನವೇನು?

2. ಅರಣ್ಯ ಹಕ್ಕುಗಳ ಕಾಯ್ದೆ ಅಡಿ ಹಾಡಿ/ಪೋಡು/ಕಾಲೋನಿ/ಪುನರ್ವಸತಿ ಕೇಂದ್ರಕ್ಕೆ ದೊರೆತಿರುವ ವೈಯಕ್ತಿಕ ಭೂಮಿಯ ಹಕ್ಕಿನ ವಿವರ

| | |
|---|---|
| 2.1 | ನಿಮ್ಮ ಹಾಡಿಯಿಂದ ವೈಯಕ್ತಿಕ ಭೂಮಿ ಹಕ್ಕಿಗಾಗಿ ಅರ್ಜಿ ಸಲ್ಲಿಸಿದ್ದೀರಾ? 1) ಹೌದು 2) ಇಲ್ಲ |
| 2.2 | ನಿಮ್ಮ ಹಾಡಿಯಿಂದ ವೈಯಕ್ತಿಕ ಭೂಮಿ ಹಕ್ಕಿಗಾಗಿ ಅರ್ಜಿ ಸಲ್ಲಿಸಿ ಎಷ್ಟು ವರ್ಷವಾಯಿತು. 1)1 ರಿಂದ 2 ವರ್ಷ2) 3 ರಿಂದ 4 ವರ್ಷ. 3) 5 ರಿಂದ 6 ವರ್ಷ 4) 6 ರಿಂದ 10 ವರ್ಷ |
| 2.3 | ನಿಮ್ಮ ಹಾಡಿಯ ಜನರಿಗೆ ವೈಯಕ್ತಿಕ ಭೂಮಿ ಹಕ್ಕು ಮಂಜೂರಾಗಿದೆಯಾ?1) ಹೌದು 2) ಇಲ್ಲ |
| 2.4 | ನಿಮ್ಮ ಹಾಡಿಯ ಜನರಿಗೆ ವೈಯಕ್ತಿಕ ಭೂಮಿ ಹಕ್ಕು ಮಂಜೂರಾಗಿ ಎಷ್ಟು ವರ್ಷವಾಯಿತು 1) 6 ತಿಂಗಳು2) 1 ವರ್ಷ. 3) 2 ರಿಂದ 3 ವರ್ಷ 4) 3 ರಿಂದ 5 ವರ್ಷ |
| 2.5 | ನಿಮ್ಮ ಹಾಡಿ/ಪೋಡಿನಿಂದ ಎಷ್ಟು ಕುಟುಂಬಗಳು ಅರ್ಜಿ ಸಲ್ಲಿಸಿದ್ದೀರಿ 1) 10 ರಿಂದ 20 ಕುಟುಂಬಗಳು. 2) 20 ರಿಂದ 30 ಕುಟುಂಬಗಳು. 3) 30 ರಿಂದ 40 ಕುಟುಂಬಗಳು 4) 40 ರಿಂದ 60 ಕುಟುಂಬಗಳು. 5) ಹಾಡಿ/ಪೋಡಿನ ಎಲ್ಲಾ ಕುಟುಂಬಗಳೂ |
| 2.6 | ಎಷ್ಟು ಕುಟುಂಬಗಳಿಗೆ ಭೂಮಿ ಮಂಜೂರಾಗಿದೆ. 1) 1 ರಿಂದ 5 ಕುಟುಂಬಗಳಿಗೆ. 2) 5 ರಿಂದ 10 ಕುಟುಂಬಗಳಿಗೆ. 3) 10 ರಿಂದ 20 ಕುಟುಂಬಗಳಿಗೆ 4) 20 ರಿಂದ 30 ಕುಟುಂಬಗಳಿಗೆ. 5) ಅರ್ಜಿ ಸಲ್ಲಿಸಿದ ಎಲ್ಲಾ ಕುಟುಂಬಗಳಿಗೂ |
| 2.7 | ನಿಮಗೆ ನೀಡಿರುವ ಭೂಮಿ ಪ್ರಸ್ತುತ ವಾಸಸ್ಥಳದಿಂದ ಎಷ್ಟು ದೂರ ಇದೆ. 1) 1 ರಿಂದ 2 ಕಿ.ಮೀ.2) 2ರಿಂದ4 ಕಿ.ಮೀ.3) 4ರಿಂದ6 ಕಿ.ಮೀ. 4) 6 ಕಿ.ಮೀ. ಗಿಂತ ದೂರ. |
| 2.8 | ಪ್ರತೀ ಕುಟುಂಬಗಳು ಎಷ್ಟು ಭೂಮಿಗೆ ಬೇಡಿಕೆ ಸಲ್ಲಿಸಿದ್ದೀರಿ 1) 1 ರಿಂದ 2 ಎಕರೆ. 2) 2 ರಿಂದ 4 ಎಕರೆ. 3) 4 ರಿಂದ 6 ಎಕರೆ. 4) 6 ರಿಂದ 10 ಎಕರೆ |
| 2.9 | ಪ್ರತೀ ಕುಟುಂಬಗಳಿಗೆ ದೊರೆತಿರುವ ಒಟ್ಟು ಭೂಮಿ 1)1–2ಗುಂಟೆ.2) 2–4ಗುಂಟೆ.3)4–10 ಗುಂಟೆ. 4)10–20ಗುಂಟೆ.5)1–2ಎಕರೆ.6)2-5 ಎಕರೆ |
| 2.10 | ನಿಮಗೆ ಎಷ್ಟು ಭೂಮಿ ಹೊಂದಲು ಅವಕಾಶವಿದೆ 1) 1-2 ಎಕರೆ 2) 2-4 ಎಕರೆ.3) 4-6 ಎಕರೆ 4) 6-10 ಎಕರೆ. 5) ನಾವು ಉಳುಮೆ ಮಾಡುತ್ತಿರುವಷ್ಟು 6) ಗೊತ್ತಿಲ್ಲ |
| 2.11 | ನಿಮ್ಮ ಹಾಡಿ/ಪೋಡಿನ ಜನರಿಗೆ ನೀಡಿರುವ ವೈಯಕ್ತಿಕ ಹಕ್ಕಿನ ಭೂಮಿಗೆ ಯಾರು ಪಹಣಿ ನೀಡಿದ್ದಾರೆ. 1) ಪಹಣಿ ನೀಡಿಲ್ಲ. 2) ಕಂದಾಯ ಇಲಾಖೆ. 3) ಅರಣ್ಯ ಇಲಾಖೆ. 4) ಸಮಾಜ ಕಲ್ಯಾಣ ಇಲಾಖೆ. |
| 2.12 | ನಿಮ್ಮ ಹಾಡಿ/ಪೋಡಿ ನ ಜನರಿಗೆ ನೀಡಿರುವ ವೈಯಕ್ತಿಕ ಹಕ್ಕಿನ ಪತ್ರ ನಿಮ್ಮ ಬಳಿ ಇದೆಯೇ? 1) ಹೌದು 2) ಇಲ್ಲ |
| 2.13 | ನಿಮ್ಮ ಹಾಡಿ/ಪೋಡಿಗೆ ನೀಡಿರುವ ವೈಯಕ್ತಿಕ ಹಕ್ಕಿನ ಪತ್ರ ನಿಮ್ಮ ಬಳಿ ಇಲ್ಲವಾದರೆ ಯಾರ ಬಳಿ ಇದೆ. 1. ಗ್ರಾಮ ಪಂಚಾಯತ್‌ನಲ್ಲಿ. 2. ಹಾಡಿ/ಪೋಡಿನ ಮುಖಂಡನ ಬಳಿ. 3. ವಲಯ ಅರಣ್ಯ ಇಲಾಖೆ ಕಛೇರಿಯಲ್ಲಿ. 4. ಸಮಾಜ ಕಲ್ಯಾಣ ಇಲಾಖೆ. |
| 2.14 | ನಿಮಗೆ ನೀಡಿರುವ ಭೂಮಿ ಸಮತಟ್ಟಾಗಿದೆಯೇ? 1) ಹೌದು 2) ಇಲ್ಲ |
| 2.15 | ನಿಮಗೆ ದೊರೆತಿರುವ ಭೂಮಿ ಫಲವತ್ತಾಗಿದೆಯೇ? 1) ಹೌದು 2) ಇಲ್ಲ |
| 2.16 | ನಿಮಗೆ ನೀಡಿರುವ ಭೂಮಿಗೆ ನೀರಿನ ಸೌಲಭ್ಯ ಇದೆಯೆ? 1) ಹೌದು 2) ಇಲ್ಲ |
| 2.17 | ನಿಮಗೆ ನೀಡಿರುವ ಭೂಮಿ ನಿಮ್ಮ ಇಷ್ಟದ ಬೆಳೆ ಬೆಳೆಯಲು ಏನಾದರೂ ತೊಂದರೆ ಇದೆಯೇ? 1) ಹೌದು 2) ಇಲ್ಲ |
| 2.18 | ನಿಮಗೆ ನೀಡಿರುವ ಭೂಮಿಯಲ್ಲಿ ಕೊಳವೆ ಭಾವಿ ಕೊರೆಸಲು ಅವಕಾಶ ಇದೆಯೇ? 1) ಹೌದು 2) ಇಲ್ಲ |
| 2.19 | ಕೊಳವೆ ಭಾವಿ ಕೊರೆಸಲು ಅವಕಾಶ ಇಲ್ಲವಾದರೆ ಯಾರಿಂದ ಸಮಸ್ಯೆ ಇದೆ. |

